# ಪಂಪ ಭಾರತ ಪ್ರಸಂಗ

**ಸಿ.ಪಿ.ನಾಗರಾಜ**

**ನಾಗು ಸ್ಮಾರಕ ಪ್ರಕಾಶನ**
೭೫, ೫ನೆಯ ಕ್ರಾಸ್, ‘ಎ ‘ ಬ್ಲಾಕ್, ಕ್ರಿಷ್ಣ ಗಾರ್ಡನ್
ಆರ್.ವಿ.ಕಾಲೇಜು ಪೋಸ್ಟ್, ಬೆಂಗಳೂರು–೫೬೦ ೦೫೯

**PAMPA BHARATA PRASANGA**
by C.P.Nagaraja, Published by Nagu Smaraka Prakashana,
75, 5th Cross, 'A' Block, Krishna Garden, R.V.College Post,
Bengaluru-560 059
Mobile: 9986347521

| | | |
|---|---|---|
| First Edition | : | 2023 |
| Page | : | 496 |
| Price | : | **Rs. 550/-** |
| Paper | : | 80 gsm Ns Maplitho |
| Size | : | Demy 1/8 |
| Copies | : | 500 |
| Copy right | : | Author |
| ಪುಟಗಳು | : | 496 |
| ಪ್ರತಿಗಳು | : | 500 |
| ಬೆಲೆ: | : | **ರೂ. 550/-** |
| ಮುಖಪುಟ ವಿನ್ಯಾಸ | : | ವಿಷ್ಣುಕುಮಾರ್ ಎಸ್., 9741221367 |
| ಪುಟ ವಿನ್ಯಾಸ | : | ಕೆ.ಆರ್. ಹರೀಶ್, 8553184584 |

**ಪ್ರತಿಗಳು ದೊರೆಯುತ್ತವೆ**

**ಆರ್.ಸುಧೀಂದ್ರ ಕುಮಾರ್**
# 9, 20ನೆಯ ಮೈನ್, 3ನೆಯ ಕ್ರಾಸ್
ವಿಜಯನಗರ 2ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು-570017
ಮೊ. 8892626269



ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಮುನ್ನುಡಿ

ಗೆಳೆಯರಾದ ಸಿ.ಪಿ.ನಾಗರಾಜ ಅವರಿಗೆ ಎಂದೆಂದೂ ತೀರದ ಹಂಬಲ ಒಂದಿದೆ. ಅದೆಂದರೆ ತಮಗೆ ತಿಳಿದಿದ್ದನ್ನು ಬೇರೆಯವರಿಗೆ ತಿಳಿಸುವುದು; ಜೊತೆಗೆ ಹಾಗೆ ತಿಳಿವನ್ನು ಪಡೆಯಲು ನೆರವಾಗುವ ದಾರಿಗಳನ್ನು ತೆರೆದಿಡುವುದು. ಇದಕ್ಕಾಗಿ ಕಳೆದ ಕೆಲವು ವರುಶಗಳಿಂದ ಎಡೆಬಿಡದೆ ಕೆಲಸ ಮಾಡುತ್ತಿದ್ದಾರೆ. ವಚನಗಳು, ಸರ್ವಜ್ಞನ ತ್ರಿಪದಿಗಳು, ಕುವೆಂಪು ಅವರ ಕವಿತೆಗಳು, ಹಲವರು ಬರೆದ ಬರಹಗಳು–ಇವೆಲ್ಲವನ್ನೂ ತಿಳಿಯಲು ನೆರವಾಗುವಂತೆ ಅವರು ಬರೆದಿದ್ದಾರೆ; ಮಾತನಾಡಿದ್ದಾರೆ. ಅದಕ್ಕಾಗಿ ಅವರ ಹೊತ್ತು ಮತ್ತು ದುಡಿಮೆಯನ್ನು ಮೀಸಲಿಟ್ಟಿದ್ದಾರೆ. ಇದೆಲ್ಲವನ್ನೂ ಮಾಡುವಾಗ ತಾವು ನಂಬಿದ, ಒಪ್ಪುವ ಬದುಕಿನ ನೆಲೆಗಳಿಗೆ ಎರವಾಗದೇ ಇರುವಂತೆ ನೋಡಿಕೊಂಡು ಬಂದಿದ್ದಾರೆ. ಇದು ಅವರು ಹಿಡಿದಿರುವ ನೋಂಪಿ.

ಈಗ ಪಂಪ ಕವಿಯ ವಿಕ್ರಮಾರ್ಜುನ ವಿಜಯ ಎಂಬ ಕೃತಿಯಲ್ಲಿ ಬರುವ ಕೆಲವು ಪ್ರಸಂಗಗಳನ್ನು ಆಯ್ದುಕೊಂಡು ಓದುಗರು ಓದಲು ನೆರವಾಗುವಂತೆ ಬರೆದಿದ್ದಾರೆ. ಇವೆಲ್ಲ ಪ್ರಸಂಗಗಳು ಕೃತಿಯ ಪಾತ್ರಗಳ ನಡುವೆ ನಡೆಯುವ ಮಾತುಕತೆಗಳು. ಹಾಗಾಗಿ ಒಂದು ಬಗೆಯ ನಾಟಕೀಯ ಎನಿಸುವ ನೆಲೆಯಲ್ಲಿ ಇವೆ.

ಪಂಪನ ಈ ಕೃತಿಯು ಕನ್ನಡದ ಕಥನ ಪರಂಪರೆಯ ಚಹರೆಗಳನ್ನು ರೂಪಿಸಿಕೊಟ್ಟಿದೆ. ಆ ಮೊದಲು ಸಂಸ್ಕೃತ ನುಡಿಯಲ್ಲಿ ಇದ್ದ ಮಹಾಕಾವ್ಯಗಳ ಕಥನ ವಿಧಾನ ಶ್ರವ್ಯಮಾನತೆಯನ್ನು ತನ್ನ ಚಹರೆಯನ್ನಾಗಿ ಇರಿಸಿಕೊಂಡಿತ್ತು. ಅಂದರೆ ಆ ಕಥನಗಳು ಕೇಳುವಿಕೆಯನ್ನು ಅವಲಂಬಿಸಿ ರೂಪುಗೊಂಡಿದ್ದವು. ಓದುವವರು ಓದಿ ಹೇಳುವಾಗ, ಕೇಳುವವರಿಗೆ ಕಾವ್ಯಗಳು ತಲುಪುತ್ತಿದ್ದವು.

ಕನ್ನಡದಲ್ಲಿ ಕಥನ ಪರಂಪರೆಯನ್ನು ಕಟ್ಟುವಾಗ ಪಂಪನು ಶ್ರವ್ಯಮಾನತೆಯೊಡನೆ ದೃಶ್ಯಮಾನತೆಯನ್ನು ಸೇರ್ಪಡೆಗೊಳಿಸಿದ್ದಾನೆ. ಅಂದರೆ ಕಿವಿಗೆ ತಲುಪುವ ಜೊತೆಗೆ ಕಣ್ಣಿಗೆ ಕಟ್ಟುವ ಹಾಗೆಯೂ ಇರಬೇಕು ಎಂಬುದೇ ಈ ಚಹರೆಯ ನೆಲೆ.

ಈ ಜೋಡಣೆಗಾಗಿ ನುಡಿಯನ್ನು ಬಳಸುವ ಬಗೆಯಲ್ಲೇ ಪಂಪ ಬದಲಾವಣೆಗಳನ್ನು ಮಾಡಿಕೊಂಡನು. ವಿಕ್ರಮಾರ್ಜುನ ವಿಜಯದ ಮೊದಲ ಪದ್ಯದಲ್ಲೇ ತನ್ನ ಈ ಗುರಿಯನ್ನು ಪಂಪ ತೋರಿಸಿಕೊಟ್ಟಿದ್ದಾನೆ.

**"ಶ್ರೀಯನ್ ಅರಾತಿಸಾಧನ ಪಯೋನಿಧಿಯೊಳ್ ಪಡೆದುಮ್ ಧರಿತ್ರಿಯನ್ ಜೀಯೆನೆ ಬೇಡಿಕೊಳ್ಳದೆ"**

ಎಂಬ ಸಾಲಿನಲ್ಲಿ 'ಜೀಯೆನೆ–ಅಯ್ಯಾ ಎಂದು ಬೇಡುವವನ ದೇಹ ಚರ್ಯೆ–ಎಂಬ ಪದ' ಬೇಡುವವನ ನಿಲುವನ್ನು ನಾಟ್ಯೀಕರಿಸುತ್ತದೆ. (ನೆಲವನ್ನು ಬೇಡಿ ಪಡೆದುಕೊಂಡು ಪಡೆದ ವಾಮನನಿಗಿಂತ ಹಾಗೆ ಬೇಡದೆ ತನ್ನ ಪರಾಕ್ರಮದಿಂದ ಪಡೆದ ಉದಾತ್ತ ನಾರಾಯಣನಾದ ಅರಿಕೇಸರಿಯೇ ಮಿಗಿಲು ಎಂದು ಹೇಳುವ ಗುರಿಯೂ ಇದೆ.) ಇಡೀ ಕಾವ್ಯ ತನ್ನ ಕಥನ ವಿಧಾನದಲ್ಲೇ ಹೀಗೆ ತನ್ನೊಳಗೆ ನಾಟ್ಯಮಾನತೆಯನ್ನು ಅಳವಡಿಸಿಕೊಂಡಿದೆ.

ಸಿ.ಪಿ.ನಾಗರಾಜ ಅವರು ಅಂತಹ ಪ್ರಸಂಗಗಳನ್ನು ಹೊರತೆಗೆದು ಬಿಡಿಬಿಡಿಯಾಗಿ ನಿರೂಪಿಸುವ ಮೂಲಕ ಪಂಪನ ಕೃತಿಯಲ್ಲಿ ಅಡಗಿದ್ದ ಈ ಚಹರೆಯನ್ನು ಹೊರಗಿರಿಸಿದ್ದಾರೆ. ಹೀಗೆ ಮಾಡುವುದು ತಾಳ್ಮೆ ಮತ್ತು ಅಧ್ಯಯನ ಶೀಲತೆಯನ್ನು ಬಯಸುತ್ತದೆ. ಈ ಎರಡೂ ಗುಣಗಳು ನಾಗರಾಜ ಅವರಲ್ಲಿ ಧಾರಾಳವಾಗಿವೆ. ಹೀಗೆ ಮರು ನಿರೂಪಿಸುವ ಮೂಲಕ ಕನ್ನಡ ಓದುಗರಿಗೆ ಪಂಪನ ಕೃತಿಯಲ್ಲಿ ಇದ್ದ ಕಣ್ಣಿಗೆ ಕಟ್ಟುವಂತೆ ಬಣ್ಣಿಸುವ ಬಗೆಯನ್ನು ಪರಿಚಯಿಸುತ್ತಿದ್ದಾರೆ. ಇದು ಹೊಸ ತಲೆಮಾರಿನ ಓದುಗರಿಗೆ ಪಂಪನನ್ನು ಹೆಚ್ಚು ಹತ್ತಿರಕ್ಕೆ ಒಯ್ಯಲು ನೆರವಾಗುತ್ತದೆ ಎಂದು ನಾನು ತಿಳಿದಿದ್ದೇನೆ. ಈ ಕಾರ್ಯವನ್ನು ಕೈಗೆತ್ತಿಕೊಂಡು ಮುಗಿಸಿರುವ ನಾಗರಾಜ ಅವರನ್ನು ಅಭಿನಂದಿಸುತ್ತೇನೆ.

**ಕೆ.ವಿ.ನಾರಾಯಣ**

ಬೆಂಗಳೂರು

# ನನ್ನ ನುಡಿ

ಗುರು ಸಮಾನರಾದ ಡಿ.ಎಲ್.ನರಸಿಂಹಾಚಾರ್ ಅವರು ರಚಿಸಿದ 'ಪಂಪ ಭಾರತ ದೀಪಿಕೆ' ಮತ್ತು ಎಲ್.ಬಸವರಾಜು ಅವರು ರಚಿಸಿದ 'ಸರಳ ಪಂಪ ಭಾರತ' ಹೊತ್ತಿಗೆಗಳ ಓದಿನಿಂದ ಪ್ರೇರಣೆಯನ್ನು ಪಡೆದು 'ಪಂಪ ಭಾರತ ಪ್ರಸಂಗ' ಎಂಬ ಈ ಹೊತ್ತಿಗೆಯನ್ನು ರಚಿಸಿದ್ದೇನೆ. ಪದಗಳ ವಿಂಗಡಣೆ ಮತ್ತು ಪದಗಳನ್ನು ಮಾತಿನ ರೂಪದಲ್ಲಿ ಜೋಡಿಸುವಾಗ ಪಂಪ ಭಾರತ ದೀಪಿಕೆಯಲ್ಲಿನ ವ್ಯಾಖ್ಯಾನವನ್ನು ಅನುಸರಿಸಿದ್ದೇನೆ. ಆದ್ದರಿಂದ ನಾನು ಜೋಡಿಸಿ ಸಿದ್ಧಪಡಿಸಿರುವ 'ಪಂಪ ಭಾರತ ಪ್ರಸಂಗ' ಹೊತ್ತಿಗೆಯ ಶ್ರೇಯಸ್ಸು ಸಂಪೂರ್ಣವಾಗಿ ಡಿ.ಎಲ್. ನರಸಿಂಹಾಚಾರ್ ಅವರ ಪಂಪ ಭಾರತ ದೀಪಿಕೆಗೆ ಸಲ್ಲುತ್ತದೆ. ರಳಯುಕ್ತವಾಗಿದ್ದ (ಉದಾ:ಪೊಱಲನ್) ಪದಗಳನ್ನು ಕುಳಯುಕ್ತವಾಗಿ (ಉದಾ: ಪೊಳಲನ್) ಮಾಡಿಕೊಂಡಿದ್ದೇನೆ.

ಪದ್ಯ ಮತ್ತು ಗದ್ಯದಿಂದ ಕೂಡಿದ 'ವಿಕ್ರಮಾರ್ಜುನ ವಿಜಯ' ಚಂಪೂ ಕಾವ್ಯದಲ್ಲಿ ಪಾತ್ರಗಳ ಮಾತುಕತೆಯಿಂದ ಕೂಡಿರುವ ಪ್ರಸಂಗಗಳನ್ನು ಆಯ್ದು ಕೊಂಡು, ಅವನ್ನು ನಾಟಕ ರೂಪಕ್ಕೆ ಅಳವಡಿಸಬೇಕೆಂಬ ಆಸೆಯಾಯಿತು. ಕೆಲವು ಪ್ರಸಂಗಗಳನ್ನು ಆಯ್ಕೆ ಮಾಡಿಕೊಂಡು ನಾಟಕ ರೂಪಕ್ಕೆ ಅಳವಡಿಸಿ ಗುರುಗಳಾದ ಕೆ.ವಿ.ನಾರಾಯಣ ಅವರಿಗೆ ತೋರಿಸಿದೆ. ಪಂಪ ಭಾರತವನ್ನು ಓದಲು ಹೊಸ ತಲೆಮಾರಿನ ಓದುಗರಿಗೆ ಈ ಬಗೆಯ ಬರಹ ನೆರವಾಗಬಹುದೆಂದು ಹೇಳಿ, ನನ್ನ ಬರಹದಲ್ಲಿದ್ದ ಅರೆಕೊರೆಗಳನ್ನು ಸರಿಪಡಿಸಿ ನನ್ನ ಬರವಣಿಗೆಗೆ ಮಾರ್ಗದರ್ಶನವನ್ನು ನೀಡಿದರು.

ನನ್ನ ಗುರುಹಿರಿಯರು, ಗೆಳೆಯರು ಮತ್ತು ನನ್ನ ಬರಹಗಳ ಮೊದಲ ಓದುಗಳಾದ ನನ್ನ ಹೆಂಡತಿ ಗಾಯತ್ರಿ ಈ ಬರಹದ ಕರಡು ಪ್ರತಿಯನ್ನು ಓದಿ

ಉತ್ತೇಜನದ ನುಡಿಗಳನ್ನಾಡಿದ್ದಾರೆ. ಇವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಪಂಪ ಭಾರತವನ್ನು ಚೆನ್ನಾಗಿ ಓದಿ ಗ್ರಹಿಸಿಕೊಳ್ಳಲು ನೆರವಾಗುವಂತಹ ಹೊತ್ತಿಗೆಗಳನ್ನು ರಚಿಸಿರುವ ಗುರು ಸಮಾನರಾದ ಡಿ.ಎಲ್.ನರಸಿಂಹಾಚಾರ್, ಅನಂತರಂಗಾಚಾರ್, ಎಲ್.ಬಸವರಾಜು, ಆರ್.ಎಲ್.ಅನಂತರಾಮಯ್ಯ ಮತ್ತು ಶಿವರಾಮಯ್ಯ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

'ಪಂಪ ಭಾರತ ಪ್ರಸಂಗ' ಹೊತ್ತಿಗೆಯ ರಚನೆಗೆ ಮಾರ್ಗದರ್ಶನ ನೀಡುವುದರ ಜೊತೆಗೆ ಮುನ್ನುಡಿಯನ್ನು ಬರೆದು ನನ್ನೆಲ್ಲಾ ಓದು ಬರಹಕ್ಕೆ ನಿರಂತರವಾಗಿ ಉತ್ತೇಜನವನ್ನು ನೀಡುತ್ತಿರುವ ಗುರುಗಳಾದ ಕೆ.ವಿ. ನಾರಾಯಣ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ಸಿ.ಪಿ.ನಾಗರಾಜ**

ಬೆಂಗಳೂರು

# ಪಂಪ

**ಕಾಲ** : ಕ್ರಿ.ಶ. ೯೦೨

**ತಾಯಿ** : ಅಬ್ಬಣಬ್ಬೆ
ಅಣ್ಣಿಗೇರಿ, ನವಲುಗುಂದ ತಾಲ್ಲೂಕು.
ಧಾರವಾಡ ಜಿಲ್ಲೆ, ಕರ್ನಾಟಕ ರಾಜ್ಯ.

**ತಂದೆ** : ಭೀಮಪಯ್ಯ
ವೆಂಗಿಪಳು, ವೆಂಗಿಮಂಡಲ.
ಈಗ ಇದು ಆಂಧ್ರಪ್ರದೇಶಕ್ಕೆ ಸೇರಿದೆ.

**ಕಸುಬು** : ಕವಿ ಮತ್ತು ಕಲಿ
ಚಾಳುಕ್ಯ ಎರಡನೆಯ ಅರಿಕೇಸರಿಯ ಒಡ್ಡೋಲಗದಲ್ಲಿ ಕವಿ.

**ರಚಿಸಿದ ಕಾವ್ಯಗಳು**
೧. ಆದಿ ಪುರಾಣ
೨. ವಿಕ್ರಮಾರ್ಜುನ ವಿಜಯ / ಪಂಪ ಭಾರತ

# ಪಂಪ ಭಾರತವನ್ನು ಓದುವುದಕ್ಕೆ ನೆರವಾದ ಪುಸ್ತಕಗಳು

೧. ಡಿ.ಎಲ್.ನರಸಿಂಹಾಚಾರ್
**ಪಂಪ ಭಾರತ ದೀಪಿಕೆ**
(ಪ್ರಥಮ ಮುದ್ರಣ:೧೯೭೧ )
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨. ಆರ್.ಎಲ್.ಅನಂತರಾಮಯ್ಯ
**ಪಂಪ ಭಾರತ ಕಥಾಲೋಕ**
(ಪ್ರಥಮ ಮುದ್ರಣ:೧೯೭೧ )
ಡಿ.ವಿ.ಕೆ.ಪ್ರಕಾಶನ, ಮೈಸೂರು.

೩. ಎಲ್.ಬಸವರಾಜು
**ಸರಳ ಪಂಪ ಭಾರತ**
(ಪ್ರಥಮ ಮುದ್ರಣ:೧೯೯೯ )
ಗೀತಾ ಬುಕ್ ಹೌಸ್, ಮೈಸೂರು.

೪. ಶಿವರಾಮಯ್ಯ
**ಪಂಪ ಭಾರತ ಸಂಪುಟ ೧ ಮತ್ತು ೨**
(ಪ್ರಥಮ ಮುದ್ರಣ:೨೦೧೮ )
ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು.

೫. ಎನ್.ಅನಂತರಂಗಾಚಾರ್
**ಪಂಪ ಮಹಾಕವಿ ವಿರಚಿತ ಪಂಪ ಭಾರತಂ ಗದ್ಯಾನುವಾದ**
(ಮರು ಮುದ್ರಣ: ೨೦೧೯)
ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ,
ಚಾಮರಾಜಪೇಟೆ, ಬೆಂಗಳೂರು

# ಪರಿವಿಡಿ

## ಪ್ರಥಮ ಆಶ್ವಾಸ



## ದ್ವಿತೀಯ ಆಶ್ವಾಸ

## ತೃತೀಯ ಆಶ್ವಾಸ



## ಚತುರ್ಥ ಆಶ್ವಾಸ



## ಪಂಚಮ ಆಶ್ವಾಸ



## ಷಷ್ಠ ಆಶ್ವಾಸ

## ಸಪ್ತಮ ಆಶ್ವಾಸ



## ಅಷ್ಟಮ ಆಶ್ವಾಸ



## ನವಮ ಆಶ್ವಾಸ

## ದಶಮ ಆಶ್ವಾಸ



## ಏಕದಶ ಆಶ್ವಾಸ

## ದ್ವಾದಶ ಆಶ್ವಾಸ



## ತ್ರಯೋದಶ ಆಶ್ವಾಸ

**ಚತುರ್ದಶ ಆಶ್ವಾಸ**

# ೧. ಮತ್ಸ್ಯಗಂಧಿ ಪ್ರಸಂಗ

(೬೮ ನೆಯ ಗದ್ಯದಿಂದ ೭೩ ನೆಯ ಪದ್ಯ)

## ಪಾತ್ರಗಳು

**ಪರಾಶರ ಮುನಿ:** ಬ್ರಹ್ಮದೇವನ ಮೊಮ್ಮಗ.

**ಮತ್ಸ್ಯಗಂಧಿ:** ದಾಶರಾಜನ ಸಾಕು ಮಗಳು. ಯೋಜನಗಂಧಿ ಮತ್ತು ಸತ್ಯವತಿ ಎಂಬ ಮತ್ತೆರಡು ಹೆಸರುಗಳು ಈಕೆಗೆ ಇದ್ದವು.

**ವ್ಯಾಸ :** ಮತ್ಸ್ಯಗಂಧಿ ಮತ್ತು ಪರಾಶರ ಮುನಿಯ ಮಗ.

**ಶಂತನು :** ಹಸ್ತಿನಾವತಿಯಲ್ಲಿ ನೆಲೆಸಿದ್ದ ಕುರುವಂಶದ ರಾಜ. ಗಂಗಾದೇವಿ ಮತ್ತು ಸತ್ಯವತಿ ಎಂಬುವರು ಈತನ ಇಬ್ಬರು ಹೆಂಡತಿಯರು.

**ದಾಶರಾಜ :** ಯಮುನಾ ನದಿ ತೀರದಲ್ಲಿ ನೆಲೆಸಿದ್ದ ಬೆಸ್ತರ ಸಮುದಾಯದ ಒಡೆಯ. ಮೀನು ಹಿಡಿಯುವುದು ಮತ್ತು ದೋಣಿಯನ್ನು ನಡೆಸುವುದು ಬೆಸ್ತ ಸಮುದಾಯದ ಕಸುಬಾಗಿತ್ತು.

**ಗಾಂಗೇಯ :** ಶಂತನು ಮತ್ತು ಗಂಗಾದೇವಿಯ ಮಗ.

# ಮತ್ಸ್ಯಗಂಧಿ ಪ್ರಸಂಗ

ಒರ್ಮೆ ಬ್ರಹ್ಮರ ಮೊಮ್ಮನಪ್ಪ ವೃದ್ಧ ಪರಾಶರ ಮುನೀಂದ್ರನ್ ಉತ್ತರಾಪಥಕ್ಕೆ ಪೋಗುತ್ತುಮ್ ಬಂದು, ತೊಱೆಯ ತಡಿಯೊಳ್ ಓಡಮನ್ ನಡೆಯಿಸುವ ಮತ್ಸ್ಯಗಂಧಿಯನ್ ಕಂಡು....

**ಪರಾಶರ:** ಎಮ್ಮನ್ ಈ ತೊಱೆಯಮ್ ಪಾಯಿಸು.

**ಮತ್ಸ್ಯಗಂಧಿ:** ಸಾಸಿರ್ವರ್ ಏಱಿದೊಡಲ್ಲದೆ ಈ ಓಡಮ್ ನಡೆಯದು.

**ಪರಾಶರ:** ಅನಿಬರ ಬಿಣ್ಪುಮ್ ಆಮ್ ಅಪ್ಪೆಮ್ ಏಱಿಸು.

**ಮತ್ಸ್ಯಗಂಧಿ:** ಅಂತೆ ಗೆಯ್ವೆನ್.

(ಎಂದು ಓಡಮ್ ಏಱಿಸಿ ನಡೆಯಿಸುವಲ್ಲಿ, ಮುನೀಂದ್ರನ್ ದಿವ್ಯ ಕನ್ಯೆಯನ್ ಅಳ್ಕರ್ತು ನೋಡಿ, ಮನದೊಳ್ ಸೋಲ್ತು, ಆಕೆಯ ಒಡಲ ಈ ದುರ್ಗಂಧ ಪೋಪಂತೆ ಯೋಜನ ಗಂಧಿತ್ವಮನ್ ಇತ್ತು, ಮಂಜನ್ ಕಾಂಡಪಟದಂತೆ ಇರ್ಪನ್ನೆಗಮ್ ಮಾಡಿ, ಅಲಂಪು ಅಳ್ಕಱಿನ್ ಈಯೆ ಕೂಡುವ ಎಡೆಯೊಳ್ ಮಹಾ ಮುನಿಪನ್ ಜ್ಞಾನ ಸ್ವರೂಪನ್ ಪುಟ್ಟಿದನ್. ಅಂತು ದಿವ್ಯಮುನಿಗಳ್ಗೆ ಏಗೆಯ್ದೊಡಂ ತೀರದೇ...

ಅಂತು ನೀಲಾಂಬುದ ಶ್ಯಾಮನುಮ್, ಕನಕ ಪಿಂಗಳ ಜಟಾಬಂಧ ಕಳಾಪನುಮ್, ದಂಡ ಕಪಾಳಹಸ್ತನುಮ್, ಕೃಷ್ಣಮೃಗ ತ್ವಕ್ಪರಿಧಾನನುಮ್ ಆಗಿ ವ್ಯಾಸಭಟ್ಟಾರಕನ್ ಪುಟ್ಟುವುದುಮ್, ಪರಾಶರನ್ ಸತ್ಯವತಿಗೆ ಪುನಃ ಕನ್ಯಾಭಾವಮನ್ ದಯೆಗೆಯ್ದು ಆತನನ್ ಒಡಗೊಂಡು ಪೋದನ್.

ಇತ್ತಲ್ ಒರ್ಮೆ ಶಂತನು ಮೃಗಯಾವ್ಯಾಜದಿನ್ ತೊಳಲ್ತರ್ಪನ್,

ತನ್ಮೃಗಶಾಬಾಕ್ಷಿಯ ಕಂಪು ಪಳಂಚಲ್ಕೆ ತಟ್ಟಿ, ಮಧುಪಂಬೋಲ್ ಸೋಲ್ತು ಕಂಡು ಒಲ್ದು, ನಲ್ಮೆಗೆ ದಿಬ್ಯಮ್ ಪಿಡಿವಂತೆವೋಲ್ ಪಿಡಿದು...)

**ಶಂತನು:** ನೀನ್ ಬಾ ಪೋಪಮ್.

(ಎಂದಂಗೆ ತತ್ಕನ್ಯಕೆ ನಾಣ್ಚಿ... ಮೆಲ್ಲಗೆ...)

**ಸತ್ಯವತಿ:** ಬೇಡುವೊಡೆ ನೀವ್ ಎಮ್ಮಯ್ಯನನ್ ಬೇಡಿರೇ.

(ಎಂಬುದುಮ್, ಶಂತನು ಪೊಳಲ್ಗೆ ಮಗುಳ್ದು ವಂದು ಅವರಯ್ಯನಪ್ಪ ದಾಶರಾಜನಲ್ಲಿಗೆ ಕೂಸನ್ ಬೇಡೆ ಪೆರ್ಗಡೆಗಳನ್ ಅಟ್ಟಿದೊಡೆ...)

**ದಾಶರಾಜ:** ದೊರೆಯ ಪಿರಿಯ ಮಗನುಮ್ ಗಾಂಗೇಯನ್ ಕ್ರಮ ಕ್ರಮಾರ್ಹನುಮ್ ಇರ್ದಂತೆ ಎನ್ನ ಮಗಳನ್ ಕುಡೆವು. ಎಮ್ಮ ಮಗಳ್ಗೆ ಪುಟ್ಟಿದಾತನ್ ಪಿರಿಯ ಮಗನುಮ್ ಕ್ರಮಕ್ಕೆ ಅರ್ಹನುಮ್ ರಾಜ್ಯಕ್ಕೆ ಒಡೆಯನುಮ್ ಅಪ್ಪೊಡೆ ಕುಡುವೆಮ್.

(ಎನೆ ತದ್ವೃತ್ತಾಂತಮನ್ ಮಂತ್ರಿಗಳಿನ್ ಶಂತನು ಕೇಳ್ದು...)

**ಶಂತನು:** (ತನ್ನ ಮನದಲ್ಲಿ ಈ ರೀತಿ ಆಲೋಚಿಸುತ್ತಾನೆ.)

"ಕ್ರಮಮಮ್ ವಿಕ್ರಮದಿಂದೆ ತಾಳ್ದುವ ಮಗನ್ ಗಾಂಗೇಯನ್ ಇರ್ದಂತೆ... ನೋಡ... ಮರುಳ್ ಶಂತನು ತನ್ನದೊಂದು ಸವಿಗಮ್ ಸೋಲಕ್ಕಮ್ ನಿಜಕ್ರಮಮನ್ ತನ್ನಯ ಬೇಟದಾಕೆಯ ಮಗಂಗೆ ಇತ್ತನ್" ಎಂಬ ಒಂದು ಅಪಖ್ಯಾತಿ ಲೋಕಮನ್ ಆವರ್ತಿಸೆ ಬಳ್ದೊಡೆ, ಎನ್ನ ಕುಲಮುಮ್ ತಕ್ಕೂರ್ಮೆಯುಮ್ ಮಾಸದೇ...

(ಎಂದು ತನ್ನ ನಾಣ್ಗಾಪನೆ ಬಗೆದು, ಅತನು ಪರಿತಾಪಿತ ಶರೀರನುಮಾಗಿ ಶಂತನು ಕರಂಗಿ ಎರ್ದೆಗಿಡೆ, ತದ್ವೃತ್ತಾಂತಮೆಲ್ಲಮನ್ ಗಾಂಗೇಯನ್ ಅಱಿದು...)

**ಗಾಂಗೇಯ:** (ತನ್ನ ಮನದಲ್ಲಿ ಈ ರೀತಿ ಆಲೋಚಿಸುತ್ತಾನೆ.)

ಎನ್ನಯ ದೂಸಱಿನ್ ನೃಪತಿ ಬೇಡಿದುದನ್ ಕುಡಲೊಲ್ಲದೆ ಅಂಗಜೋತ್ಪನ್ನ ವಿಮೋಹದಿಂದೆ ಅಳಿದಪನ್. ಪತಿ ಸತ್ತೊಡೆ ಸತ್ತ

ಪಾಪಮ್ ಎನ್ನನ್ ನರಕಂಗಳೊಳ್ ತಡೆಯದೆ ಅಳ್ದುಗುಮ್. ಏವುದು ರಾಜ್ಯಲಕ್ಷ್ಮಿ... ಪೋ... ತನ್ನಯ ತಂದೆ ಎಂದುದನೆ ಕೊಟ್ಟು ಇಂದೆ ವಿವಾಹಮನ್ ಮಾಡುವೆನ್.

(ಎಂದು ನಿಶ್ಚಯಿಸಿ ಗಾಂಗೇಯನ್ ದಾಶರಾಜನಲ್ಲಿಗೆ ವಂದು...)

**ಗಾಂಗೇಯ:** ನೀಡಿರದೆ ಈ ನಿಜ ತನೂಜೆಯನ್ ಈವುದು. ಈ ವಧುಗೆ ಆದ ಪುತ್ರರೊಳ್ ರಾಜ್ಯಲಕ್ಷ್ಮಿ ಕೂಡುಗೆ. ಅದು ಅಂತು ಎನಗೆ ಮೊಱೆಯಲ್ತು. ಪೆಂಡಿರ್ ಎಂಬರೊಳ್ ಇಂದು ಮೊದಲಾಗಿರೆ ಕೂಡುವನಲ್ಲೆನ್, ನಿಕ್ಕುವಮ್.

(ಎಂದು ಆತನ ಮನದ ತೊಡರ್ಪನ್ ಪಿಂಗೆ ನುಡಿದು, ರಾಗದಿಮ್ ನದೀಸುತನ್ ಸತ್ಯವತಿಯನ್ ಸತಿಯನ್ ಉಯ್ದು ಪತಿಯೊಳ್ ಕೂಡಿದನ್.)



# ೨. ಅಂಬೆ ಪ್ರಸಂಗ

(೭೩ ನೆಯ ಗದ್ಯದಿಂದ ೮೦ ನೆಯ ಗದ್ಯ)

## ಪಾತ್ರಗಳು

**ಅಂಬೆ:** ಕಾಶಿರಾಜನ ಹಿರಿಯ ಮಗಳು.

ಕಾಶಿರಾಜನಿಗೆ ಅಂಬೆ–ಅಂಬಿಕೆ–ಅಂಬಾಲೆ ಎಂಬ ಹೆಸರಿನ ಮೂವರು ಹೆಣ್ಣು ಮಕ್ಕಳಿದ್ದರು.

**ಶಂತನು:** ಹಸ್ತಿನಾವತಿಯ ರಾಜ.

**ಸತ್ಯವತಿ:** ರಾಣಿ ಶಂತನು ರಾಜನ ಹೆಂಡತಿ.

**ಚಿತ್ರಾಂಗದ ಮತ್ತು ವಿಚಿತ್ರವೀರ್ಯ:** ಶಂತನು ಮತ್ತು ಸತ್ಯವತಿಯ ಇಬ್ಬರು ಗಂಡು ಮಕ್ಕಳು.

**ಗಾಂಗೇಯ:** ಶಂತನು ಮತ್ತು ಗಂಗಾದೇವಿಯ ಮಗ.

**ಸಾಲ್ವಲ:** ಅಂಬೆಯನ್ನು ಮದುವೆಯಾಗಲು ಬಯಸಿ ಅವಳಿಗೆ ಚಿಕ್ಕಂದಿನಲ್ಲಿ ಉಂಗುರವನ್ನು ತೊಡಿಸಿದ್ದ ಒಬ್ಬ ರಾಜಕುಮಾರ.

**ಪರಶುರಾಮ:** ಗಾಂಗೇಯನ ವಿದ್ಯಾಗುರು.

# ಅಂಬೆ ಪ್ರಸಂಗ

ಶಂತನುವುಮ್ ಸತ್ಯವತಿಯುಮ್ ಅನ್ಯೋನ್ಯ ಆಸಕ್ತಚಿತ್ತರಾಗಿ ಕೆಲವು ಕಾಲಮ್ ಇರ್ಪನ್ನೆಗಮ್; ಅವರ ಬೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳ್ ಪುಟ್ಟಿ ಮಹಾಪ್ರಚಂಡರುಮ್ ಪ್ರತಾಪಿಗಳುಮ್ ಆಗಿ ಬಳೆಯುತ್ತ ಇರ್ಪನ್ನೆಗಮ್;

ಶಂತನು ಪರಲೋಕ ಪ್ರಾಪ್ತನ್ ಆದೊಡೆ, ಗಾಂಗೇಯನ್ ತದುಚಿತ ಪರಲೋಕ ಕ್ರಿಯೆಗಳನ್ ಮಾಡಿ, ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕೆ ಅಧಿಷ್ಠಾನಮ್ ಕಟ್ಟುವಂತೆ ಚಿತ್ರಾಂಗದಂಗೆ ಪಟ್ಟಮನ್ ಕಟ್ಟಿ, ರಾಜ್ಯಮ್ ಗೆಯಿಸುತ್ತುಮ್ ಇರ್ಪನ್ನೆಗಮ್;

ಒರ್ವ ಗಂಧರ್ವನೊಳೆ ದ್ವಂದ್ವಯುದ್ಧಮಮ್ ಪೊಣರ್ಚೆ, ಚಿತ್ರಾಂಗದನ್ ಕುರುಕ್ಷೇತ್ರಮನ್ ಕಳಮ್ ಪೇಳ್ದು ಕಾದಿ ಸತ್ತೊಡೆ, ಗಾಂಗೇಯನ್ ವಿಚಿತ್ರ ವೀರ್ಯನನ್ ಧರಾಭಾರ ಧುರಂಧರನನ್ ಮಾಡಿ, ಸಕಲ ಕ್ಷತ್ರಿಯ ಮೋಹದಿನ್ ನಿಜಭುಜ ಪ್ರಾರಂಭದಿನ್ ಪೋಗಿ, ಕಾಶಿರಾಜಸುತರೊಳ್ ತಾಗಿ ಕಾದಿ ಕೆಲರ್ ನೊಂದೊಡೆ, ತನ್ನ ಅಂಕದ ಒಂದು ಉಗ್ರಸಾಯಕದಿನ್ ನಾಯಕರನ್ ಪಡಲ್ವಡಿಸುತುಮ್, ತಾನ್ ಅಂಬೆ ಅಂಬಿಕೆ ಅಂಬಾಲೆಯರ್ ಎಂಬ ಬಾಲೆಯರನ್ ಅಂದು ತಂದನ್. ಭೀಷ್ಮನ್ ಏನ್ ಯಶೋಭಾಗಿಯೋ. ಅಂತು ತಂದು ತನ್ನ ತಮ್ಮನ್ ವಿಚಿತ್ರವೀರ್ಯಂಗೆ ಆ ಮೂವರ್ ಕನ್ನೆಯರನ್ ಪಾಣಿಗ್ರಹಣಮ್ ಗೆಯ್ವಾಗಳ್ ಎಲ್ಲರಿನ್ ಪಿರಿಯಾಕೆ...

**ಅಂಬೆ:** ನಿನ್ನನ್ ಅಲ್ಲದೆ ಪೆಱರನ್ ಒಲ್ಲೆನ್.

(ಎಂದು ಇರ್ದೊಡೆ, ಮತ್ತಿನಿರ್ವರುಮನ್ ಮದುವೆಯನ್ ಮಾಡಿ, ಗಾಂಗೇಯನ್ ಅಂಬೆಯನ್ ಇಂತು ಎಂದನ್...)

**ಗಾಂಗೇಯ:** ಅತ್ತ ಸುರೇಶ್ವರ ಆವಸಥಮ್... ಇತ್ತ ಮಹೀತಳಮ್... ಉತ್ತ ಪನ್ನಗೋದಾತ್ತ ಸಮಸ್ತ ಲೋಕಮ್ ಅಱಿದಂತಿರೆ ಪೂಣ್ದ ಎನಗೆ, ಅಂಗಜೋತ್ಪತ್ತಿ ಸುಖಕ್ಕೆ ಸೋಲಲ್ ಆಗದು. ಪುರುಷವ್ರತಮ್ ಅಳಿಗುಮ್. ಈಗಳ್ ಅಬ್ಬೆಯೆಂದು, ಅತ್ತಿಗೆಯೆಂಬ ಮಾತನ್ ಪಂಕಜಾನನೇ, ಏನ್ ಎನಗೆ ಎನಲ್ ಅಕ್ಕುಮೊ.

(ಎಂದು ನುಡಿದ ಗಾಂಗೇಯನ ನುಡಿಯೊಳ್ ಅವಸರಮನ್, ಪಸರಮನ್ ಪಡೆಯದೆ ತನಗೆ ಕಿಱಿಯಂದು ಉಂಗುರವಿಟ್ಟ ಸಾಲ್ವಲನೆಂಬ ಅರಸನಲ್ಲಿಗೆ ಪೋಗಿ...)

**ಅಂಬೆ:** ನೀನ್ ಎನ್ನನ್ ಕೈಕೊಳವೇಳ್ಕುಮ್.

(ಎಂದೊಡೆ ಆತನ್ ಇಂತು ಎಂದನ್.)

**ಸಾಲ್ವಲ:** ಬಂಡಣದೊಳ್ ಎನ್ನನ್ ಓಡಿಸಿ ನಿನ್ನನ್ ಆ ಸರಿತ್ಸುತನ್ ಕೊಂಡುಯ್ದನ್. ಅದಱಿನ್ ಆನುಮ್ ಪೆಂಡತಿಯೆನ್ ಆದೆನ್. ಅಬಲೇ... ಪೆಂಡಿರ್ ಪೆಂಡಿರೊಳ್ ಅದೆಂತು ಬೆರಸುವರ್.

(ಎಂದು ಸಾಲ್ವಲನ್ ಪರಿಭವದೊಳ್ ಆದ ತನ್ನ ಸಿಗ್ಗನ್ ಸಾಲ್ವಿನಮ್ ಉಂಟುಮಾಡಿದೊಡೆ, ಆತನ ಮನಮನ್ ಒಡಂಬಡಿಸಲಾಱದೆ ಪರಶುರಾಮನಲ್ಲಿಗೆ ಪೋಗಿ...)

**ಅಂಬೆ:** ಎನ್ನ ಸ್ವಯಂವರದೊಳ್ ನೆರೆದ ಅರಸು ಮಕ್ಕಳ್ ಎಲ್ಲರುಮನ್ ಭೀಷ್ಮನ್ ಓಡಿಸಿ, ಎನ್ನನ್ ಕೊಂಡುಬಂದು, ಮದುವೆಯನ್ ನಿಲಲ್ ಒಲ್ಲದೆ, ಅಟ್ಟಿ ಕಳೆದೊಡೆ, ಎನ್ನ ದೆವಸಮುಮ್ ಜವ್ವನಮುಮ್ ಅಡವಿಯೊಳಗೆ ಪೂತ ಪೂವಿನಂತೆ ಕಿಡಲ್ ಈಯದೆ, ಆತನನ್ ಎನ್ನನ್ ಪಾಣಿಗ್ರಹಣಮ್ ಗೆಯ್ವಂತು ಮಾಡು... ಮಾಡಲಾಱದೊಡೆ ಕಿಚ್ಚಮ್ ದಯೆಗೆಯ್ವುದು...

(ಎಂದು ಅಂಬೆ ಕಣ್ಣ ನೀರನ್ ತುಂಬೆ...)

**ಪರಶುರಾಮ:** ನಯಮನ್ ನಂಬುವೊಡೆ ಎನ್ನ ಪೇಳ್ವ ಸತಿಯನ್ ಕೈ ಕೊಂಡನ್. ಅಂತಲ್ಲ ಮೇಣ್ ದುರ್ನಯಮನ್ ನಚ್ಚುವೊಡೆ, ಎನ್ನನ್ ಉಗ್ರ ರಣದೊಳ್ ಮೀಱಿ ಮಾರ್ಕೊಂಡನ್. ಆರಯೆ ಶಂತನು ಸುತಂಗೆ ಕಜ್ಜಮ್ ಪೆಱತಿಲ್ಲ. ಎನ್ನನ್ ಕರಮ್ ನಂಬಿದ ಅಂಬೆಯೊಳ್, ಎನ್ನ ಅಂಬೆ ವಲಮ್ ವಿವಾಹ ವಿಧಿಯನ್ ಮಾಳ್ಪೆನ್. ಪೆಱರ್ ಮಾಳ್ಪರೇ.

(ಎಂದು ನಾಗಪುರಕ್ಕೆ ವರ್ಪ ಪರಶುರಾಮನ ಬರವನ್ ಗಾಂಗೇಯನ್ ಕೇಳ್ದು, ಇದಿರ್ ವಂದು, ಕನಕ ರಜತ ಪಾತ್ರಂಗಳೊಳ್ ಅರ್ಘ್ಯಮನ್ ಕೊಟ್ಟು ಪೊಡಮಟ್ಟು...)

**ಗಾಂಗೇಯ:** ಬೆಸನ್ ಏನ್.

**ಪರಶುರಾಮ:** ಪೇಳ್ವೆನ್. ಎನ್ನ ಬೆಸನನ್ ಕೈಕೊಳ್ವುದು. ಈ ಕನ್ಯೆಯನ್ ಪಸುರ್ವಂದರ್ ಪಸೆ ಎಂಬಿವನ್ ಸಮೆದು ನೀನ್ ಕೈಕೊಳ್. ಕೊಳಲ್ಕಾಗದು ಎಂಬ ಎಸಕಮ್ ಚಿತ್ತದೊಳ್ ಉಳ್ಳೊಡೆ, ಈಗಳ್ ಇವರ್ ಎಮ್ಮ ಆಚಾರ್ಯರ್ ಎಂದು ಓವದೆ, ಏರ್ವೆಸನನ್ ಮಾಣದೆ ಕೈದುಗೊಳ್. ಎರಡಱೊಳ್ ಮೆಚ್ಚಿತ್ತೆನ್. ಏನ್ ಎಂದಪಯ್.

(ಎಂದು ನುಡಿದ ಪರಶುರಾಮನ ನುಡಿಯನ್ ಗಾಂಗೇಯನ್ ಕೇಳ್ದು...)

**ಗಾಂಗೇಯ:** ಎನಗೆ ವೀರಶ್ರೀಯುಮ್ ಕೀರ್ತಿಶ್ರೀಯುಮ್ ಅಲ್ಲದೆ ಉಳಿದ ಪೆಂಡಿರ್ ಮೊಱೆಯಲ್ಲ. ನೀವ್ ಇದನ್ ಏಕೆ ಆಗ್ರಹಮ್ ಗೆಯ್ವಿರ್.

**ಪರಶುರಾಮ:** ಎಂತುಮ್ ಎಮ್ಮೊಳ್ ಕಾದಲ್ವೇಳ್ವುದು.

(ಎಂದು ಕೆಳದುರ್ ಅಂದು ಉಗ್ರ ರಣಾಗ್ರಹ ಪ್ರಣಯದಿಂದ ಆಗಳ್ ಕುರುಕ್ಷೇತ್ರಮನ್ ಕಳಮ್ ಪೇಳ್ದು, ಇರ್ವರುಮ್ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರ ಸಂಕುಲದಿಂದೆ ಒರ್ವರನ್ ಒರ್ವರ್ ಎಚ್ಚು, ಬ್ರಹನ್ ನಿಜ ಪೀಠಾಂಭೋಜದಿನ್ ಉಚ್ಚಳಿಪನ್ನಮ್ ಈ ತ್ರೈಲೋಕ್ಯದೊಳ್ ಪಿರಿದೊಂದು ಸಂಕಟಮನ್ ಮಾಡಿದರ್.

ಅತರ್ಕ್ಯಮ್ ವಿಕ್ರಾಂತಮ್; ಭುಜಬಲಮ್ ಅಸಾಮಾನ್ಯಮ್; ಪ್ರತಾಪಮ್ ಅಧಿಕಮ್. ಪೋಗು, ಈತಂಗೆ ಎಣೆಯೆ ದಿವಿಜರ್... ವಾಯುಪಥದೊಳ್ ಶಿತಾಸ್ತ್ರಂಗಳ್ ಪೊಂಕಮ್ ಕಿಡಿಸೆ ಭಾರ್ಗವನ್ ಸುಗಿದನ್... ಇದೇನ್ ಪ್ರತಿಜ್ಞಾ ಗಾಂಗೇಯಂಗೆ ಅದಿರದೆ ಇದಿರ್ ನಿಲ್ವನ್ನರ್ ಒಳರೇ. ಅಂತು ಗಾಂಗೇಯನೊಳ್ ಪರಶುರಾಮನ್ ಕಾದಿ ಬಸವಳಿದು, ಉಸಿರಲಪ್ಪೊಡಮ್ ಆಱದೆ,

ಮೂರ್ಛೆವೋಗಿರ್ದನನ್ ಕಂಡು ಅಂಬೆಯೆಂಬ ದಂಡುರುಂಬೆ...)

**ಅಂಬೆ:** (ಗಾಂಗೇಯನಿಗೆ)

ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆ.

(ಎಂದು ಕೋಪಾಗ್ನಿಯಿಂದಮ್ ಅಗ್ನಿಶರೀರೆಯಾಗಿ, ದ್ರುಪದನ ಮಹಾದೇವಿಗೆ ಮಗನಾಗಿ ಪುಟ್ಟಿ, ಕಾರಣಾಂತರದೊಳ್ ಶಿಖಂಡಿಯಾಗಿರ್ದಳ್...)



# ೩. ಧೃತರಾಷ್ಟ್ರ ಪಾಂಡು ವಿದುರ ಜನನ

## (೮೦ ನೆಯ ಗದ್ಯದಿಂದ ೮೬ ನೆಯ ಪದ್ಯ)

### ಪಾತ್ರಗಳು

**ಗಾಂಗೇಯ:** ಶಂತನು ಮತ್ತು ಗಂಗಾದೇವಿಯ ಮಗ. ಶಂತನು ಮಹಾರಾಜನ ಹಿರಿಯ ಮಗ. ಈತನು ಸತ್ಯವತಿಯ ತಂದೆಯಾದ ದಾಶರಾಜನಿಗೆ ನೀಡಿದ್ದ ವಾಗ್ದಾನವನ್ನು ಬಿಡದೆ ಪಾಲಿಸಿದ್ದರಿಂದ 'ಭೀಷ್ಮ' ನೆಂಬ ಹಿರಿಮೆಯ ಹೆಸರು ಬಂದಿತ್ತು.

**ಸತ್ಯವತಿ:** ಶಂತನು ಮಹಾರಾಜನ ಹೆಂಡತಿ. ಈಕೆಗೆ ಯೋಜನಗಂಧಿ ಎಂಬ ಮತ್ತೊಂದು ಹೆಸರಿದೆ.

**ವಿಚಿತ್ರವೀರ್ಯ:** ಶಂತನು ಮತ್ತು ಸತ್ಯವತಿಯ ಮಗ.

**ಕೃಷ್ಣದ್ವೈಪಾಯನ:** ಪರಾಶರ ಮುನಿ ಮತ್ತು ಯೋಜನಗಂಧಿಯ ಮಗ. ಈತನಿಗೆ ವ್ಯಾಸ ಎಂಬ ಮತ್ತೊಂದು ಹೆಸರಿದೆ.

**ಅಂಬಿಕೆ:** ಹಸ್ತಿನಾವತಿಯ ರಾಜನಾಗಿದ್ದ ವಿಚಿತ್ರವೀರ್ಯನ ಮೊದಲನೆಯ ಹೆಂಡತಿ. ಕಾಶಿರಾಜನ ಎರಡನೆಯ ಮಗಳು.

**ಅಂಬಾಲೆ:** ಹಸ್ತಿನಾವತಿಯ ರಾಜನಾಗಿದ್ದ ವಿಚಿತ್ರವೀರ್ಯನ ಎರಡನೆಯ ಹೆಂಡತಿ. ಕಾಶಿರಾಜನ ಮೂರನೆಯ ಮಗಳು

**ದಾಸಿ:** ರಾಣಿವಾಸದಲ್ಲಿ ಅಂಬಿಕೆಯ ದಾಸಿ.

# ಧೃತರಾಷ್ಟ್ರ ಪಾಂಡು ವಿದುರ ಜನನ

ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನುಮ್ ಅಪಾರ್ಯವೀರ್ಯನುಮ್ ಆಗಿ ಕೆಲವು ಕಾಲಮ್ ರಾಜ್ಯಲಕ್ಷ್ಮಿಯಮ್ ತಾಳ್ದಿ, ರಾಜಯಕ್ಷ್ಮತಪ್ತ ಶರೀರನ್ ಆತ್ಮಜ ವಿಗತಜೀವಿಯಾಗಿ ಪರಲೋಕಪ್ರಾಪ್ತನ್ ಆದೊಡೆ; ಗಾಂಗೇಯನುಮ್ ಸತ್ಯವತಿಯುಮ್ ಅತ್ಯಂತ ಶೋಕಾನಲ ದಹ್ಯಮಾನ ಮಾನಸರ್ಕಳಾಗಿ ಆತಂಗೆ ಪರಲೋಕಕ್ರಿಯೆಗಳಮ್ ಮಾಡಿ, ರಾಜ್ಯಮ್ ನಷ್ಟರಾಜಮ್ ಆದುದರ್ಕೆ ಮಮ್ಮಲಮ್ ಮಱುಗಿ, ಯೋಜನಗಂಧಿ ಸಿಂಧುಪುತ್ರನನ್ ಇಂತು ಎಂದಳ್.

**ಸತ್ಯವತಿ:** ಧರಿತ್ರಿ ಮಗನ್ ಎಂಬಂತು ನಿನ್ನ ಅನುಜರನ್ ಕೈಕೊಂಡು, ಮುನ್ ಪೂಣ್ದ ನನ್ನಿಗೆ ಬನ್ನಮ್ ಬರಲ್ ಈಯದೆ, ಆರ್ತು ಎಸಗಿದ ಈ ವಿಖ್ಯಾತಿಯುಮ್ ಕೀರ್ತಿಯುಮ್ ಮುಗಿಲಮ್ ಮುಟ್ಟಿದುದಲ್ತೆ. ನಮ್ಮ ಕುಲದೊಳ್ ಮಕ್ಕಳ್ ಪೆಱರ್, ನೀನೇ ಜಟ್ಟಿಗನ್ಯೆ. ಮುನ್ನಿನ ಒರಂಟು ಬೇಡ. ಮಗನೇ, ಧರಾಭಾರಮಮ್ ಕೈಕೊಳ್ ಎಂದು ನಿನ್ನನ್ ಆನ್ ಇನಿತನ್ ಕೈಯೊಡ್ಡಿ ಬೇಡಿದೆನ್.

(ಎಂದ ಸತ್ಯವತಿಗೆ ಅಮರಾಪಗಾ ನಂದನನ್ ಇಂತು ಎಂದನ್.)

**ಗಾಂಗೇಯ:** ರಾಜ್ಯಮ್ ಕಿಡುಗುಮೆ. ರಾಜ್ಯದ ತೊಡರ್ಪು ಅದು ಏವಾಳ್ತೆ ಬಾಳ್ತೆ. ನನ್ನಿಯ ನುಡಿಯನ್ ಕಿಡೆ ನೆಗಳೆ, ನಾನುಮ್ ಎರಡನ್ ನುಡಿದೊಡೆ, ಹರಿ ಹರ ಹಿರಣ್ಯಗರ್ಭರ್ ನಗರೇ. ಹಿಮಕರನ್ ಆತ್ಮಶೀತರುಚಿಯನ್; ದಿನನಾಯಕನ್ ಉಷ್ಣದೀಧಿತಿಕ್ರಮಮನ್; ಅಗಾಧ ವಾರಿಧಿಯೆ ಗುಣ್ಪನ್; ಇಳಾವಧು ತನ್ನ ತಿಣ್ಪನ್; ಉತ್ತಮ ಕುಲಶೈಲಮ್ ಉನ್ನತಿಯನ್ ಏಳಿದವಾಗೆ ಬಿಸುಳ್ವೊಡಮ್ ಬಿಸುಳ್ಕೆಮ. ಮದೀಯ ಪುರುಷವ್ರತಮೊಂದುಮನ್ ಅಂಬಿಕೇ, ಈಗಳ್ ಬಿಸುಡೆನ್.

(ಎಂದು ತನ್ನ ನುಡಿದ ಪ್ರತಿಜ್ಞೆಯನ್ ಏಗೆಯ್ದುಮ್ ತಪ್ಪಿದನಿಲ್ಲ. ರಂಗತ್ತರಂಗ ವಾರ್ಧಿ ಚಯಂಗಳ್ ತಂತಮ್ಮ ಮೇರೆಯಮ್ ದಾಂಟುವೊಡಮ್, ಗಾಂಗೇಯನುಮ್ ಪ್ರತಿಜ್ಞಾ ಗಾಂಗೇಯನುಮ್ ಒರ್ಮೆ ನುಡಿದುದನ್ ತಪ್ಪುವರೇ. ಅಂತು ಅಚಲಿತ ಪ್ರತಿಜ್ಞಾರೂಢನಾದ ಗಾಂಗೇಯನನ್ ಏಗೆಯ್ದುಮ್ ಒಡಂಬಡಿಸಲಾಱದೆ, ಸತ್ಯವತಿ ತಾನುಮ್ ಆತನುಮ್ ಆಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನನ್ ನೆನೆದು ಬರಿಸಿದೊಡೆ...)

**ವ್ಯಾಸ:** ಏಗೆಯ್ವುದು... ಏನಮ್ ತೀರ್ಚುವುದು.

**ಸತ್ಯವತಿ:** ಹಿರಣ್ಯಗರ್ಭ ಬ್ರಹ್ಮರಿನ್ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದ ಸೋಮವಂಶಮ್, ಈಗಳ್ ಎಮ್ಮ ಕುಲಸಂತತಿಗಮ್ ಆರುಮ್ ಇಲ್ಲದೆ ಎಡೆವಱಿದು ಕಿಡುವಂತಾಗಿ ಇರ್ದುದು ಕಾರಣದಿನ್, ನಿಮ್ಮ ತಮ್ಮನ್ ವಿಚಿತ್ರವೀರ್ಯನ ಕ್ಷೇತ್ರದೊಳ್ ಅಂಬಿಕೆಗಮ್ ಅಂಬಾಲೆಗಮ್ ಪುತ್ರರ್ ಅಪ್ಪಂತು ವರಪ್ರಸಾದಮನ್ ದಯೆಗೆಯ್ವುದು.

**ವ್ಯಾಸ:** ಅಂತೆ ಗೆಯ್ವೆನ್.

(ಎಂದು ತ್ರಿದಶ ನರ ಅಸುರ ಉರಗ ಗಣ ಪ್ರಭು, ನಿಶ್ಚಿತ ತತ್ವಯೋಗಿ, ಯೋಗದ ಬಲಮ್ ಉಣ್ಮೆ ಪೊಣ್ಮೆ ನಿಲೆ, ಪುತ್ರ ವರಾರ್ಥಿಗಳಾಗಿ ತನ್ನ ಕಟ್ಟಿದಿರೊಳೆ ನಿಂದರನ್ ನಯದೆ ನೋಡೆ, ಮುನೀಂದ್ರನ ದಿವ್ಯದೃಷ್ಟಿ ಮಂತ್ರದೊಳೆ ಆ ಸತಿಯರ್ ಇರ್ವರೊಳಮ್ ನವಗರ್ಭವಿಭ್ರಮಮ್ ಪೊದಳ್ದುದು . ಅಂತು ದಿವ್ಯಸಂಯೋಗದೊಳ್ ಇರ್ವರುಮ್ ಗರ್ಭಮನ್ ತಾಳ್ದರ್. **"ಮತ್ತೊರ್ವ ಮಗನನ್ ವರಮನ್ ಬೇಡು"** ಎಂದು ಅಂಬಿಕೆಗೆ ಪೇಳ್ದೊಡೆ, ಆಕೆಯುಮ್ ವ್ಯಾಸಭಟ್ಟಾರಕನಲ್ಲಿಗೆ ಪೋಗಲ್ ಅಲಸಿ, ತನ್ನ ಸೂಳಾಯ್ತೆಯನ್ ತನ್ನವೊಲೆ ಕಯ್ಗೆಯ್ದು ಬರವನ್ ಬೇಡಲ್ ಅಟ್ಟಿದೊಡೆ ಆಕೆಗೆ ವರದನಾಗಿ, ವ್ಯಾಸ ಮುನೀಂದ್ರನ್ ಸತ್ಯವತಿಗಮ್ ಭೀಷ್ಮಂಗಮ್ ಇಂತು ಎಂದನ್.)

ವ್ಯಾಸ: ಎನ್ನ ವರಪ್ರಸಾದ ಕಾಲದೊಳ್ ಎನ್ನಮ್ ಕಂಡು ಅಂಬಿಕೆ ಕಣ್ಣನ್ ಮುಚ್ಚಿದಳಪ್ಪುದಱಿಂದ ಆಕೆಗೆ ಧೃತರಾಷ್ಟ್ರನ್ ಎಂಬ ಮಗನ್ ಅತ್ಯಂತ ಸುಂದರಾಂಗನಾಗಿಯುಮ್ ಜಾತ್ಯಂಧನಕ್ಕುಮ್; ಅಂಬಾಲೆ ಮದ್ರೂಪಮನ್ ಕಂಡು ಮೊಗಮನ್ ಪಾಂಡುರಮ್ ಮಾಡಿದಳಪ್ಪುದಱಿಂದ ಆಕೆಗೆ ಪಾಂಡು ರೋಗಸಂಗತನುಮ್ ಅನೇಕ ಭದ್ರಲಕ್ಷಣಲಕ್ಷಿತನುಮ್ ಅತ್ಯಂತ ಪ್ರತಾಮನುಮಾಗಿ ಪಾಂಡುರಾಜನೆಂಬ ಮಗನಕ್ಕುಮ್; ಅಂಬಿಕೆಯ ಸೂಳಾಯ್ತೆಯಪ್ಪಾಕೆ ದರಹಸಿತ ವದನಾರವಿಂದೆಯಾಗಿ ಬರವನ್ ಕೈಕೊಂಡಳಪ್ಪುದಱಿಂದ ಆಕೆಯ ಮಗನ್ ವಿದುರನೆಂಬನ್ ಅನಂಗಾಕಾರನುಮ್ ಆಚಾರವಂತನುಮ್ ಬುದ್ಧಿವಂತನುಮಕ್ಕುಮ್.

(ಎಂದು ಪೇೞ್ದು ಮುನಿಪುಂಗವನ್ ಪೋದನ್. ಇತ್ತಮ್ ಮೂವರುಮ್ ವರಮ್ ಪಡೆದ ಸಂತಸಮ್ ಮನದೊಳಾಗಲ್ ಒಂದು ಉತ್ತರೋತ್ತರಮ್ ಬಳೆವ ಮಾಳ್ಕೆಯಿನ್ ಬಳೆವ ಗರ್ಭಮನ್ ತಾಳ್ದಿ ಆದರಮ್ ಬೆರಸು ಧೃತರಾಷ್ಟ್ರ, ವಿಖ್ಯಾತ ಪಾಂಡುರಾಜ, ವಿದುರರ್ಕಳಮ್ ಮೂವರನ್ ಕ್ರಮದೆ ಅಂದು ಪೆತ್ತರ್...)



# ೪. ಕರ್ಣನ ಜನನ

(೮೮ ನೆಯ ಪದ್ಯದಿಂದ ೯೮ ನೆಯ ಪದ್ಯ)

## ಪಾತ್ರಗಳು

**ಕುಂತಿ:** ಶೂರಸೇನ ರಾಜನ ಮಗಳು.

**ಶೂರಸೇನ:** ಯದುವಂಶದ ರಾಜ.

**ಕುಂತಿಭೋಜ:** ಕುಂತಳ ದೇಶದ ರಾಜ. ಕುಂತಿಯ ಸಾಕು ತಂದೆ. ಶೂರಸೇನನ ಸೋದರತ್ತೆಯ ಮಗನಾದ ಕುಂತಿಭೋಜನು ತನಗೆ ಮಕ್ಕಳಿಲ್ಲದ್ದರಿಂದ ಕುಂತಿಯು ಚಿಕ್ಕ ವಯಸ್ಸಿನ ಬಾಲೆಯಾಗಿದ್ದಾಗಲೇ ಅವಳನ್ನು ದತ್ತು ಮಗಳನ್ನಾಗಿ ಪಡೆದಿದ್ದನು.

**ದುರ್ವಾಸ:** ಒಬ್ಬ ಮುನಿ.

**ಆದಿತ್ಯ:** ಸೂರ್ಯ. ಗಗನದಲ್ಲಿ ಉರಿಯುವ ಸೂರ್ಯನನ್ನು ಒಬ್ಬ ದೇವತೆಯೆಂದು ಜನಸಮುದಾಯ ಕಲ್ಪಿಸಿಕೊಂಡಿದೆ.

**ಗಂಗಾದೇವಿ:** ಗಂಗಾ ನದಿ. ಗಂಗೆಯನ್ನು ದೇವತೆಗಳಲ್ಲಿ ಒಬ್ಬಳೆಂದು ಜನಸಮುದಾಯ ಕಲ್ಪಿಸಿಕೊಂಡಿದೆ.

**ಸೂತ:** ಕರ್ಣನ ಸಾಕು ತಂದೆ.

**ರಾಧೆ:** ಕರ್ಣನ ಸಾಕು ತಾಯಿ.

**ವಸುಷೇಣ:** ಕರ್ಣನು ಮಗುವಾಗಿದ್ದಾಗ ಇದ್ದ ಹೆಸರು. ಅನಂತರ ಅವನ ಕೀರ್ತಿ ಹಬ್ಬಿದಂತೆಲ್ಲಾ ಕರ್ಣ ಎಂಬ ಹೆಸರು ಬಂದಿತು.

# ಕರ್ಣನ ಜನನ

ನೆಗಳ್ತೆಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ ಕುಂತಿ. ಮತ್ತಗಜಗಮನೆ ಯದುವಂಶೋತ್ತಮೆ ಎನೆ ಕುಂತಿಭೋಜನ ಮನೆಯೊಳ್ ಬಳೆಯುತ್ತಿರ್ಪನ್ನೆಗಮ್, ಆ ನಳಿನಾಸ್ಯೆಯ ಗೆಯ್ದುದೊಂದು ಶುಶ್ರೂಷೆ ಮನಂಗೊಳೆ ದುರ್ವಾಸನ್ ವಿಳಸಿತ ಮಂತ್ರಾಕ್ಷರಂಗಳನ್ ದಯೆಯಿಂದಮ್ ಕೊಟ್ಟನ್. ಅಂತು ಕೊಟ್ಟು...

**ದುರ್ವಾಸ:** ಅಯ್ದು ಮಂತ್ರಾಕ್ಷರಗಳನ್ ಆಹ್ವಾನಮ್ ಗೆಯ್ದು, ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳನ್ ಪಡೆವೆ.

(ಎಂದು ಬೆಸಸಿದೊಡೆ, ಒಂದು ದಿವಸಮ್ ಕೊಂತಿ...)

**ಕುಂತಿ:** ಈ ಮುನಿಯ ವರದ ಮಹಿಮೆಯನ್ ಎನ್ನಿಚ್ಚೆಯೊಳ್ ಪುಚ್ಚವಣಮ್ ನೋಡುವೆನ್.

(ಎನುತ ಶಫರ ಉಚ್ಚಳಿತ ತರತ್ತರಂಗೆಗೆ ಗಂಗೆಗೆ ಅಂದು ಉಚ್ಚಸ್ತನಿ ಒರ್ವಳೆ ಬಂದಳ್. ಬಂದು ಸುರನದಿಯ ನೀರೊಳ್ ಮಿಂದು ಇನನನ್ ನೋಡಿ...)

**ಕುಂತಿ:** ನಿನ್ನ ದೊರೆಯನೆ ಮಗನಕ್ಕೆ.

(ಎಂದು ಆಹ್ವಾನಮ್ ಗೆಯ್ಯಲೊಡಮ್, ದಲ್ ದಶಶತಕಿರಣನ್ ಅಂದು ಧರೆಗಿಳಿದನ್. ಅಂತು ನಭೋಭಾಗದಿನ್ ಭೂಮಿಭಾಗಕ್ಕೆ ಇಳಿದು, ತನ್ನ ಮುಂದೆ ನಿಂದ ಅರವಿಂದ ಬಾಂಧವನನ್ ನೋಡಿ ನೋಡಿ, ಕೊಡಗೂಸುತನದ ಭಯದಿನ್ ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲ್ ಒಳ್ಕುಡಿಯಲ್ ಒಡಗೂಡೆ ಗಂಗೆಯ ಮಡು ಕರೆಗಣ್ಮಿದುದು. ನಾಣ ಪೆಂಪೇನ್ ಪಿರಿದೋ. ಆಗಳ್

ಆದಿತ್ಯನ್ ಆಕೆಯ ಮನದ ಶಂಕೆಯುಮನ್ ನಡುಗುವ ಮೆಯ್ಯ ನಡುಕಮುಮನ್ ಕಿಡೆನುಡಿದು ಇಂತು ಎಂದನ್.)

**ಆದಿತ್ಯ:** ತರುಣಿ, ಬರಿಸಿದ ಕಾರಣಮ್ ಆವುದೊ.

**ಕುಂತಿ:** ಮುನೀಶ್ವರನ ಮಂತ್ರಮ್ ಏದೊರೆಯೆಂದು ಆನ್ ಮರುಳಿಯೆನ್. ಅಱಿದುಮ್ ಅಱಿಯದೆ ಬರಿಸಿದೆನ್. ಇನ್ನು ಏಳಿಮ್.

**ಆದಿತ್ಯ:** ಮುನ್ ಬೇಡಿದ ವರಮನ್ ಕುಡದೆ ಪೋಗಲ್ ಆಗದು. ಅಂಬುಜಮುಖಿ, ಎನ್ನ ದೊರೆಯನ್ ಪುತ್ರನ್ ನಿನಗಕ್ಕೆ.

(ಎಂಬುದುಮ್ ಒದವಿದ ಗರ್ಭದೊಳ್ ಅಂಬುಜಮಿತ್ರನನೆ ಪೋಲ್ವ ಮಗನ್ ಒಗೆತಂದನ್. ಒಡವುಟ್ಟಿದ ಮಣಿಕುಂಡಲಮ್, ಒಡವುಟ್ಟಿದ ಸಹಜ ಕವಚಮ್ ತನ್ನೊಳ್ ಅಮರ್ದಿರೆ ತೊಡರ್ದಿರೆಯುಮ್ ಬಂದು ಆಕೆಯ ನಡುಕಮನ್ ಒಡರಿಸಿದನ್. ಆಗಳ್ ಆ ಬಾಲಿಕೆಯುಮ್ ಅಂತು ನಡನಡ ನಡುಗಿ ಜಲದೇವತೆಗಳಪ್ಪೊಡಮ್ ಮನಮ್ ಕಾಣ್ಬರ್ ಎಂದು, ನಿಧಾನಮನ್ ಈಡಾಡುವಂತೆ ಕೂಸನ್ ಗಂಗೆಯೊಳ್ ಈಡಾಡಿ ಬಂದಳ್. ಇತ್ತ ಗಂಗಾದೇವಿಯುಮ್ ಆ ಕೂಸನ್ ಮುಳುಗಲೀಯದೆ, ತನ್ನ ತೆರೆಗಳೆಂಬ ನಳಿತೋಳ್ಗಳಿನ್ ಒಯ್ಯನೊಯ್ಯನೆ ತಳ್ಕೈಸಿ ತರೆ, ಗಂಗಾ ತೀರದೊಳ್ ಇರ್ಪ ಸೂತನೆಂಬವನ್ ಕಂಡು...)

**ಸೂತ:** ಬಾಳ ದಿನೇಶ ಬಿಂಬದ ನೆಳಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂದ್ರ ಆಳಯದಿಂದಮ್ ಉರ್ಚಿದ ಫಣಾಮಣಿ ಮಂಗಳ ರಶ್ಮಿಯೋ ಕರಮ್ ಎನ್ನ ಎರ್ದೆಯನ್ ಮೇಳಿಸಿದಪ್ಪುದು.

(ಎಂದು ನೀರೊಳ್ ಬೊದಿಲ್ಲನೆ ಪಾಯ್ದು, ಆದಮ್ ಆದರದೆ ಆ ಬಾಳನನ್ ಕಂಡು, ನಿಧಿ ಕಂಡನಂತೆ ಪೋಲ್ ಒಸೆದನ್. ಅಂತು ಕಂಡು ಮನಂಗೊಂಡು ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನ್ ಇಟ್ಟೊಡೆ, ಆಕೆ ರಾಗಿಸಿ ಸುತನ ಸೂತಕಮನ್ ಕೊಂಡಾಡೆ. ಅಗುಳ್ದಿರಲ್ ಆ ಕುಳಿಯೊಳ್ ತೊಟ್ಟಗೆ ನಿಧಿ ಕಂಡಂತೆ, ಆ ಮಗನ ಅಂದಮ್ ವಸುಧೆಗೆ ಅಸದಳಮ್ ಆಯ್ತು ಎಂದು ಲೋಗರ್ ಬಗೆದಿರೆ, ವಸುಷೇಣನ್ ಎಂಬ ಪೆಸರ್ ಆಗಳ್ ಆಯ್ತು. ಅಂತು ವಸುಷೇಣನ್ ಆ

ಲೋಕಾಂತಂಬರಮ್ ಅಳವಿ ಬಳೆಯೆ , ಬಳೆದ ಎಸಕಮ್ ಅದು ಓರಂತೆ ಜನಂಗಳ ಕರ್ಣೋಪಾಂತದೊಳ್ ಒಗೆದು ಎಸೆಯೆ, ಕರ್ಣನ್ ಎಂಬನುಮ್ ಆದನ್.)



## ೫. ಕರ್ಣನ ಬೆಳವಣಿಗೆ

### (೯೮ ನೆಯ ಗದ್ಯದಿಂದ ೧೦೫ ನೆಯ ಗದ್ಯ)

**ಪಾತ್ರಗಳು**

**ಕರ್ಣ:** ಸೂರ್ಯದೇವ ಮತ್ತು ಕುಂತಿಯ ಮಗ. ಈಗ ಸೂತ ಮತ್ತು ರಾಧೆ ದಂಪತಿಗಳ ಸಾಕು ಮಗ.

**ಇಂದ್ರ:** ದೇವಲೋಕದಲ್ಲಿನ ದೇವತೆಗಳ ಒಡೆಯ.

**ವಟು:** ಇಂದ್ರನು ವಟುವಿನ ರೂಪದಲ್ಲಿ ಬಂದು ಕರ್ಣನ ಕವಚ ಕುಂಡಲಗಳನ್ನು ಬೇಡಿ ಪಡೆಯುತ್ತಾನೆ.

**ಪರಶುರಾಮ:** ಒಬ್ಬ ಮುನಿ. ಜಮದಗ್ನಿ ಮತ್ತು ರೇಣುಕಾದೇವಿಯ ಮಗ.

**ಸೂತ:** ಕರ್ಣನ ಸಾಕು ತಂದೆ.

**ರಾಧೆ:** ಕರ್ಣನ ಸಾಕು ತಾಯಿ.

## ಕರ್ಣನ ಬೆಳವಣಿಗೆ

ನವಯೌವನ ಆರಂಭದೊಳ್ ಆತನ್ ಶಸ್ತ್ರಶಾಸ್ತ್ರವಿದ್ಯೆಯೊಳ್ ಅತಿ ಪರಿಣತನಾಗಿ, ಬಿಲ್ಲ ಜೇವೊಡೆಯೆ ಮಿಱುವ ವೈರಿ ನರೇಂದ್ರರನ್ ಪೊಡೆದುದು. ನಿರಂತರಮ್ ಕಡಿಕಡಿದು ಇತ್ತ ಪೊನ್ನೆ, ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋಡೆ ಆದ ಎಡರನ್ ಸಿಡಿಲ್ಪೊಡೆದವೊಲ್ ಅಟ್ಟಿ ಮುಟ್ಟಿ ಕಡಿದಿಕ್ಕಿದುದು. ಎಡಱದೆ ಬೇಡಿಮ್ ಓಡಿಮ್. ಇದು ಕರ್ಣನಾ ಚಾಗದ ಬೀರದ ಮಾತು. ಅಂತು ಭುವನ ಭವನಕ್ಕೆಲ್ಲಮ್ ನೆಗಳ್ದ ಕರ್ಣನ ಪೊಗಳ್ತೆಯಮ್ ನೆಗಳ್ತೆಯುಮುನ್ ಇಂದ್ರನ್ ಕೇಳ್ದು...

**ಇಂದ್ರ:** (ತನ್ನಲ್ಲಿಯೇ)

ಮುಂದೆ ತನ್ನಂಶದೊಳ್ ಪುಟ್ಟುವ ಅರ್ಜುನಂಗಮ್ ಆತಂಗಮ್ ದ್ವಂದ್ವಯುದ್ಧಮ್ ಉಂಟು.

(ಎಂಬುದನ್ ತನ್ನ ದಿವ್ಯ ಜ್ಞಾನದಿಂದಮ್ ಅಱಿದು...)

ಬೇಡಿದೊಡೆ ಕರ್ಣನ್ ಬಲದ ಬರಿಯುಮನ್ ಉಗಿದು ಈಡಾಡುಗುಮ್. ಇಂತಲ್ಲದೆ ಈತನನ್ ಗೆಲಲ್ ಬಾರದು.

(ಎಂದು ಆಗಳೆ ಕೈಗೂಡಿದ ವಟುವಾಕೃತಿಯೊಳೆ ಆ ಸಹಜ ಕವಚಮನ್ ಕುಂಡಳಮನ್ ಬೇಡಿದನ್.)

**ಕರ್ಣ:** ಬೇಡಿದುದನ್ ಅರಿದುಕೊಳ್.

**ಇಂದ್ರ:** ಬೇಡಿದುದನ್ ಎನಗೆ ಮುಟ್ಟಲಾಗದು.

**ಕರ್ಣ:** (ಅಲ್ಲಾಡದೆ ನೆಗಳ್ದು ಕವಚಮನ್ ಅರಿದು...)

ಕೊಳ್.

(ಎಂದು ಇಂದ್ರಂಗೆ ಈಡಾಡಿದನ್.)

ಇಂದ್ರ: (ತನ್ನಲ್ಲಿಯೇ)

ಎಂದುಮ್ ಪೋಗು ಎಂದನೆ... ಮಾಣ್ ಎಂದನೆ... ಪೆಱತೊಂದನ್ ಈವೆನ್ ಎಂದನೆ... ನೊಂದು ಅಃ ಎಂದನೆ... ಸೆರಗಿಲ್ಲದೆ ಪಿಡಿ ಎಂದನ್ ರವಿ ತನಯನ್, ಇದೇನ್ ಕಲಿಯೊ ಚಾಗಿಯೋ.

(ಅಂತು ತನ್ನ ಸಹಜ ಕವಚಮನ್ ನೆತ್ತರ್ ಪನಪನ ಪನಿಯೆ ತಿದಿಯುಗಿವಂತೆ ಉಗಿದು ಕೊಟ್ಟೊಡೆ, ಇಂದ್ರನ್ ಆತನ ಕಲಿತನಕೆ ಮೆಚ್ಚಿ...)

ಇಂದ್ರ: ಸುರ ದನುಜ ಭುಜಗ ವಿದ್ಯಾಧರ ನರಸಂಕುಲದೊಳ್ ಆರನ್ ಆದೊಡಮ್ ಏನೋ, ಇದು ಧುರದೊಳ್ ನಿಜ ವಿರೋಧಿಯನ್ ಗರ ಮುಟ್ಟೆ ಕೊಲ್ಗುಮ್.

(ಎಂದು ಶಕ್ತಿಯನ್ ಇತ್ತನ್. ಅಂತು ಇಂದ್ರನ್ ಇತ್ತ ಶಕ್ತಿಯನ್ ಕೈಕೊಂಡು, ನಿಜಭುಜ ಶಕ್ತಿಯನ್ ಪ್ರಕಟಮ್ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ, ಉಗ್ರ ಪರಶು ಪಾಟಿತ ರಿಪುವಂಶಾರಾಮನನ್, ಆ ರಾಮನನ್ ಗುರು ಶುಶ್ರೂಷೆಯೊಳ್ ಕೂರಿಸೆ, ವೈಕರ್ತನನಾ ಬಲ್ಮೆ ಇಷುವಿದ್ಯಾ ಪಾರಗನ್ ಎನಿಸಿದುದು.

ಅಂತು ಧನುರ್ಧರ ಅಗ್ರಗಣ್ಯನಾಗಿ ಇರ್ದೊಂದು ದಿವಸಮ್ ತನ್ನ ತೊಡೆಯ ಮೇಲೆ ತಲೆಯನ್ ಇಟ್ಟು ಪರಶುರಾಮನ್ ಮಱೆದು ಒಱಗಿದ ಆ ಪಸ್ತಾವದೊಳ್, ಆ ಮುನಿಗೆ ಮುನಿಸನ್ ಮಾಡಲೆಂದು ಇಂದ್ರನ್ ಉಪಾಯದೊಳ್ ಅಟ್ಟಿದ ವಜ್ರಕೀಟಂಗಳ್ ಕರ್ಣನ ಎರಡುಮ್ ತೊಡೆಯುಮನ್ ಉಳಿಯನೂಱಿ ಕೊಡಂತಿಯೊಳ್ ಬೆಟ್ಟಿದಂತೆ ಅತ್ತಮ್ ಇತ್ತಮ್ ಉರ್ಚಿ ಪೋಗೆಯುಮ್, ಗುರುಗೆ ನಿದ್ರಾಭಿಘಾತಮಕ್ಕುಮ್ ಎಂದು ಅದನ್ ಅಱಿಯದಂತೆ ತಲೆಯನ್ ಉಗುರಿಸುತ್ತುಮ್ ಇರೆಯಿರೆ, ಅತಿ ವಿಶದ ವಿಶಾಲ ಊರುಕ್ಷತದಿಂದೆ ಒಱೆದು ಉತ್ಥಿತಮ್ ಆ ವಂದ ಅಸ್ರಮಿಶ್ರ ಗಂಧಮ್, ಅನಿತು ಜಡೆಯುಮನ್ ನಾಂದಿ ಮುನಿಯನ್ ಮನಃಕ್ಷತದೊಡನೆ ಎಳ್ಚಱಿಸಿದುದು. ಅಂತು ಎಳ್ಚತ್ತು ನೆತ್ತರ

ಪೊನಲೊಳ್ ನಾಂದು, ನನೆದ ಮೆಯ್ಯುಮನ್ ತೊಯ್ದು ತಳ್ಪೊಯ್ದ ಜಡೆಯುಮನ್ ಕಂಡು...)

**ಪರಶುರಾಮ:** ಈ ಧೈರ್ಯಮ್ ಕ್ಷತ್ರಿಯಂಗಲ್ಲದೆ ಆಗದು. ಪಾರ್ವನ್ ಎಂದು ಎನ್ನೊಳ್ ಪುಸಿದು ವಿದ್ದೆಯನ್ ಕೈಕೊಂಡುದರ್ಕೆ ದಂಡಮ್ ಪೆರತಿಲ್ಲ. ನಿನಗೆ ಆನ್ ಇತ್ತ ಬ್ರಹ್ಮಾಸ್ತ್ರಮ್ ಎಂಬ ದಿವ್ಯಾಸ್ತ್ರಮ್ ಅವಸಾನಕಾಲದೊಳ್ ಬೆಸಕೆಯ್ಯದೆ ಇರ್ಕೆ.

(ಎಂದು ಶಾಪಮನ್ ಇತ್ತನ್. ಅಂತು ಕರ್ಣನುಮ್ ಶ್ಶಾಪಹತನಾಗಿ ಮಗುಳ್ದು ಬಂದು ಸೂತನ ಮನೆಯೊಳ್ ಇರ್ಪನ್ನೆಗಮ್...)



# ೬. ಶಾಪಕ್ಕೆ ಗುರಿಯಾದ ಪಾಂಡುರಾಜ

(೧೦೮ ನೆಯ ಗದ್ಯದಿಂದ ೧೧೫ ನೆಯ ಪದ್ಯ)

**ಪಾತ್ರಗಳು**

**ಧೃತರಾಷ್ಟ್ರ:** ಕುರುವಂಶದ ಹಿರಿಯ ಮಗ. ಅಂಬಿಕೆ ಮತ್ತು ವ್ಯಾಸ ರಿಸಿಯ ಮಗ.

**ಪಾಂಡು:** ಕುರುವಂಶದ ಎರಡನೆಯ ಮಗ. ಅಂಬಾಲೆ ಮತ್ತು ವ್ಯಾಸ ರಿಸಿಯ ಮಗ

**ವಿದುರ:** ಅಂಬಿಕೆಯ ದಾಸಿ ಮತ್ತು ವ್ಯಾಸ ರಿಸಿಯ ಮಗ.

**ಕುಂತಿ:** ಪಾಂಡುರಾಜನ ಮೊದಲನೆಯ ಹೆಂಡತಿ.

**ಮಾದ್ರಿ:** ಪಾಂಡುರಾಜನ ಎರಡನೆಯ ಹೆಂಡತಿ. ಮದ್ರ ದೇಶದ ರಾಜನ ಮಗಳು. ಶಲ್ಯನ ಸೋದರಿ. ನಕುಲ ಮತ್ತು ಸಹದೇವನ ತಾಯಿ.

**ಕಿಂದಮ:** ಕಾಡಿನಲ್ಲಿ ನೆಲೆಸಿದ್ದ ಒಬ್ಬ ಮುನಿ. ಪಾಂಡುರಾಜನಿಗೆ ಶಾಪವನ್ನು ನೀಡಿದವನು.

**ಗಾಂಗೇಯ:** ಗಂಗಾದೇವಿ ಮತ್ತು ಶಂತನು ರಾಜನ ಮಗ.

# ಶಾಪಕ್ಕೆ ಗುರಿಯಾದ ಪಾಂಡುರಾಜ

ಆಕೆಗಳ್ ಇರ್ವರುಮ್ ಎರಡುಮ್ ಕೆಲದೊಳಿರೆ, ಕಲ್ಪಲತೆಗಳ್ ಎರಡಱ ನಡುವಣ ಕಲ್ಪವೃಕ್ಷಮ್ ಇರ್ಪಂತಿರ್ದ ಪಾಂಡುರಾಜಂಗೆ ಧೃತರಾಷ್ಟ್ರನ್ ಅಂಗಹೀನನ್ ಎಂದು ವಿವಾಹದ ಒಸಗೆಯೊಡನೆ ಪಟ್ಟಬಂಧದ ಒಸಗೆಯಮ್ ಮಾಡಿ ನೆಲನನ್ ಆಳಿಸೆ;

ಮೀಱುವೆವು ಎಂಬ ಮಾಂಡಳಿಕರ್, ಈಯದರ್ ಎಂಬ ಅದಟರ್, ವಯಲ್ಗೆ ಮೆಯ್ದೋಱುವೆವು ಎಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱೆ, ಪಾಂಡರಾಜನಾ ತೇಜದ ದಳ್ಳುರಿ ನಭಕ್ಕೆ ಪಾಱಿದುದು.

ಗಂಡರ ನೆತ್ತಿಯೊಳ್ ಒತ್ತಿ ಬಾಳನ್ ಇನ್ನೂಱುಗುಮ್ ಎಂದೊಡೆ ಏನ್ ಪಿರಿದೋ. ಸಮುದ್ರಮುದ್ರಿತ ಧರಾಚಕ್ರಮ್ ಬೆಸಕೆಯ್ದತ್ತು; ಪ್ರತಾಪಕ್ಕೆ ಅಗುರ್ವಿಸೆ ದಿಶಾಚಕ್ರಮ್ ಗೋಳುಂಡೆಗೊಳುತ್ತುಮ್ ಇರ್ದುದು. ಪೊದಳ್ದ ಆಜ್ಞೆಗಮ್ ಪೆಸರ್ಗಮ್ ವಿಯಚ್ಚಕ್ರಮ್ ಸಮಂತು ಮುನ್ನಮೆ ರೂಪುವೋದುದು ಎಂಬಿನಮ್ ಜಸಮ್ ಆ ಪಾಂಡುರಮ್ ಆದುದು.

ನೃಪರೊಳ್ ಆ ಪಾಂಡುರಾಜಂಬರಮ್ ಆರ್; ಅಂತು ಪಾಂಡುರಾಜನ್ ಅಧಿಕ ತೇಜನುಮ್, ಅವನತ ವೈರಿ ಭೂಭೃತ್ ಸಮಾಜನುಮ್ ಆಗಿ ನೆಗಳುತ್ತ ಇರ್ದು, ಒಂದು ದಿವಸಮ್ ತೋಪಿನ ಬೇಂಟೆಯನ್ ಆಡಲ್ ಅಳ್ತಿಯಿಮ್ ಪೋಗಿ...

ಇನಿಯಳನ್ ಅಳ್ತಿಯಿಂದೆ ಮೃಗಿ ಮಾಡಿ, ಮನೋಜಸುಖಕ್ಕೆ ಸೋಲ್ತು, ಅಲಂಪಿನೆ ನೆರೆಯಲ್ಕೆ ದಿವ್ಯಮುನಿಯುಮ್ ಮೃಗಮ್ ಆಗಿ ಮರಳ್ದು ಕೂಡೆ, ಮೆಲ್ಲನೆ ಮೃಗಮೆಂದು ಸಾರ್ದು, ನೆಱನಮ್ ನಡೆ ನೋಡಿ ನರೇಂದ್ರನ್ ಭೋಂಕನೆ ಮೃಗಚಾರಿಯನ್ ಎಚ್ಚು, ತನಗೆ ಅದೊಂದು ಮಾರಿಯನ್ ಮಾಣದೆ ತಂದನ್. ಆಗಳ್ ಪ್ರಳಯದ ಉಳ್ಕುಮ್ ಉಳ್ಕುವಂತೆ, ತನ್ನೆಚ್ಚ ಅಂಬು ಮುನಿಕುಮಾರನ ಕಣ್ಣೊಳಮ್ ಎರ್ದೆಯೊಳಮ್ ಉಕ್ಕೆ...

**ಕಿಂದಮ ಮುನಿ:** ಪೇೞಿಮ್ ಎನ್ನನ್ ಆವನ್ ಎಚ್ಚನ್.

(ಎಂಬ ಮುನಿಯ ಮುನಿದ ಸರಮನ್ ಕೇಳ್ದು, ಬಿಲ್ಲನ್ ಅಂಬುಮನ್ ಈಡಾಡಿ ತನ್ನ ಮುಂದೆ ನಿಂದಿರ್ದ ಭೂಪನನ್ ಮುನಿ ನೋಡಿ...)

**ಕಿಂದಮ ಮುನಿ:** ರತಕ್ಕೆ ಸನ್ನತದಿನ್ ಎಳಸಿ ನಲ್ಲಳೊಳ್ ಓತು ಒಡಗೂಡಿದ ಎನ್ನನ್ ಇಂತು ಅನ್ನೆಯಮ್ ಎಚ್ಚುದರ್ಕೆ, ದಂಡಮ್ ಅದು ಪೆರತಿಲ್ಲ. ನೀನ್ ನಲ್ಲಳೊಳ್ ಒಱಲ್ದು ನಡೆ ನೋಡಿಯುಮ್, ಬಯಸಿ ಕೂಡಿಯುಮ್ ಆಗಡೆ ಸಾವೆಯಾಗಿ, ಇನ್ ಪೋಗು.

(ಎನೆ ಆ ಮಹೀಶ್ವರನ್ ರೌದ್ರಶಾಪ ಪರಿತಾಪ ವಿಳಾಪದೊಳ್...)

**ಪಾಂಡುರಾಜ:** (ತನ್ನಲ್ಲಿಯೇ)

ಎನ್ನ ಗೆಯ್ದ ಕಾಮಾಕ್ರಾಂತಕ್ಕೆ ಕಾಮಕೃತಮ್ ಏನ್ ಪಿರಿದಲ್ತು. ಎತ್ತ ವನಮ್... ಎತ್ತ ಮೃಗಯಾವೃತ್ತಕಮ್... ಈ ತಪಸ್ವಿ ಎತ್ತ... ಎತ್ತ ಮೃಗಮ್ ಎಂದು... ಎಂತು ಆನ್ ಎತ್ತ ಎಚ್ಚೆನ್. ಆತ್ಮ ಕರ್ಮಾಯತ್ತಮ್ ಪೆಱತಲ್ತು. ಇದೆಲ್ಲಮ್ ಅಘಟಿತ ಘಟಿತಮ್.

(ಎಂದು ಚಿಂತಿಸುತ್ತುಮ್ ಪೊಳಲ್ಗೆ ಮಗುಳ್ದುವಂದು, ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗೆ ತದ್ವೃತ್ತಾಂತಮ್ ಎಲ್ಲಮನ್ ಪೇಳ್ದು, ಸಮಸ್ತ ವಸ್ತುಗಳನ್ ದೀನ ಅನಾಥಜನಂಗಳ್ಗೆ ಸೂಱೆಗೊಟ್ಟು ನಿಜ ಪರಿವಾರಮಮ್ ಬರಿಸಿ...)

**ಪಾಂಡುರಾಜ:** ಸಂಸಾರಮ್ ಅನಂಗ ಜಂಗಮಲತಾ ಲಲಿತಾಂಗಿಯರಿಂದಮ್ ಸಾರಮ್ ಅಲ್ತೆ. ತನ್ಮುನಿ ಶಾಪದಿಂದಮ್ ಇದೆಂಬುದು ಇನ್ ಎನಗೆ ತಪ್ಪುದು. ವನವಾಸದೊಳ್ ಇರ್ಪೆನ್. ಇದರ್ಕೆ ಇನ್ನಾರುಮ್ ವಕ್ರಿಸದಿರಿಮ್.

(ಎಂದು ದುರ್ವಾರ ಪರಾಕ್ರಮನ್ ತಳರೆ, ಕುಂತಿ ಮಾದ್ರಿಯರ್ ಬಾರಿಸಿವಾರಿಸಿ ಬೆನ್ನ ಬೆನ್ನನೆ ಬರೆ... ಬಿನ್ನ ಬಿನ್ನನೆ ಪೋಗಿ, ತುಂಗ ವನ್ಯ ಮತಂಗಜ ದಂತಾಘಾತ ನಿಪಾತಿತ ಸಲ್ಲಕೀ ಭಂಗಮಮ್; ಮಣಿಮೌಕ್ತಿಕ ನೀಳ ಸ್ಥೂಳ ಶಿಲಾ ಪ್ರವಿಭಾಸಿತ ಉತ್ತುಂಗಮಮ್; ಮುನಿ ಮುಖ್ಯ ಮುಖ ಅಂಭೋಜೋದರ ನಿರ್ಗತ ಮಂತ್ರ ಪೂತ ಅಂಗಮಮ್; ಉದ್ಯತ್ ಶೃಂಗಮನ್ ಆ ಶತಶೃಂಗಮಮ್ ನೃಪನ್ ಎಯ್ದಿದನ್.)

# ಕುಂತಿಯ ಬಯಕೆ

## (೧೧೬ ನೆಯ ಗದ್ಯದಿಂದ ೧೧೯ ನೆಯ ಗದ್ಯ)

### ಪಾತ್ರಗಳು

**ಪಾಂಡುರಾಜ:** ಕುಂತಿ ಮತ್ತು ಮಾದ್ರಿಯರ ಗಂಡ. ಕಿಂದಮನೆಂಬ ರಿಸಿಯ ಶಾಪದ ಕಾರಣದಿಂದಾಗಿ ಹಸ್ತಿನಾವತಿಯ ರಾಜ್ಯಪಟ್ಟವನ್ನು ತೊರೆದು ಈಗ ಕಾಡಿನಲ್ಲಿ ನೆಲೆಸಿದ್ದಾನೆ.

**ಕುಂತಿ:** ಪಾಂಡುರಾಜನ ಹೆಂಡತಿ.

**ದುರ್ವಾಸ:** ಒಬ್ಬ ಮುನಿ.

**ಕುಂತಿಭೋಜ:** ಕುಂತಳ ದೇಶದ ರಾಜ. ಕುಂತಿಯ ಸಾಕು ತಂದೆ. ಶೂರಸೇನನ ಸೋದರತ್ತೆಯ ಮಗನಾದ ಕುಂತಿಭೋಜನು ತನಗೆ ಮಕ್ಕಳಿಲ್ಲದ್ದರಿಂದ ಕುಂತಿಯು ಚಿಕ್ಕ ವಯಸ್ಸಿನ ಬಾಲೆಯಾಗಿದ್ದಾಗಲೇ ಅವಳನ್ನು ದತ್ತು ಮಗಳನ್ನಾಗಿ ಪಡೆದಿದ್ದನು.

**ಧೃತರಾಷ್ಟ್ರ:** ಹಸ್ತಿನಾವತಿಯ ರಾಜ. ಪಾಂಡುರಾಜನ ಅಣ್ಣ.

**ಗಾಂಧಾರಿ:** ಧೃತರಾಷ್ಟ್ರನ ಹೆಂಡತಿ.

**ಯಮರಾಜ:** ದೇವಲೋಕದಲ್ಲಿರುವ ಒಬ್ಬ ದೇವತೆ.

# ಕುಂತಿಯ ಬಯಕೆ

ಪಾಂಡುರಾಜನ್ ಈ ತಪೋವನಮೆ ಪಾವನಮ್ ಎಂದು ತಪೋವನದ ಮುನಿಜನದ ಪರಮ ಅನುರಾಗಮನ್ ಪೆರ್ಚಿಸಿ , ಕಾಮಾನುರಾಗಮನ್ ಬೆರ್ಚಿಸಿ, ತದಾಶ್ರಮದೊಳ್ ಆಶ್ರಮಕ್ಕೆ ಗುರುವಾಗೆ ಇರ್ಪನ್ನೆಗಮ್, ಇತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳನ್ ಪಡೆವಂತು ಪರಾಶರ ಮುನೀಂದ್ರನೊಳ್ ಬರಮ್ ಪಡೆದಳ್ ಎಂಬುದನ್ ಕುಂತಿ ಕೇಳ್ದು ತಾನುಮ್ ಪುತ್ರಾರ್ಥಿಯಾಗಲ್ ಬಗೆದು...)

**ಕುಂತಿ:** (ಪಾಂಡುರಾಜನ ಮುಂದೆ)

ಎನ್ನಯ ನಿಷ್ಫಲ ಪುಷ್ಪದರ್ಶನಮ್ ವಿಸಸನದೊಳ್ ವಿರೋಧಿ ನೃಪರನ್ ತಱಿದು ಒಟ್ಟಲುಮ್, ಅರ್ಥಿಗೆ ಅರ್ಥಮನ್ ಕಸವಿನ ಲೆಕ್ಕಮೆಂದು ಕುಡಲುಮ್, ವಿಪುಳ ಆಯತಿಯಮ್ ದಿಗಂತದೊಳ್ ಪಸರಿಸಲುಮ್ ಕರಮ್ ನೆಱೆವ ಮಕ್ಕಳನ್ ಈಯದೆ, ನೋಡೆ ನಾಡೆ ಇಕ್ಷುಪುಷ್ಪದವೊಲ್ ನೋಯಿಸಿದಪುದು.

(ಎಂದು ಚಿಂತಾಕ್ರಾಂತೆಯಾಗಿರ್ದ ಕುಂತಿಯನ್ ಕಂಡು ಪಾಂಡುರಾಜನ್ ಏಕಾಂತದೊಳ್ ಇಂತು ಎಂದನ್.)

**ಪಾಂಡುರಾಜ:** ತಳೋದರೀ, ಚಿಂತೆ ಇದೇನೊ... ಸಂತತಿಗೆ ನೆಟ್ಟನೆ ಮಕ್ಕಳೆ ಬಾರ್ತೆಯಪ್ಪೊಡೆ ಇನ್ನು ಇಂತಿರವೇಡ. ನೀನ್ ನಿಜಾತ್ಯಂತ ಪತಿವ್ರತಾಗುಣದಿನ್ ದಿವ್ಯ ಮುನಿಪುಂಗವರನ್ ಬಗೆ ತೀರ್ಪಿನಮ್ ಅರ್ಚಿಸಿ ಮೆಚ್ಚಿಸು. ದಿಗಂತ ವಿಶ್ರಾಂತ ಯಶರ್ಕಳಮ್ ವರ ತನೂಭವರನ್ ನೀನ್ ಪಡೆ.

(ಎಂದೊಡೆ ಕೊಂತಿ ಇಂತು ಎಂದಳ್.)

**ಕುಂತಿ:** ಎನ್ನ ಕನ್ನಿಕೆಯಾ ಕಾಲದೊಳ್ ನಾನ್ ಎನ್ನ ಮಾವನ್ ಕೊಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸ ಮಹಾಮುನಿಯರ್ ಎಮ್ಮ ಮನೆಗೆ ನಿಚ್ಚಕ್ಕಮ್ ಬರ್ಪರ್. ಅವರ್ ಎನ್ನ ವಿನಯಕ್ಕಮ್ ಭಕ್ತಿಗಮ್ ಬೆಸಕೆಯ್ವುದರ್ಕಮ್ ಮೆಚ್ಚಿ ಮಂತ್ರಾಕ್ಷರಂಗಳನ್ ಅಯ್ದುಮ್ ವರವಿತ್ತರ್. **"ಈ ಅಯ್ದು ಮಂತ್ರಕೆ ನಿನ್ನ ಬಗೆಗೆ ಬಂದವರನ್ ಆಹ್ವಾನಮ್ ಗೆಯ್ಯಲ್ ಅವರ ಪೋಲ್ವೆಯ ಅಯ್ವರ್ ಮಕ್ಕಳನ್ ಪಡೆವೆ"** ಎಂದು ಬೆಸಸಿದೊಡೆ, ಈಗಳ್ ಎನ್ನ ಪುಣ್ಯದಿನ್ ಒಳ್ಳಿತ್ತು ದೊರೆಕೊಂಡುದು.

**ಪಾಂಡುರಾಜ:** ಅದರ್ಕೆ ಏನುಮ್ ಚಿಂತಿಸಲ್ವೇಡ. ದಿವ್ಯ ಮುನಿ ವಾಕ್ಯಮ್ ಅಮೋಘ ವಾಕ್ಯಮ್ ಅಕ್ಕುಮ್.

**ಕುಂತಿ:** ಅಂತೆ ಗೆಯ್ವೆನ್.

(ಎಂದು ತೀರ್ಥಜಲಂಗಳಮ್ ಮಿಂದು, ದಳಿಂಬವನ್ ಉಟ್ಟು, ಮುತ್ತಿನ ತೊಡಿಗೆಗಳನ್ ತೊಟ್ಟು, ದರ್ಭಶಯನದೊಳ್ ಇರ್ದು, ಜ್ಞಾನದಿನ್ ಇರ್ದು ನಿಟ್ಟಿಪೊಡೆ, ದಿವ್ಯ ಮುನೀಂದ್ರನ ಕೊಟ್ಟ ಮಂತ್ರ ಸಂತಾನಮನ್ ಓದಿಯೋದಿ, ಅದ್ಭುತ ತೇಜನನ್ ಯಮ ರಾಜನನ್ ಜಾನದಿಮ್ ಸರೋಜಾನನೆ ಬರಿಸೆ, ಯಮನ್ ಬಂದು...)

**ಯಮ:** ಬೆಸನ್ ಆವುದು... ಆತ್ಮಾನುಗತಾರ್ಥಮ್ ಆವುದು.

**ಕುಂತಿ:** ನಿನ್ನನೆ ಪೋಲ್ವ ಪುತ್ರನನ್ ಎನಗೆ ಈವುದು.

**ಯಮ:** ತಥಾಸ್ತು.

(ಎಂದು ಯಮಭಟ್ಟಾರಕನ್ ತನ್ನ ಅಂಶಮನ್ ಆಕೆಯ ಗರ್ಭದೊಳ್ ಅವತರಿಸಿ ಅಂತರ್ಧಾನಕ್ಕೆ ಸಂದನ್.)



# ೮. ಗಾಂಧಾರಿಯ ಆತಂಕ

## (೧೨೮ ನೆಯ ಗದ್ಯದಿಂದ ೧೩೪ ನೆಯ ಪದ್ಯ)

### ಪಾತ್ರಗಳು

**ಗಾಂಧಾರಿ:** ಹಸ್ತಿನಾವತಿಯ ರಾಜನಾದ ಧೃತರಾಷ್ಟ್ರನ ಹೆಂಡತಿ. ಪಟ್ಟದ ರಾಣಿ. ಗಾಂಧಾರ ರಾಜ ಸುಬಲನ ಮಗಳು. ಶಕುನಿಯು ಗಾಂಧಾರಿಯ ಸೋದರ.

**ಧೃತರಾಷ್ಟ್ರ:** ಹಸ್ತಿನಾವತಿಯ ರಾಜ.

**ವ್ಯಾಸ:** ಒಬ್ಬ ಮುನಿ. ಪರಾಶರ ಮುನಿ ಮತ್ತು ಯೋಜನಗಂಧಿಯ ಮಗ.

**ವಿದುರ:** ಅಂಬಿಕೆಯ ದಾಸಿ ಮತ್ತು ವ್ಯಾಸನ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಹಿರಿಯ ಮಗ.

**ದುಶ್ಶಾಸನ:** ದುರ್ಯೋಧನನ ತಮ್ಮ.

## ಗಾಂಧಾರಿಯ ಆತಂಕ

ಭರತಕುಲತಿಲಕರಪ್ಪ ಇರ್ವರ್ ಮಕ್ಕಳನ್ ಪೆತ್ತು ಕೊಂತಿ ಸಂತಸದ ಅಂತಮನ್ ಎಯ್ದಿ ಇರ್ಪುದುಮ್, ಅತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು, ತನ್ನ ಗರ್ಭಮ್ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ...

**ಗಾಂಧಾರಿ:** (ತನ್ನಲ್ಲಿಯೇ)

ಸಂತತಿಗೆ ಪಿರಿಯ ಮಕ್ಕಳನ್ ಆನ್ ತಡೆಯದೆ ಪಡೆವೆನ್ ಎಂದೊಡೆ, ಎನ್ನಿಮ್ ಮುನ್ನಮ್ ಕೊಂತಿಯೆ ಪಡೆದಳ್. ಗರ್ಭದ ಚಿಂತೆಯದು ಇನ್ನೇವುದು...

(ಎಂದು ಬಸಿಱನ್ ಪೊಸೆದಳ್. ಪೊಸೆದೊಡೆ ಪಾಲ್ಗಡಲನ್ ಮಗುಳ್ದು ಅಸುರರ್ ಪೊಸೆದಲ್ಲಿ ಕಾಳಕೂಟ ಅಂಕುರಮ್ ಅಂದು ಅಸದಳಮ್ ಒಗೆದಂತೆ, ಬಸಿಱಿನ್ ನೂಱೊಂದು ಪಿಂಡಮ್ ಅರುಣಾಕೀರ್ಣಮ್ ಒಗೆದುವು. ಅವಮ್ ಕಂಡು ಕಿನಿಸಿ ಕಿರ್ಚೆಳ್ದು...)

**ಗಾಂಧಾರಿ:** ಇವೆಲ್ಲವಮ್ ಪೊಱಗೆ ಬಿಸುಟು ಬನ್ನಿಮ್.

(ಎಂಬುದುಮ್ ವ್ಯಾಸಭಟ್ಟಾರಕನ್ ಬಂದು ಗಾಂಧಾರಿಯನ್ ಬಗ್ಗಿಸಿ...)

**ವ್ಯಾಸ:** ನಿನ್ನ ಸಂತತಿಗೆ ಒಂದೆ ಗರ್ಭದೊಳೆ ನೂರ್ವರ್ ಉದಗ್ರ ಸುತರ್ಕಳ್ ಒದವುಗೆ ಎನೆ, ಕೆಮ್ಮನೆ ಇಂತು ಪೊಸೆದಿಕ್ಕಿದೆ. ಪೊಲ್ಲದು ಗೆಯ್ದೆ.

(ಎಂದು ಮಾಣದೆ ಮುನಿ ನೂಱು ಪಿಂಡಮುಮನ್ ಆಗಳೆ ತೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ, ಸೃಷ್ಟಿಗೆ ಚೋದ್ಯಮಪ್ಪಿನಮ್, ಅಂತು ನೂರ್ವರೊಳ್ ಒರ್ವನ್ ಅಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣ ವಯಸ್ಕನಾಗಿ ಘೃತಘಟ ವಿಘಟನುಮಾಗೆ ಪುಟ್ಟುವುದುಮ್...

ಪ್ರತಿಮೆಗಳ್ ಅಳ್ತುವು. ಧಾತ್ರಿ ಅತಿ ರಭಸದೆ ಮೊಳಗಿದುದು. ದೆಸೆಗಳ್ ಉರಿದುವು, ಭೂತ ಪ್ರತತಿಗಳ್ ಆಡಿದುವು. ಅತಿ ರಮ್ಯಸ್ಥಾನದೊಳ್ ಶಿವಾ ನಿವಹಂಗಳ್ ಒಳಱಿದುವು. ಅಂತು ಒಗೆದ ಅನೇಕ ಉತ್ಪಾತಂಗಳಮ್ ಕಂಡು, ಮುಂದಱಿವ ಚದುರ ವಿದುರನ್ ಇಂತು ಎಂದನ್...)

**ವಿದುರ:** ಈತನೆ ನಮ್ಮ ಕುಲಕ್ಕಮ್ ಕೇತು. ದಲ್, ಆನ್ ಅಱಿವೆನ್. ಅಲ್ಲದಂದು ಇನಿತು ಉತ್ಪಾತಮ್ ಏಕೆ ತೋರ್ಪುವು. ಬಿಸುಡುವುದು. ಈತನ ಪೆಱಗುಳಿದ ಸುತರೆ ಸಂತತಿಗೆ ಅಪ್ಪರ್.

(ಎಂದೊಡಮ್ ಪುತ್ರಮೋಹ ಕಾರಣಮಾಗಿ ಧೃತರಾಷ್ಟ್ರನುಮ್ ಗಾಂಧಾರಿಯುಮ್ ಏಗೆಯ್ದುಮ್ ಒಡಂಬಡದೆ ಇರ್ದೊಡೆ, ಮಹಾ ಬ್ರಾಹ್ಮಣರಿಂದಮ್ ಉತ್ಪಾತ ಶಾಂತಿಕ ಪೌಷ್ಟಿಕ ಕ್ರಿಯೆಗಳಮ್ ಬಳೆಯಿಸಿ, ಬದ್ದವಣಮನ್ ಬಾಜಿಸಿ, ಮಂಗಳಮನ್ ಪಾಡಿಸಿ, ಕೂಸಿಂಗೆ ದುರ್ಯೋಧನನೆಂದು ಪೆಸರನ್ ಇಟ್ಟು, ಮತ್ತಿನ ಕೂಸುಗಳ್ಗೆಲ್ಲಮ್ ದುಶ್ಶಾಸನ ಆದಿಯಾಗಿ ನಾಮಂಗಳನ್ ಇಟ್ಟು, ಪರಕೆಯಮ್ ಕೊಟ್ಟು, ಸುಕಮ್ ಇರ್ಪನ್ನೆಗಮ್...)



# ೯. ಪಾಂಡುರಾಜನ ಸಾವು

## (೧೫ ನೆಯ ಗದ್ಯದಿಂದ ೨೯ ನೆಯ ಗದ್ಯ)

### ಪಾತ್ರಗಳು

| | |
|---|---|
| **ಪಾಂಡುರಾಜ:** | ಹಸ್ತಿನಾವತಿಯಲ್ಲಿ ರಾಜನಾಗಿದ್ದವನು, ಈಗ ಕಾಡಿನಲ್ಲಿ ಆಶ್ರಮವಾಸಿಯಾಗಿದ್ದಾನೆ. |
| **ಕುಂತಿ:** | ಪಾಂಡುರಾಜನ ಮೊದಲನೆಯ ಹೆಂಡತಿ. |
| **ಮಾದ್ರಿ:** | ಪಾಂಡುರಾಜನ ಎರಡನೆಯ ಹೆಂಡತಿ. |
| **ಮಕ್ಕಳು:** | ಧರ್ಮರಾಯ–ಭೀಮ–ಅರ್ಜುನ–ನಕುಲ–ಸಹದೇವ. |
| **ಮುನಿಜನರು:** | ಶತಶೃಂಗ ಪರ್ವತದ ಬಳಿಯ ಆಶ್ರಮವಾಸಿಗಳು. |
| **ಗಾಂಗೇಯ:** | ಶಂತನು ಮತ್ತು ಗಂಗಾದೇವಿಯ ಮಗ. |
| **ಧೃತರಾಷ್ಟ್ರ:** | ಹಸ್ತಿನಾವತಿಯ ರಾಜ. |
| **ವಿದುರ:** | ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ. |
| **ವ್ಯಾಸ:** | ಮತ್ಸ್ಯಗಂಧಿ ಮತ್ತು ಪರಾಶರ ಮುನಿಯ ಮಗ. |
| **ಸತ್ಯವತಿ:** | ದಾಶರಾಜನ ಸಾಕು ಮಗಳು ಮತ್ತು ಶಂತನು ಮಹಾರಾಜನ ಹೆಂಡತಿ. |
| **ಅಂಬಿಕೆ:** | ಕಾಶಿರಾಜನ ಎರಡನೆಯ ಮಗಳು. ಧೃತರಾಷ್ಟ್ರನ ತಾಯಿ. |
| **ಅಂಬಾಲೆ:** | ಪಾಂಡುರಾಜನ ತಾಯಿ. |

## ಪಾಂಡುರಾಜನ ಸಾವು

ಅಂತು ಬಂದ ಬಸಂತದೊಳ್ ಮಾದ್ರಿ ತಾನ್ ಗರ್ವವ್ಯಾಲೆಯುಮ್ ಕ್ರೀಡಾನುಶೀಲೆಯುಮ್ ಅಪ್ಪುದಱಿಮ್ ವನಕ್ರೀಡಾ ನಿಮಿತ್ತದಿನ್ ಪೋಗಿ,

ವನಕುಸುಮಂಗಳನ್ ಬಗೆಗೆ ವಂದುವನ್ ಅಳ್ತಿಯೊಳ್ ಆಯ್ದು ಕೊಯ್ದು ಮೆಲ್ಲನೆ ವಕುಳ ಆಳವಾಳ ತಳದೊಳ್ ಸುರಿದು, ಅಂಬುಜಸೂತ್ರದಿಂದೆ ಮತ್ತನಿತಱೊಳಮ್ ಮುಗುಳ್ಸರಿಗೆ, ತೋಳ್ವಳೆ, ಕಂಕಣ, ಆರಮ್ ಎಂದು ಬೇಳ್ಪನಿತನೆ ಮಾಡಿ ತೊಟ್ಟು, ಆಕೆ ಬಸಂತಕಾಂತೆವೊಲ್ ಕರಮ್ ಒಪ್ಪಿದಳ್. ಅಂತು ತೊಟ್ಟ ಪೂದುಡುಗೆ ಮದನನ ತೊಟ್ಟ ಪೂಗಣೆಗೆ ಎಣೆಯಾಗಿರೆ...

ಮಿಳಿರ್ವ ಕುರುಳ್ಗಳೊಳ್ ತೊಡರ್ದು, ದೇಸಿಯನ್ ಆವಗಮ್ ಈವ ಚೆನ್ನ ಪೂಗಳನ್ ಅವನ್ ಒಯ್ಯನೆ ಓಸರಿಸುತುಮ್, ವದನಾಬ್ಜದ ಕಂಪನ್ ಆಳ್ದು ಉಣಲ್ ಬಳಸುವ ತುಂಬಿಯನ್ ಪಿಡಿದ ನೆಯ್ದಿಲೊಳ್ ಒಯ್ಯನೆ ಸೋವುತುಮ್ ಬೆಡಂಗೊಳಕೊಳೆ, ಸೊರ್ಕಿದ ಅಂಗಜ ಮತಂಗಜದಂತಿರೆ ಬರ್ಪ ಮಾದ್ರಿಯನ್ ತಾಪಸ ಆಶ್ರಮದಿನ್ ಪೊಱಮಟ್ಟು ಬನಮನ್ ಅಂತೆ ತೊಳಲ್ವ ಪಾಂಡುರಾಜನ್ ಕಂಡು...

ತೊಟ್ಟ ಪೂದುಡುಗೆ ಸೊಗಯಿಸೆ, ಮೆಲ್ಲೆರ್ದೆಯೊಳ್ ಗಾಡಿ ತಡಮಾಡೆ, ದಿಟ್ಟಿಗಳೊಳ್ ಅನಂಗರಾಗರಸಮ್ ಉಣ್ಮುವಿನಮ್ ನಡೆ ನೋಡಿ ನೋಡಿ, ತೊಟ್ಟಗೆ ಕೊಳೆ ಮೇಲೆ ಪಾಯ್ದು, ಅವಳನ್ ಆ ವಿಭು ತನ್ನ ಶಾಪಮನ್ ಬಗೆಯದೆ ಮಿಳ್ತು ದೇವತೆಯನ್ ಅಳ್ಕಱ್ ಅಳುರ್ಕೆಯಿನ್ ಅಪ್ಪುವಂತೆವೋಲ್ ಅಪ್ಪಿದನ್.

ಅಂತು ಅಪ್ಪುವುದುಮ್, ವಿಷಮ ವಿಷವಲ್ಲಿಯನ್ ಅಪ್ಪಿದಂತೆ ತಳ್ತ ನಲ್ಲಳ

ಮೃದು ಮೃಣಾಳ ಕೋಮಳ ಬಾಹುಪಾಶಂಗಳೆ ಯಮಪಾಶಂಗಳಾಗೆ...

ಬಿಗಿದು ಅಮರ್ದಿರ್ದ ತೋಳ್ ಸಡಿಲೆ, ಮೊಗಮ್ ಜೋಲೆ, ಮೊಗದಿಂದಮ್ ಒಯ್ಯಗೊಯ್ಯಗೆ ನಗೆಗಣ್ಗಳ್ ಆಲಿ ಮಗುಳ್ದಂತಿರೆ ಮುಚ್ಚಿರೆ, ಸುಯ್ ಅಡಂಗೆ... ಮೆಲ್ಲಗೆ ಮಱಸೊಂದಿದ ಅಂದದೊಳೆ ಜೋಲ್ದ ನಿಜೇಶನನ್ ಆ ಲತಾಂಗಿ ತೊಟ್ಟಗೆ ಕೊಳೆ ನೋಡಿ...)

**ಮಾದ್ರಿ:** ಕೆಟ್ಟೆನ್ ಇನಿಯನ್ ಮಱಸೊಂದಿದನೋ ಬಳಲ್ದನೋ.

(ಎಂದು ಪಱಪಟ್ಟ ಸುಯ್ಯುಮನ್, ಕೋಡುವ ಮೆಯ್ಯುಮನ್ ಕಂಡು ಪರಲೋಕಪ್ರಾಪ್ತನ್ ಆದುದನ್ ಅಱಿತು...)

**ಮಾದ್ರಿ:** ಓಪನೆ, ತಾಪಸನ ಶಾಪಮ್ ಎಂಬುದು ಪಾಪದ ರೂಪ. ನೀನ್ ಅಱಿತುಮ್ ಅಱಿಯದಂತೆ ಮನಂಗಾಪಳಿದು ಬಂದು ಪಾಪಕರ್ಮಿಯ ಎನ್ನ ಮೆಯ್ಯನ್ ಏಕೆ ಮುಟ್ಟಿದೆ. ನೀನ್ ನಿನ್ನ ಸಾವನ್ ಅದನ್ ಎನಸುನ್ ನೆನೆಯದೆ, ನೆರೆವೆನ್ ಎಂಬ ಬಗೆಯೊಳ್ ಬಂದಯ್. ಅರಸ, ನಿನ್ನೊಡನೆ ವಂದು ದಿವದೊಳ್ ನಿನ್ನ ಮನೋರಥಮನ್ ನೆಱಪದೆ ಮಾಣೆನ್. ಬಿದಿಯೆ, ಉನ್ನತ ಧವಳಚ್ಛತ್ರಚ್ಛನ್ನ ವಿಯತ್ತಳನನ್ ಇಂದುಕುಳತಿಳಕನನ್ ಇಂತು ಈ ಪಳುವಿನೊಳ್ ಎನ್ನ ಅರಸನನ್ ಅನ್ನೆಯದಿಂದ ಇಂತು ತಂದಿಕ್ಕುವುದೇ.

(ಎಂದು ವನದೇವತೆಗಳ್ಗೆಲ್ಲಮ್ ಕರುಣಮಾಗೆ ಪಳಯಿಸುವ ಮಾದ್ರಿಯ ಸರಮನ್ ಕುಂತಿ ಕೇಳ್ದು... ಭೋಂಕನೆ ಎರ್ದೆ ತೆಱೆದು...)

**ಕುಂತಿ:** ಆ ದೆಸೆಯೊಳ್ ಭೂಭುಜನೋ... ಆ ದೆಸೆಯೊಳ್ ಮಾದ್ರಿ ನೆಗೆವ ಕರುಣಾ ರವಮ್... ಅಂತು ಆ ದೆಸೆಯೊಳ್ ಭೂಪತಿಗೆ ಬಿದಿಯೆ ಏನಾದುದೊ ಪೇಳ್, ಕೆಟ್ಟೆನ್ ಅಳಿದೆನ್.

(ಎನುತ್ತುಮ್, ಮಕ್ಕಳ್ ಬಳಿಯನೆ ಭೋರ್ಗರೆದು ಅಳುತುಮ್ ಪೆಱ ಪೆಱಗನ್ ಅಂತೆ ಪರಿತರೆ, ಮುಡಿ ಬಿಟ್ಟೆಳಲೆ, ನಡು ನಡುಗೆ, ಕಣ್ಣೀರ್ ಗಳಗಳನೆ ಒರ್ಮೊದಲೆ ಸುರಿಯೆ ಪರಿತಂದಾಗಳ್, ಅಂತು ತನ್ನ ನಲ್ಲನ ಕಳೇವರಮನ್ ತಳ್ಕೈಸಿಕೊಂಡು ತನ್ನ ಸಾವನ್ ಪರಿಚ್ಛೇದಿಸಿ ಪಲ್ಲನ್ ಸುಲಿಯುತ್ತುಮ್ ಇರ್ದ ಮಾದ್ರಿಯನ್ ಕಂಡು, ಕುಂತಿ ನೆಲದೊಳ್ ಮೆಯ್ಯನ್ ಈಡಾಡಿ ನಾಡಾಡಿಯಲ್ಲದೆ ಪಳಯಿಸಿ...)

| | |
|---|---|
| **ಕುಂತಿ:** | ಅರಸ, ಎನ್ನುಮನ್, ಎನ್ನೀ ನಡಪಿದ ಶಿಶುಗಳುಮನ್ ಅಡವಿಯೊಳ್ ಇರಿಸಿ, ನೀನ್ ಪೇಳದೆ ಪೋದಡಮ್ ಏನೋ. ನಿನ್ನ ಬಳಿಯನೆ ನಡೆತರ್ಪೆನ್. ನಿನ್ನ ಬಿಸುಟು ಎಂತಿರ್ಪೆನ್.<br><br>(ಮಾದ್ರಿಯನ್ನು ಕುರಿತು)<br><br>ನೀನ್ ಈ ಕೂಸುಗಳನ್ ಕೈಕೊಂಡು ನಡಪು. ನಲ್ಲನನ್ ಎನಗೆ ಒಪ್ಪಿಸು... ಆನ್ ಆತನ್ ಆದುದನ್ ಅಪ್ಪೆನ್.<br><br>(ಎನೆ ಮಾದ್ರಿ ಇಂತು ಎಂದಳ್...) |
| **ಮಾದ್ರಿ:** | ಇಂದಿನ ಒಂದು ಸೂಳುಮನ್ ಎನಗೆ ಇನಿಯನ್ ದಯೆಗೆಯ್ದನ್. ಎನ್ನ ಸೂಳಮ್ ನಿನಗೆ ಆನ್ ಎನಿತಾದೊಡಮ್ ಈವೆನೆ. ಮತ್ತನಯರ್ ಕೆಯ್ಯೆಡೆ. ಪೆಱಪೆಱವನ್ ಪಲುಂಬದಿರ್.<br><br>(ಎಂದು ತಪೋವನದ ಮುನಿಜನಮುಮ್ ವನದೇವತಾ ಜನಮುಮ್ ತನ್ನ ಅಣ್ಮನ್ ಪೊಗಳೆ, ಮಾದ್ರಿ ಪಾಂಡುರಾಜನೊಡನೆ ದಾಹೋತ್ತರದಂತೆ ಕಿರ್ಚಿಂಗೆ ಕುಲದೊಳಮ್ ಚಲದೊಳಮ್ ಆವ ಕಂದುಮ್ ಕುಂದುಮ್ ಇಲ್ಲದೆ, ತನ್ನ ಒರೆಗಮ್ ದೊರೆಗಮ್ ಆರುಮಿಲ್ಲ ಎನಿಸಿದಾಗಳ್, ಕುಂತಿ ಶೋಕಾಕ್ರಾಂತೆಯಾಗಿರೆ ತಪೋವನದ ತಪೋವೃದ್ಧರ್ ಆ ಕಾಂತೆಯನ್ ಇಂತೆಂದು ಸಂತೈಸಿದರ್.) |
| **ಮುನಿಜನ:** | ಅಳ್ತೊಡೆ ಅವರ್ ಏಳ್ವೊಡಮ್ ಕಳಿದವರ್ಗೆ ಅಳ್ವುದು. ಅಂತು ಅವರಿಮ್ ಬಳಿಕ್ಕೆ ತಾಮ್ ಉಳಿವೊಡಮ್ ಅಳ್ವುದು. ಅಂತು ಅವರ್ ಏಳರ್. ಅಣಮ್ ತಮಗಮ್ ಬರ್ದುಕಿಲ್ಲ. ಧರ್ಮಮನ್ ಗಳಿಯಿಸಿಕೊಳ್ವುದೊಂದೆ ಚದುರ್. ಇಂತುಟು ಸಂಸೃತಿ ಧರ್ಮಮ್. ಏಕೆ ಬಾಯಳಿವುದು. ಇದೇಕೆ ಚಿಂತಿಸುವುದು. ಏಕೆ ಪಲುಂಬುವುದು. ಏಕೆ ನೋವುದೋ. ಅಂತುಮ್ ಅಲ್ಲದೆ ಬಿಡದೆ ಅಳಲ್ವ ಬಂಧು ಜನದ ಒಳ್ಕುಡಿಯದ ಕಣ್ಣೀರ ಪೂರಮ್ ಆ ಪ್ರೇತಮನ್ ಓಗಡಿಸದೆ ಸುಡುವುದು ಗಡಮ್. ಸರೋಜದಳಾಕ್ಷೀ, ಈ ಶೋಕಮನ್ ಇನ್ನು ಉಡುಗುವುದು. ನೀನ್ ಇಂತು ಶೋಕಾಕ್ರಾಂತೆಯಾಗಿ ಸಂಸಾರ ಸ್ಥಿತಿಯನ್ ಅಱಿಯದ ಅಜ್ಞಾನಿಗಳಂತೆ ವಿಪ್ರಳಾಪಮ್ ಗೆಯ್ದೆಯಪ್ಪೊಡೆ, ಈ ಕೂಸುಗಳ್ ಮನಮ್ ಇಕ್ಕಿಯುಮ್, ಎರ್ದೆ ಇಕ್ಕಿಯುಮ್ ಕಿಡುವರ್. |

(ಎಂದು ಅನೇಕ ಉಪಶಾಂತವಚನಂಗಳಿಂದಮ್ ಆಕೆಯ ಉಬ್ಬೆಗಮನ್ ಆಱೆ ನುಡಿದುಮ್, ಅಲ್ಲಿಯ ಮುನಿಜನಮ್ ಎಲ್ಲಮ್ ಆ ಕೂಸುಗಳುಮನ್ ಕುಂತಿಯುಮನ್ ಮುಂದಿಟ್ಟು ಒಡಗೊಂಡು ನಾಗಪುರಕ್ಕೆ ವಂದು, ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗಮ್ ಅಂಬಾಲೆಗಮ್ ಪಾಂಡುರಾಜನ ವೃತ್ತಾಂತಮನ್ ಅಱಿಪಿದೊಡೆ, ಆಗಳ್ ತುಱುಗಿದ ಹಿಮ ಬಿಂದುಗಳಿಂದೆ ಎಱಗಿದ ನವ ವನಜ ವನದ ವೋಲ್ ಬಂಧು ಮುಖ ವನಜ ವನನ್ ಶೋಕದಿನ್ ಅಂದು ಒಱೆವ ನಯನೋದಬಿಂದುವಿನ್ ಒರ್ಮೊದಲೆ ಎಱಗಿದುದು; ಆಗಳ್ ಪುತ್ರಸ್ನೇಹದಿಂದೆ ಅತಿ ಪ್ರಳಾಪಮ್ ಗೆಯ್ವ ಅಂಬಾಲೆಯುಮನ್ ಬಂಧುಜನ ನಿರೀಕ್ಷಣದಿನ್ ಶೋಕಮ್ ಮಱುಕಣಿಸೆ ಬಾಯಳಿದು ಪಳಯಿಸುವ ಕುಂತಿಯುಮನ್ ಗಾಂಗೇಯ ಧೃತರಾಷ್ಟ್ರ ವಿದುರರ್ಕಳುಮನ್ ಸತ್ಯವತೀದೇವಿಯುಮನ್ ಸಂತೈಸಿ, ಪಾಂಡುರಾಜಂಗೆ ಜಳದಾನಾದಿಕ್ರಿಯೆಗಳನ್ ನಿರ್ವರ್ತಿಸಿ, ತದನಂತರದೊಳ್ ಅದುವೆ ನಿರ್ವೇಗಮಾಗೆ ವ್ಯಾಸ ವಚನದೊಳ್ ಸತ್ಯವತಿಯುಮ್ ಅಂಬಿಕೆಯುಮ್ ಅಂಬಾಲೆಯುಮ್ ಸಂಸಾರ ವಿಶೀರ್ಣೆಯರಾಗಿ ಮುನಿವನಮನ್ ಆಶ್ರಯಿಸಿದರ್.)



# ೧೦. ದ್ರೋಣನಿಗೆ ಅಪಮಾನ

(೪೬ ನೆಯ ಗದ್ಯದಿಂದ ೫೦ ನೆಯ ಗದ್ಯ)

## ಪಾತ್ರಗಳು

ದ್ರುಪದ: ಪಾಂಚಾಲ ದೇಶದ ಅರಸ. ಛತ್ರಾವತಿ ಪಟ್ಟಣದಲ್ಲಿ ನೆಲೆಸಿದ್ದಾನೆ.

ದ್ರೋಣ: ಭರದ್ವಾಜ ರಿಸಿಯ ಮಗ.

ಪಡಿಯರ: ಅರಮನೆಯ ದ್ವಾರಪಾಲಕ

# ದ್ರೋಣನಿಗೆ ಅಪಮಾನ

ತನ್ನ ಒಡನಾಡಿಯಪ್ಪ ಕೆಳೆಯನ್ ದ್ರುಪದನ್ ಛತ್ರಾವತಿಯೊಳ್ ಅರಸುಗೆಯ್ದಪನ್ ಎಂದು ಕೇಳ್ದು, ಆ ಪೊಳಲ್ಗೆ ವಂದು ದ್ರುಪದನ ಅರಮನೆಯ ಬಾಗಲೊಳ್ ನಿಂದು ಪಡಿಯಱನನ್ ಕರೆದು...

**ದ್ರೋಣ:** ನಿಮ್ಮೊಡನಾಡಿದ ಕೆಳೆಯನ್ ದ್ರೋಣನೆಂಬ ಪಾರ್ವನ್ ಬಂದನೆಂದು ನಿಮ್ಮರಸಂಗೆ ಅಱಿಯೆ ಪೇಳ್.

(ಎಂಬುದುಮ್, ಆತನ್ ಆ ಮಾಳ್ಕೆಯೊಳೆ ಬಂದು ಅಱಿಪುವುದುಮ್, ದ್ರುಪದನ್ ರಾಜ್ಯಮದಿರಾ ಮದೋನ್ಮತ್ತನುಮ್ ಗರ್ವಗ್ರಹ ವ್ಯಗ್ರಚಿತ್ತನುಮಾಗಿ ಮೇಗಿಲ್ಲದೆ...)

**ದ್ರುಪದ:** ಅಂತೆಂಬನ್ ಆರ್ಗೆ... ಪಿರಿದುಮ್ ಭ್ರಾಂತು ದಲ್ ಏನ್... ದ್ರೋಣನ್ ಎಂಬನೇನ್ ಪಾರ್ವನೆ... ಪೇಳ್, ಎಂತು ಎನಗೆ ಕೆಳೆಯನೇ... ಅಂತಪ್ಪನನ್ ಅಱಿಯೆನ್ ನೂಂಕು.

(ಎಂದು ಸಭೆಯೊಳ್ ನುಡಿದನ್. ಅಂತು ನುಡಿದುದನ್ ಪಡಿಯಱನ್ ಬಂದು ಆ ಮಾಳ್ಕೆಯೊಳೆ ಅಱಿಪೆ, ದ್ರೋಣನ್ ಒತ್ತಂಬದಿಂದೆ ಒಳಗಮ್ ಪೊಕ್ಕು... ದ್ರುಪದನನ್ ಕಂಡು...)

**ದ್ರೋಣ:** ಅಣ್ಣ, ನೀಮುಮ್ ಆಮುಮ್ ಒಡನೆ ಓದಿದೆವು ಎಂಬುದನ್ ಅಱಿಯಿರೆ.

**ದ್ರುಪದ:** ನಿನ್ನನ್ ಆನ್ ಅಱಿಯೆನ್. ಅದೆಲ್ಲಿ ಕಂಡೆಯೊ... ಮಹೀಪತಿಗಮ್ ದ್ವಿಜವಂಶಜಂಗಮ್ ಏತಱ ಕೆಳೆ. ಇಂತು ಮಾನಸರ್ ನಾಣಿಲಿಗರಪ್ಪರೆ.

(ಎಂಬ ಮಾತುಗಳ್ ನೆಱಗೊಳೆ, ಆ ದ್ರುಪದನ್ ಕುಂಭಸಂಭವನನ್ ಕಡು ಸಿಗ್ಗು ಮಾಡಿದನ್. ಅಂತು ಮಾಡಿದುದುಮ್ ಅಲ್ಲದೆ...)

**ದ್ರುಪದ:** ಈ ನಾಣಿಲಿ ಪಾರ್ವನನ್ ಎಳೆದು ಕಳೆಯಿಮ್.

(ಎಂಬುದುಮ್, ದ್ರೋಣನ್ ಇಂತು ಎಂದನ್.)

**ದ್ರೋಣ:** ನುಡಿ ತಡವಪ್ಪುದು ಒಂದು; ಮೊಗದೊಳ್ ಮುಱುಕಮ್ ದೊರೆಕೊಳ್ವುದು ಒಂದು; ನಾಣ್ಗೆ ಎಡೆಗುಡದೆ ಇರ್ಪುದು ಒಂದು; ನುಡಿಗಳ್ ಮೊಱೆಯನ್ ಮಱೆಯಿಪ್ಪುದು ಒಂದು; ಇಂತು ಕಳ್ಗುಡಿದವರ ಅಂದಮ್ ಸಿರಿ ಸಾರ್ತರೆ ಸಾರ್ವುದು. ಅದರ್ಕೆ ಸಂದೆಯಮ್ ಪಡದೆ **'ಸಿರಿ ಕಳ್ಳೊಡವುಟ್ಟಿತು'** ಎಂಬುದನ್ ಈಗಳ್ ಜಲಕ್ಕನೆ ಅಱಿದೆನ್.

(ಎಂದು ಸೈರಿಸದೆ...)

ಖಳ ನೊಳವಿಂಗೆ ಕುಪ್ಪೆ ವರಮ್ ಎಂಬವೊಲ್ ನಿನ್ನದೊಂದು ಅಳವು ಆಂಬರಮ್ ಉಂಟೆ. ಒಡನೆ ಓದಿದ ಒಂದು ಬೆರಗಿಂಗೆ ಎನಗೆ ಕೊಲಲ್ಕೆ ಆಗದು. ಈ ಸಭಾವಳಯದೊಳ್ ಎನ್ನನ್ ಏಳಿಸಿದ ನಿನ್ನನ್ ಅನಾಕುಳಮ್ ಎನ್ನ ಚಟ್ಟರಿಮ್ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತೆನೇ.

(ಎಂದು ಆರೂಢಪ್ರತಿಜ್ಞನಾಗಿ ನಾಗಪುರಕ್ಕೆ ವಂದು, ತಮ್ಮ ಭಾವನ್ ಕೃಪನ ಮನೆಯೊಳ್ ಅಪಗತಪರಿಶ್ರಮನ್ ಆಗಿರ್ದು...)



# ೧೧. ದ್ರುಪದನ ಮಾನಹಾನಿ

(೫೯ ನೆಯ ಗದ್ಯದಿಂದ ೬೪ ನೆಯ ಗದ್ಯ)

## ಪಾತ್ರಗಳು

**ದ್ರೋಣ:** ಹಸ್ತಿನಾವತಿಯಲ್ಲಿ ಕುರುವಂಶದ ರಾಜಕುಮಾರರಿಗೆ ಶಸ್ತ್ರ ವಿದ್ಯೆ ಮತ್ತು ಶಾಸ್ತ್ರ ವಿದ್ಯೆಯನ್ನು ಹೇಳಿಕೊಡುತ್ತಿರುವ ಗುರು.

**ದ್ರುಪದ:** ಪಾಂಚಾಲ ದೇಶದ ರಾಜ. ಚಿಕ್ಕಂದಿನಲ್ಲಿ ದ್ರೋಣ ಮತ್ತು ದ್ರುಪದ ಇಬ್ಬರೂ ಒಂದೇ ಗುರುಕುಲದಲ್ಲಿ ವಿದ್ಯೆಯನ್ನು ಕಲಿತಿದ್ದರು.

**ಅರ್ಜುನ:** ಅಯ್ದು ಮಂದಿ ಪಾಂಡವರಲ್ಲಿ ಒಬ್ಬ. ಪಾಂಡು ಮತ್ತು ಕುಂತಿಯ ಮಗ.

# ದ್ರುಪದನ ಮಾನಹಾನಿ

ಆಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಮ್ ಸಮೆಯಿಸುವ ಸೂತ್ರಧಾರನಂತೆ ಭಾರದ್ವಾಜನ್ ಶಸ್ತ್ರವಿದ್ಯಾಭ್ಯಾಸಮ್ ಗೆಯ್ಯುತ್ತಿರೆ, ತಾರಾಗಣಂಗಳ ನಡುವಣ ಸಕಳಕಳಾಧರನಂತೆ ದೇಶಾಧೀಶ್ವರರಪ್ಪ ಪಲಂಬರ್ ರಾಜಕುಮಾರರ ನಡುವೆ ಶಸ್ತ್ರಕಳಾಧರನಾಗಿ, ತನ್ನುಮನ್ ಗೆಲೆವಂದ ಸಾಮಂತ ಚೂಡಾಮಣಿಯ ಶರಪರಿಣತಿಯನ್ ಆರಯಲೆಂದು, ಛಾಯಾಲಕ್ಷ್ಯಮನ್ ಒಡ್ಡಿಯುಮ್ ಆಯದ ನೀರೊಳಗೆ ತನ್ನನ್ ಅಡಸಿದ ನೆಗಳನ್ ಬಾಯ್ ಅಳಿವಿನಮ್ ಇಸಿಸಿಯುಮ್...

**ದ್ರೋಣ:** ಅರೆ... ಹೋ... ಅಜ... ಬಾಪ್ಪು...

(ಎಂದು ಹರಿಗನನ್ ಗುರು ಪೊಗಳ್ದನ್. ಅಂತು ಪೊಗಳ್ದು...)

**ದ್ರೋಣ:** (ತನ್ನ ಮನದಲ್ಲಿ)

ತನ್ನ ಪಗೆವನಪ್ಪ ದ್ರುಪದನನ್ ಈತನ್ ಅಮೋಘಮ್ ಗೆಲಲ್ ನೆಱೆಗುಮ್.

(ಎಂದು ನಿಶ್ಚೈಸಿ...)

**ದ್ರೋಣ:** (ಅರ್ಜುನನ್ನು ಕುರಿತು)

ಅಣುಗಿನೊಳ್ ಎನ್ನ ಚಟ್ಟರೊಳಗೆ ಈತನೆ ಜೆಟ್ಟಿಗನೆಂದು ವಿದ್ದೆಯನ್ ಗುಣಕಱುಗೊಂಡು ಕೊಟ್ಟ ಎನಗೆ ಸಂತಸಮಪ್ಪಿನಮ್ ಈವ ನಿನ್ನ ದಕ್ಷಿಣೆಯದು. ಬೇಗಮ್ ಆ ದ್ರುಪದನನ್ ಕೋಡಗಗಟ್ಟುಗಟ್ಟಿ ತಂದು ಅಣಿಯರಮ್ ಒಪ್ಪಿಸು. ಪರಸೈನ್ಯ ಭೈರವಾ, ಆನ್ ಇಂತು ಇದನೆ ಬೇಡಿದೆನ್ ಗಡ.

(ಎಂಬುದುಮ್)

**ಅರ್ಜುನ:** ಈ ಬೆಸನ್ ಆದಾವುದು ಗಹನಮ್.

(ಎಂದು ಪೂಣ್ದು ಪೋಗಿ, ಒಡವಂದ ಅಂಕದ ಕೌರವರ್ ದ್ರುಪದನ ಅಂಬೇಱಿಂಗೆ ಮೆಯ್ಯೊಡ್ಡದೆ ಒಡ್ಡೊಡೆದು ಓಡುತ್ತಿರೆ, ಬೀಳ್ವ ತಲೆಗಳ್ ಸೂಸೆ, ಆಗಳ್ ಸೂೞ್ಪಟ್ಟನ್. ಜವನ್ ಪಿಡಿದು ಈಡಾಡುವ ಮಾಳ್ಕೆಯಂತೆ ಪಲರನ್ ಕೊಂದಿಕ್ಕಿ, ಮೆಯ್ಮುಟ್ಟೆ ವಂದು, ಎಡೆಯೊಳ್ ಮಾಣದೆ ಉರುಳ್ಚಿ ಕಟ್ಟಿ ರಿಪುವನ್ ದ್ರೋಣನಾ ಮುಂದೆ ಇಕ್ಕಿದನ್. ಆಗಳ್ ಆ ಕುಂಭಸಂಭವನ್ ಪರಾಕ್ರಮಧವಳನ ಪರಾಕ್ರಮಕ್ಕೆ ಮೆಚ್ಚಿ, ಕದಂಪನ್ ಕರ್ಚಿ, ದ್ರುಪದನನ್ ತನ್ನ ಮಂಚದ ಕಾಲೊಳ್ ಕಟ್ಟವೇಳ್ದು, ತಲೆಯ ಮೇಲೆ ಕಾಲನ್ ಅವಷ್ಟಂಭದಿನ್ ನೀಡಿ...)

**ದ್ರೋಣ:** (ದ್ರುಪದನನ್ನು ಕುರಿತು)

ಸಿರಿ ಮೆಯ್ಯೊಳಗೆ ಅಂದು ಅಱಿವಿರೆ... ನೆರವಿಯೊಳ್ ಆರ್ ಅಱಿವರ್... ಒರ್ಮೆ ಕಂಡರನ್ ಅಱಿಯಲ್ಕೆ ಅರಿದು... ಎಮ್ಮನ್ ಬಡ ಪಾರ್ವರನ್. ಅರಸರೆ, ನೀಮ್ ಈಗಳ್ ಅಱಿವಿರ್... ಅಱಿಯಿರೊ ಪೇೞಿಮ್.

(ಎಂದು ಸಾಯೆ ಸರಸಮ್ ನುಡಿದು, ಮತ್ತಮ್ ಇಂತು ಎಂದನ್.)

**ದ್ರೋಣ:** ಆದಿ ಕ್ಷತ್ರಿಯರೇ ನೀಮ್... ಆದಿತ್ಯನನ್ ಇೞಿಪ ತೇಜರಿರ್. ಪಾರ್ವನ ಕಾಲ್ ನಿಮಗೆ ಮೋದೆ, ನಡುತಲೆಯಲ್ ಇರ್ಪುದುಮ್ ಆದುದು.

(ಎಂದು ನುಡಿದು ಕಾಯ್ಪಿನೊಳ್ ಒದೆದನ್, ಒದೆದು...)

**ದ್ರೋಣ:** ನಿನ್ನನ್ ಇನಿತು ಪರಿಭವಮ್ ಪಡಿಸಿದುದು ಸಾಲ್ಗುಮ್. ನಿನ್ನನ್ ಕೊಲಲ್ ಆಗದು. ಕೊಂದೊಡೆ ಮೇಲಪ್ಪ ಪಗೆಗೆ ಅಂಜಿ ಕೊಂದಂತಾಗಿರ್ಕುಮ್.

(ಎಂದು ಕಟ್ಟಿದ ಕಟ್ಟುಗಳೆಲ್ಲಮಮ್ ತಾನೆ ಬಿಟ್ಟು ಕಳೆದು...)

**ದ್ರೋಣ:** ಪೋಗು.

(ಎಂಬುದುಮ್, ದ್ರುಪದನನ್ ಪರಿಭವಾನಳನ್ ಅಳವಲ್ಲದೆ ಅೞುರೆ...)

**ದ್ರುಪದ:** ನಿನ್ನನ್ ಕೊಲ್ವನ್ನನ್ ಒರ್ವ ಮಗನುಮನ್, ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳ್ ಒರ್ವ ಮಗಳುಮನ್ ಪಡೆದಲ್ಲದೆ ಇರೆನ್.

(ಎಂದು ಮಹಾ ಪ್ರತಿಜ್ಞಾರೂಢನಾಗಿ ಪೋದನ್.)



# ೧೨. ಕರ್ಣನಿಗೆ ಅಂಗರಾಜ್ಯದ ಪಟ್ಟ

(೭೭ ನೆಯ ಗದ್ಯದಿಂದ ೮೫ ನೆಯ ಗದ್ಯ)

## ಪಾತ್ರಗಳು

**ದುರ್ಯೋಧನ:** ಗಾಂಧಾರಿ ಮತ್ತು ಧೃತರಾಷ್ಟ್ರನ ಹಿರಿಯ ಮಗ

**ದ್ರೋಣ:** ಹಸ್ತಿನಾವತಿಯಲ್ಲಿ ಕುರುವಂಶದ ರಾಜಕುಮಾರರಿಗೆ ಶಸ್ತ್ರ ವಿದ್ಯೆ ಮತ್ತು ಶಾಸ್ತ್ರ ವಿದ್ಯೆಯನ್ನು ಹೇಳಿಕೊಡುತ್ತಿರುವ ಗುರು.

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

**ಕೃಪ:** ಹಸ್ತಿನಾವತಿಯಲ್ಲಿ ಕುರುವಂಶದ ರಾಜಕುಮಾರರಿಗೆ ಚಿಕ್ಕಂದಿನಲ್ಲಿ ಶಸ್ತ್ರ ವಿದ್ಯೆ ಮತ್ತು ಶಾಸ್ತ್ರ ವಿದ್ಯೆಯನ್ನು ಹೇಳಿಕೊಡುತ್ತಿದ್ದ ಗುರು.

**ವಿದುರ:** ಅಂಬಿಕೆಯ ದಾಸಿ ಮತ್ತು ವ್ಯಾಸನ ಮಗ.

**ಕರ್ಣ:** ಕುಂತಿ ಮತ್ತು ಸೂರ್ಯದೇವನ ಮಗ.

ಸೂತ ಮತ್ತು ರಾಧೆ ಕರ್ಣನ ಸಾಕು ತಂದೆ ತಾಯಿ.

**ಅರ್ಜುನ:** ಅಯ್ದು ಮಂದಿ ಪಾಂಡವರಲ್ಲಿ ಒಬ್ಬ. ಪಾಂಡುರಾಜ ಮತ್ತು ಕುಂತಿಯ ಮಗ.

**ಧೃತರಾಷ್ಟ್ರ:** ಅಂಬಿಕೆ ಮತ್ತು ವ್ಯಾಸನ ಮಗ.

**ಗಾಂಧಾರಿ:** ಧೃತರಾಷ್ಟ್ರನ ಹೆಂಡತಿ.

## ಕರ್ಣನಿಗೆ ಅಂಗರಾಜ್ಯದ ಪಟ್ಟ

ಆಗಳ್ ಆ ಪರಾಕ್ರಮಧವಳನ ಶರಪರಿಣತಿಯನ್ ಕಂಡು ದುರ್ಯೋಧನನ ಮೊಗಮ್ ತಲೆನವಿರ ಗಂಟಿಮ್ ಕಿಱಿದಾಗೆ; ದ್ರೋಣ ಭೀಷ್ಮ ಕೃಪ ವಿದುರ ಪ್ರಭೃತಿಗಳ ಮೊಗಮ್ ಅರಲ್ದ ತಾವರೆಯಿಮ್ ಪಿರಿದಾಗೆ; ತೊಳಗುವ ತೇಜಮ್ ತೊಳತೊಳ ತೊಳಗುವ ದಿವ್ಯಾಸ್ತ್ರಮ್, ಅಮರ್ದ ಕೋದಂಡಮ್ ಸಭಾಸದರನ್ ಅಸುಂಗೊಳಿಸೆ ಮನಂಗೊಳಿಸೆ ಭಯಂಗೊಳಿಸೆ ಉಱದೆ ಕರ್ಣನ್ ಬಂದನ್. ಬಂದು ದ್ರೋಣಾಚಾರ್ಯಂಗೆ ಪೊಡಮಟ್ಟು, ಶರಧಿಯಿನ್ ದಿವ್ಯಾಸ್ತ್ರಂಗಳನ್ ಉರ್ಚಿಕೊಂಡು, ಅರಿಗನ ಬಿಲ್ಬಲ್ಮೆಯೊಳ್ ಅಂದು ಎರಡಿಲ್ಲದೆ ಬಗೆದ ಮುಳಿಸುಮ್ ಏವಮುಮ್ ಎರ್ದೆಯೊಳ್ ಬರೆದಿರೆ, ಆಯತಕರ ಪರಿಘನ್ ಕರ್ಣನ್ ಆತ್ಮ ಶರಪರಿಣತಿಯನ್ ತೋಱಿದನ್. ಅಂತು ತೋಱಿಯುಮ್ ಎರ್ದೆಯ ಮುಳಿಸು ನಾಲಗೆಗೆ ವರೆ, ಸೈರಿಸಲಾಱದೆ ವಿದ್ವಿಷ್ಟ ವಿದ್ರಾವಣನನ್ ಇಂತು ಎಂದನ್.

**ಕರ್ಣ:** ಸಂಗತದಿನ್ ಈ ರಂಗಮೆ ರಣರಂಗಮಾಗೆ ಈಗಳ್ ಇಂತು ಕಾದುವಮ್. ಅಳವಮ್ ಪೊಂಗದಿರ್ ಇದಿರ್ಚು. ಅದೇನ್ ಗಳ... ಗಂಡರ್ ರಂಗಂಬೊಕ್ಕಾಡುವಂತೆ ಪೆಂಡರೆ.

(ಎಂಬುದುಮ್ ಅತಿರಥಮಥನನ್ ಇಂತು ಎಂದನ್.)

**ಅರ್ಜುನ:** ಕರ್ಣ, ಈ ನೆರೆದ ಗುರುಜನಂಗಳ ಮಾನಿನಿಯರ ಮುಂದೆ ಪೊಲ್ಲದು ನುಡಿದ್ಯೆ. ಎನ್ನ ಈ ನಿಡುದೋಳ್ಗಳ ತೀನಮ್ ನೀನ್ ಮಳ್ಗಿಸುವೆಯಪ್ಪೊಡೆ ಆನ್ ಒಲ್ಲದನೇ.

(ಎಂಬುದುಮ್ ದ್ರೋಣನುಮ್ ಕೃಪನುಮ್ ಎಡೆಗೆ ವಂದು ಕರ್ಣನನ್ ಇಂತು ಎಂದರ್.)

**ದ್ರೋಣ:** ಏವದ ಮುಳಿಸಿನ ಕಾರಣಮ್ ಆವುದೊ.

**ಕೃಪ:** ಕರ್ಣ, ನೀನ್ ನಿನ್ನ ತಾಯ ತಂದೆಯ ದೆಸೆಯನ್ ಭಾವಿಸದೆ ನುಡಿವಂತು... ನಿನಗಮ್ ಅರಿಕೇಸರಿಗಮ್ ಸಮಕಟ್ಟು ಆವುದು.

(ಎಂಬುದುಮ್, ಆ ಮಾತಿಂಗೆ ಮಱುವಾತು ಕುಡಲ್ ಅಱಿಯದೆ, ಪಂದೆಯನ್ ಪಾವ್ ಅಡರ್ದಂತೆ ಉಮ್ಮನೆ ಬೆಮರುತ್ತುಮ್ ಇರ್ದ ಕರ್ಣನನ್ ದುರ್ಯೋಧನನ್ ಕಂಡು, ದ್ರೋಣನುಮನ್ ಕೃಪನುಮನ್ ಇಂತು ಎಂದನ್.)

**ದುರ್ಯೋಧನ:** ಬೀರಮೆ ಕುಲಮಲ್ಲದೆ ಕುಲಮ್ ಎಂಬುದುಂಟೆ. ಕುಲಮನ್ ಇಂತು ಪಿಕ್ಕದಿರಿಮ್. ನೀಮ್ ಒಲಿದು ಎಲ್ಲಿ ಪುಟ್ಟಿ ಬಳೆದಿರೊ. ಕೊಡದೊಳಮ್ ಶರಸ್ತಂಬದೊಳಮ್ ಕುಲಮ್ ಇರ್ದುದೆ. (ಎಂದು ನುಡಿದು...)

**ದುರ್ಯೋಧನ:** ಕರ್ಣನನ್ ಈಗಳೆ ಕುಲಜನನ್ ಮಾಡಿ ತೋರ್ಪೆನ್.

(ಎಂದು ಕೆಯ್ಯನ್ ಪಿಡಿದು ಒಡಗೊಂಡು ಪೋಗಿ ಕನಕಪೀಠದ ಮೇಲೆ ಕುಳ್ಳಿರಿಸಿ, ಕನಕ ಕಳಶದಲ್ ತೀವಿದ ಅಗಣ್ಯಪುಣ್ಯ ತೀರ್ಥೋದಕಂಗಳಮ್ ಚತುರ್ವೇದಪಾರಗರಿಂದ ಅಭಿಷೇಕಂಗೆಯ್ಸಿ, ಮಂಗಳ ಪಱೆಗಳ್ ಶುಭ ವಚನಂಗಳ್ ಚಮರೀರುಹಂಗಳ್ ಆ ಶ್ವೇತಚ್ಛತ್ರಂಗಳ್ ಅಮರ್ದು ಎಸೆಯೆ, ಅಂಗಮಹೀತಳ ವಿಭೂತಿಯನ್ ಕರ್ಣಂಗೆ ನೆಱೆಯಿತ್ತನ್. ಅಂತು ಇತ್ತು ನಿತ್ಯದಾನಕ್ಕೆ ದೇವ ಸಬಳದ ಪದಿನೆಂಟು ಕೋಟಿ ಪೊನ್ನುಮನ್ ಇತ್ತು...)

**ದುರ್ಯೋಧನ:** ನೀನ್ ಎನಗೆ ಒಂದನ್ ಈಯಲ್ವೇಳ್ಪುದು. ಪೊಡಮಡುವರ್; ಜೀಯ ಎಂಬರ್; ಕುಡು ದಯೆಗೆಯ್; ಏನ್ ಪ್ರಸಾದಮ್ ಎಂಬ ಇವು ಪೆಱರೊಳ್ ನಡೆಗೆ. ಎಮ್ಮ ನಿನ್ನ ಎಡೆಯೊಳ್ ನಡೆಯಲ್ವೇಡ . ರಾಧೇಯಾ, ಎನಗೆ ಕೆಳೆಯನ್ನೆ.

(ಎಂದು ಬೇಡಿಕೊಂಡು ಕರ್ಣನನ್ ಮುಂದಿಟ್ಟು ಒಡಗೊಂಡು ಪೋಗಿ ಧೃತರಾಷ್ಟ್ರಂಗಮ್ ಗಾಂಧಾರಿಗಮ್ ಪೊಡಮಡಿಸಿದಾಗಳ್...)



# ೧೩. ದುರ್ಯೋಧನನ ಒಳಸಂಚು

## (೮೮ ನೆಯ ಗದ್ಯದಿಂದ ೯೨ ನೆಯ ಗದ್ಯ)

### ಪಾತ್ರಗಳು

**ದುರ್ಯೋಧನ:** ಗಾಂಧಾರಿ ಮತ್ತು ಧೃತರಾಷ್ಟ್ರನ ಹಿರಿಯ ಮಗ.

**ಭೀಮ:** ಆಯ್ದು ಮಂದಿ ಪಾಂಡವರಲ್ಲಿ ಒಬ್ಬ. ಪಾಂಡುರಾಜ ಮತ್ತು ಕುಂತಿಯ ಮಗ,

**ಅರ್ಜುನ:** ಅಯ್ದು ಮಂದಿ ಪಾಂಡವರಲ್ಲಿ ಒಬ್ಬ. ಪಾಂಡುರಾಜ ಮತ್ತು ಕುಂತಿಯ ಮಗ.

**ಕರ್ಣ:** ಕುಂತಿ ಮತ್ತು ಸೂರ್ಯದೇವನ ಮಗ.

**ಪಾಂಡು:** ಅಂಬಾಲೆ ಮತ್ತು ವ್ಯಾಸನ ಮಗ.

**ಧೃತರಾಷ್ಟ್ರ:** ಅಂಬಿಕೆ ಮತ್ತು ವ್ಯಾಸನ ಮಗ. ಹಸ್ತಿನಾವತಿಯ ರಾಜ.

**ಪುರೋಚನ:** ಹಸ್ತಿನಾವತಿಯಲ್ಲಿದ್ದ ಒಬ್ಬ ಹೆಗ್ಗಡೆ.

# ದುರ್ಯೋಧನನ ಒಳಸಂಚು

ಆಗಳ್ ದುರ್ಯೋಧನನ್ ಭೀಮಸೇನನ ಬಲ್ಲಾಳ್ತನದ ಅಳವುಮನ್ ವಿಕ್ರಮಾರ್ಜುನನ ದಿವ್ಯಾಸ್ತ್ರ ಕೌಶಳಮುಮನ್ ಕಂಡು, ತನ್ನ ಎರ್ದೆಯುಮ್ ಪೊಳ್ಳು ಮರನಮ್ ಕಿರ್ಚು ಅಳುರ್ವಂತೆ ಒಳಗೊಳಗೆ ಅಳುರೆ ಸೈರಿಸಲಾಱದೆ, ಕರ್ಣನನ್ ಕರೆದು ಆಳೋಚಿಸಿ ತಮ್ಮಯ್ಯನಲ್ಲಿಗೆ ಪೋಗಿ ಪೊಡಮಟ್ಟು ಕಟ್ಟೇಕಾಂತದೊಳ್ ಇಂತು ಎಂದನ್.

**ದುರ್ಯೋಧನ:** ಪಿರಿಯರ್ ನೀಮ್ ಇರೆ, ಮುನ್ ಪಟ್ಟಮಮ್ ಕಟ್ಟೆ ಪಾಂಡುರಾಜನೆ ಭೂಭರಮಮ್ ತಾಳ್ದಿದನ್ ವಲಮ್. ಈಗಳ್ ಆತನ ಸುತರ್ ತಾಮ್ ಆಗಳೇ ಪಟ್ಟಕ್ಕೆ ಯೋಗ್ಯರಾಗರೆ. ತಗುಳ್ದು ಪಾವಿಂಗೆ ಪಾಲನ್ ಎಱೆವಿರ್. ದಾಯಾದ್ಯರನ್ ಪಿರಿಯರ್ ಮಾಡಿದಿರ್. ಎಮ್ಮ ಸಾವುಮ್ ಉಳಿವುಮ್ ದೈವೇಚ್ಛೆಯಾಯ್ತು... ಆಗದೇ.

ಅದಲ್ಲದೆಯುಮ್ ಮಲೆ ತಲೆದೋಱದೆ ಎಂದುದನೆ ಕೊಟ್ಟುದು. ಡಂಗಮ್ ಅಡಂಗಿ ಬಂದುದು. ಕುಱುಂಬು ಒಕ್ಕಲಿಗ ಪೆಸರ್ಗೆ ಪೂಣ್ದುದು. ಮಿಕ್ಕ ಶತ್ರು ಮಂಡಳಿಕರೆ ತಱುಂಬದೆ ಮಿತ್ರ ಮಂಡಳಿಕರಾದರ್. ಮಾರ್ಮಲೆದರನ್ ಇಕ್ಕಿ ಇಂದು ನಾಳೆ ಈ ನೆಲೆಯಿಮ್ ಅನಾಕುಳಮ್ ನಮ್ಮನ್ ಗುಣಾರ್ಣವನ್ ಎಳೆದಿಕ್ಕುಗಮ್. ಅಂತು ವಿಕ್ರಮಾರ್ಜುನನ್ ಬಿಲ್ಗೊಳಲುಮ್, ಭೀಮಸೇನನ್ ಗದೆಗೊಳಲುಮ್ ಆಂಪುದು ಅರಿದು. ಉಪಾಂಶುವಧದೆ ಕೆಯ್ಗೆ ಮಾಡುವುದು ಉತ್ತಮಪಕ್ಷಮ್.

ಅಂತುಮ್ ಅಲ್ಲದೆಯುಮ್ "ಸ್ವಾಮ್ಯಾರ್ಥಮ್ ಸ್ವಾಮ್ಯ

ವಿಕ್ರಾಂತಮ್ ಮರ್ಮಜ್ಞಮ್ ವ್ಯವಸಾಯಿನಮ್; ಅರ್ಧರಾಜ್ಯ ಹರಮ್ ಭೃತ್ಯಮ್ ಯೋನ ಹನ್ಯಾತ್ಸ ಹನ್ಯತೇ" ಎಂಬುದು ಅರ್ಥಶಾಸ್ತ್ರ ಸದ್ಭಾವಮ್. ಮೇಣ್ ಕುಲಮಿಲ್ಲೆಯೋ... ನಮಗೆ ದಾಯಿಗರಲ್ಲರೋ ಶಸ್ತ್ರವಿದ್ಯೆಯೊಳ್ ಪೂಣ್ಕೆಗಳಿಲ್ಲೆಯೋ... ಧರೆಗೆ ಮುನ್ನ ಅವರಯ್ಯನೆ ಮುಖ್ಯನಲ್ಲನೋ... ಅಯ್ಯ, ನಿಮಗೆ ಮನದಲ್ ಜಾಣ್ ಕಿಱಿದಾಗವೇಡ. ವಿಧಾತೃಯೋಗದಿನ್ ಕಣ್ ಕುರುಡಾದಡೆ ಏನೊ... ನಿಮ್ಮ ಬುದ್ಧಿಯುಮ್ ಕುರುಡಾಗಲೆವೇಳ್ಪುದೆ.

(ಎಂದು ತನ್ನ ಮನದೊಳ್ ಒಡಂಬಡೆ ನುಡಿದ ಮಗನ ಮಾತನ್ ಧೃತರಾಷ್ಟ್ರನ್ ಮನದೆಗೊಂಡು...)

**ಧೃತರಾಷ್ಟ್ರ:** ಎರ್ದೆಗೊಂಡ ಕಜ್ಜಮನೆ ಏನ್ ಪೇಳ್ದೆಯೊ ಕಂದ. ಅವರ್ಗಳ್ ನಿನಗೆ ಏನಾನುಮ್ ಅಪಾಯಮನ್ ಬಗೆವರೆಂದೆ ಆನುಮ್ ಚಿಂತಿಸುತಿರ್ಪೆನ್. ಪೇಳ್, ನೀನಿರೆ ವೈರಿಗಳ್ಗೆ ಪಟ್ಟಮುಮ್ ನೆಲನುಮ್ ಅಪ್ಪುದನ್ ಒಲ್ವೆನೆ. ನೀನೇನುಮ್ ಅದರ್ಕೆ ಚಿಂತಿಸದಿರ್. ಪಾಂಡುಪುತ್ರರನ್ ಇಲ್ಲಿ ಇರಲೀವೆನೆ.

(ಎಂದು ದುರ್ಯೋಧನನನ್ ಬೀಡಿಂಗೆ ಪೋಗಲ್ ಪೇೞ್ದು, ಪಾಂಡವರ್ ಅಯ್ವರುಮನ್ ಬರಿಸಿ, ಧೃತರಾಷ್ಟ್ರನ್ ತೊಡೆಯನೇಱಿಸಿಕೊಂಡು...)

**ಧೃತರಾಷ್ಟ್ರ:** ದುರ್ಯೋಧನನಪ್ಪೊಡೆ ಪೊಲ್ಲ ಮಾನಸನ್. ಆತನುಮ್ ನೀಮುಮ್ ಒಂದೆಡೆಯೊಳಿರೆ ಕಿಸುಱುಮ್ ಕಲಹಮುಮ್ ಎಂದುಮ್ ಕುಂದದು. ಅದು ಕಾರಣಮ್ ಗಂಗಾ ನದಿಯ ದಕ್ಷಿಣ ತಟದೊಳ್ ವಾರಣಾವತಮ್ ಎಂಬುದು ಪೊಳಲ್ ಕುರುಜಾಂಗಣ ವಿಷಯಕ್ಕೆ ತಿಲಕಮಪ್ಪಂತೆ ಇರ್ದುದು. ಅಲ್ಲಿಗೆ ಪೋಗಿ ಸುಖಮ್ ಇರಿ.

(ಎಂದೊಡೆ)

**ಪಾಂಡವರು:** ಅಂತೆ ಗೆಯ್ವೆಮ್.

(ಎಂದು ಬೀಳ್ಕೊಂಡು ಬೀಡಿಂಗೆ ವಂದು ಗಾಂಗೇಯ ದ್ರೋಣ ಕೃಪ ವಿದುರರ್ಕಳ್ಗಮ್ ಕುಂತಿಗಮ್ ತದ್ವೃತ್ತಾಂತಮನ್

ಅಱಿಪಿದರ್. ಅನ್ನೆಗಮ್ ಇತ್ತ ದುರ್ಯೋಧನನ್ ಅವರ ಪೋಗನ್ ಅಱಿದು, ಪುರೋಚನನೆಂಬ ತನ್ನ ಮನದನ್ನನಪ್ಪ ಪೆರ್ಗಡೆಯೊಳ್ ಲಾಕ್ಷಾಗೃಹೋಪಾಯಮನ್ ಚರ್ಚಿಸಿ, ವಾರಣಾವತಮನ್ ಒಂದೇ ದಿವಸದೊಳ್ ಎಯ್ದುವಂತಾಗೆ ರಥಮನ್ ಸಮಕಟ್ಟಿ ನಾಲ್ಕು ಲಕ್ಕ ಬಲಮಮ್ ನೆರಂಬೇಳ್ದು ಕಳಿಪಿದನ್.)



# ೧೪. ಅರಗಿನ ಮನೆಯ ಪ್ರಸಂಗ

(೧ ನೆಯ ಗದ್ಯದಿಂದ ೮ ನೆಯ ಗದ್ಯ)

## ಪಾತ್ರಗಳು

| | |
|---|---|
| **ಪುರೋಚನ:** | ಅರಗಿನ ಮನೆಯಲ್ಲಿ ಪಾಂಡವರನ್ನು ಕೊಲ್ಲಲೆಂದು ದುರ್ಯೋಧನನಿಂದ ನೇಮಕಗೊಂಡಿದ್ದ ಹೆಗ್ಗಡೆ. |
| **ಧರ್ಮರಾಯ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ಕುಂತಿ:** | ಪಾಂಡವರ ತಾಯಿ. |
| **ಭೀಮ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ಅರ್ಜುನ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ನಕುಲ:** | ಪಾಂಡುರಾಜ ಮತ್ತು ಮಾದ್ರಿಯ ಮಗ. |
| **ಸಹದೇವ:** | ಪಾಂಡುರಾಜ ಮತ್ತು ಮಾದ್ರಿಯ ಮಗ. |
| **ಕನಕ:** | ವಿದುರನು ಪಾಂಡವರಿಗೆ ನೆರವನ್ನು ನೀಡಲೆಂದು ಹಸ್ತಿನಾವತಿಯಿಂದ ಕಳುಹಿಸಿದ್ದ ಸೇವಕ. |
| **ವಿದುರ:** | ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ. |
| **ನಿಷಾದಿತಿ:** | ಬೇಡರವಳು. |
| **ಪುರಜನ:** | ವಾರಣಾವತ ಎಂಬ ಪುರದ ಜನತೆ. |
| **ಪುರಪ್ರಧಾನರು:** | ವಾರಣಾವತ ಎಂಬ ಪುರವನ್ನು ಆಳುವವರು. |

# ಅರಗಿನ ಮನೆಯ ಪ್ರಸಂಗ

ಆ ಪೊಳಲ ಪೊಱವೊಳಲನ್ ಎಯ್ದೆ ಪರ್ವಗಳ್ ಕತ್ತುರಿಯ ಸಗಣ ನೀರ್, ಬಿಡುಮುತ್ತಿನ ರಂಗವಲಿ, ಮಿಳಿರ್ವ ದುಗುಲದ ಗುಡಿ, ಸಂಪತ್ತಿನ ಬಿತ್ತರದೆ ಎತ್ತಿದ ಮುತ್ತಿನ ಮಂಡವಿಗೆ ಪೊಳಲ ಮನೆಗಳೊಳ್ ಎಲ್ಲಮ್. ಅಂತು ಆಗಳ್ ಒಂದು ಉತ್ತರಮ್ ಬಳೆಯೆ ಸೊಗಯಿಸುವ ಪೊಳಲೊಳ್ ಅಷ್ಟಶೋಭೆಯಮ್ ಮಾಡಿ, ದುರ್ಯೋಧನನ ಸಂಕೇತದೊಳ್ ಮುನ್ನಮೆ ಸಮೆದಿರ್ದ ಪುರೋಚನನ್ ಗೋರೋಚನಾ, ಸಿದ್ಧಾರ್ಥ, ದೂರ್ವಾಂಕುರ, ಮಾತುಳುಂಗ, ಶೃಂಗಾರದರ್ಪಣ, ಪೂರ್ಣಕಳಶ, ಕಳಮಆವೃತ ಕರಪಲ್ಲವೆಯರಪ್ಪ ಪುರಂಧ್ರಿಯರುಮ್, ಬದ್ದವಣದ ಪಱೆಗಳುಮ್ ಬೆರಸಿ, ಇದಿರ್ ವಂದು ಮೆಯ್ಯಿಕ್ಕಿ ಪೊಡಮಟ್ಟು, ಪಾಂಡವರುಮನ್ ಮುಂದಿಟ್ಟು ಒಡಗೊಂಡು ಬಂದು, ಪೊಳಲನ್ ಪುಗಿಸೆ ಪೊಕ್ಕು...

**ಧರ್ಮರಾಯ:** ಬೀಡನ್ ಎಲ್ಲಿ ಬಿಡುವಮ್.

**ಪುರೋಚನ:** ನಿಮ್ಮಯ್ಯನ್ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮನ್ ಸಮೆದಿಟ್ಟೆನ್. ಅಲ್ಲಿಗೆ ಬಿಜಯಮ್ ಗೆಯ್ಯಿಮ್.

(ಎನೆ, ಅರಗು ಮೊದಲಾಗೆ ಘೃತ, ಸರ್ಜರಸಮ್, ಬೆಲ್ಲಮ್, ಸಣಂಬು ಎಂಬ ಇವಱಿಮ್ ವಿಸ್ತರಿಸಿ ಸಮೆದ, ಇಂದ್ರ ಭವನಮೆ ಧರೆಗೆ ಅವತರಸಿ ಇರ್ದುದು ಎನಿಸುವ ಅರಗಿನ ಮನೆಯನ್ ತಾನೆ ಮುಂದಿಟ್ಟು ಒಡಗೊಂಡು ಬಂದು ಪುಗಿಸೆ, ಪಾಂಡವರ್ ಅಯ್ವರುಮ್ ಕೊಂತಿವೆರಸು ಕಿಱಿದಾನುಮ್ ಬೇಗಮ್ ಇರ್ದು, ದಾನ ಸನ್ಮಾನಾದಿಗಳಿಮ್ ಸಂತಸಮ್ ಪಡಿಸಿ, ಪುರೋಚನನನ್ ಬೀಡಿಂಗೆ ಪೋಗಲ್ ಪೇಳ್ದು, ಧರ್ಮಪುತ್ರನ್ ಆ ಮನೆಯನ್ ಪರೀಕ್ಷಿಸಿ ನೋಡಲೊಡಮ್ ಅಱಿದು, ನಿಜಾನುಜ ಸಹಿತಮ್ ಕೊಂತಿವೆರಸು ಏಕಾಂತದೊಳ್ ಇಂತು ಎಂದನ್.)

**ಧರ್ಮರಾಯ:** ಇದು ಮನೆಯ ಅಂದಮಲ್ತು. ಉರಿವ ದಳ್ಳುರಿಯ ಉಗ್ಗಡದ ಅಂದಮಾಗಿ ಕಣ್ಗೆ ತೋಱುದಪುದು. ಸಜ್ಜರಸದ, ಎಣ್ಣೆಯ, ತುಪ್ಪದ ಕಂಪು ಇದೆಲ್ಲಮ್ ಎಂಬುದೆ, ಬಗೆದು ಎಲ್ಲಿ ನೋಡುವೊಡಮ್ ಇಟ್ಟಗೆ, ಕಲ್, ಮರನ್ ಎಂಬುದಿಲ್ಲ. ಕೂರದನ್ ಪಗೆಗೆ ಇದನ್ ಒಡ್ಡಿದನ್. ಸಂತಸಮಾಗಿರೆ ಮಾರಿ ಸುಯ್ಯುಗ್ಗುಮೇ. ಅದಲ್ಲದೆಯುಮ್ **"ಅತ್ಯಾದರಃ ಸಂಭ್ರಮಮ್ ಉತ್ಪಾದಯತಿ"** ಎಂಬುದು ಈ ಪುರೋಚನನ್ ಎಂಬ ಬೂತು ಸುಯೋಧನನ ಬೆಸದಿನ್ ನಮಗೆ ಇನಿತು ಆದರಮ್ ಗೆಯ್ದುದೆಲ್ಲಮ್ ನಮ್ಮನ್ ಮೆಳ್ಪಡಿಸಲೆಂದೆ ಮಾಡಿದನ್. ನಾಮ್ ಇದನ್ ಅಱಿಯದಂತು ಬೇಂಟೆಯ ನೆವದೊಳ್ ಬಟ್ಟೆಗಳನ್ ಸೋದಿಸುವಮ್.

(ಎಂದು ನಿಚ್ಚಮ್ ಬೇಂಟೆಗೆ ಪೋಗೆ, ಪುರೋಚನನುಮ್ ಪೆಱಗಣ ಕಾಪನ್ ಕಣ್ಗಾಪಿನಲೆ ಕಾದಿರ್ಪನ್ನೆಗಮ್, ವಿದುರನ ವಿಶ್ವಾಸದಾಸನ್ ಕನಕನ್ ಎಂಬನ್ ಬಂದು, ಪಾಂಡವರನ್ ಕಂಡು ಏಕಾಂತದೊಳ್ ವಿದುರನ್ ಅಟ್ಟಿದ ಅವಿನ್ನಾಣಂಗಳನ್ ಪೇಳ್ದು ನಂಬಿಸಿ...)

**ಕನಕ:** ನೀಮ್ ಎಂತು ಬಲ್ಲಿರಿ. ಅಂತೆ ಪೊಱಮಟ್ಟು ಪೋಗಿಮ್.

(ಎಂದು ಜತುಗೃಹ ಕವಾಟ ಪುಟ ಸಂಧಿಗಳೊಳ್ ಸುರಂಗಮನ್ ಗಂಗೆಯೊಳ್ ಮೂಡುವಂತಾಗೆ ಸಮೆದು ಪೇಳ್ದು ಪೋಪುದುಮ್, ಪಾಂಡವರುಮ್ ಪುರೋಚನನ್ ತಮ್ಮನ್ ಮಱುದಿವಸಮ್ ಛಿದ್ರಿಸುವನ್ ಎನಲುಮ್, ಮುನ್ನಿನ ದಿವಸಮ್ ಒಳಗಣ ಪರಿಜನಮೆಲ್ಲಮನ್ ಪಾರ್ವರನ್ ಊಡುವ ನೆವದೊಳೆ ಪೊಱಮಡಿಸಿ, ಸೂರ್ಯಾಸ್ತಮಯದೊಳ್ ಪಾರ್ವರನ್ ಊಡಿ, ನಿಷಾದಿತಿ ಎಂಬ ಬೇಡಿತಿಗಮ್ ಅಯ್ವರ್ ಮಗಂದಿರ್ಗಮ್ ಉಣಲ್ ಇಕ್ಕಿದೊಡೆ, ತಣಿಯುಂಡು ಬೆಂಡುಮರಲ್ದು ಮಱಲುಂದಿದರ್. ಪುರೋಚನನುಮ್ ಆ ಮನೆಯೊಳ್ ಒಂದು ಓವರಿಯೊಳ್ ಮಱಿಕೆಂದಿದನ್. ಆ ಪ್ರಸ್ತಾವದೊಳ್ ಅರ್ಧರಾತ್ರಿಯಾದಾಗಳ್ ಕೊಂತಿವೆರಸು ಅಯ್ವರುಮನ್ ಮುನ್ನಮ್ ಒಯ್ಯನೊಯ್ಯನೆ ಸುರಂಗದಿನ್ ಪೊಱಮಡಿಸಿ

ಭೀಮಸೇನನ್ ಪುರೋಚನನ್ ಮಱಕೆಂದಿರ್ದ ಓವರಿಯೊಳ್ ಕಿಚ್ಚನ್ ಕೊಳಿಸಲೊಡಮ್, ಅಡೆವೊತ್ತದೆ ಕಿಱುಕಿಱಿದನೆ ಸುಡದೆ, ಇನಿಸು ಅರೆಪೊರೆಕನಾಗದೆಯೆ ಸಸಿದಂದು, ಒಂದೆಡೆಯೊಳಗೆ ಒಟ್ಟಿರ್ದ ಅರಳೆಯನ್ ಒಡನೆ ಅಳುರ್ವಂತೆ ಅನಲನ್ ಅರಗಿನಮನೆಯನ್ ಅಳುರ್ದನ್. ಮೇಲಾದ ಪಾಂಡುಸುತರನ್ ಉಪಾಲಂಭಮ್ ಗೆಯ್ಯುತಿರ್ಪ ದುರ್ಯೋಧನನ್ ಲೀಲೆಯೆ ನುಂಗುವ ಮೃತ್ಯುವ ನಾಲಗೆಯೆನೆ ಉರಿಯ ನಾಲಗೆ ಪಲವುಮ್ ನೆಗೆದುವು. ಆಗಳ್ ಭೀಮಸೇನನ್ ತನ್ನ ತಲೆಯೊಳಮ್ ಮೆಯ್ಯೊಳಮ್ ಕರಗಿ ಸುರಿವ ಅರಗಿನ ಉರಿಯ ಬಂಬಲ್ಗಳನ್ ಪೊಸೆದು ಬಿದಿರ್ದು ಕಳೆದು, ಸುರಂಗದೊಳಣಿಂದಮೆ ತನ್ನೊಡವುಟ್ಟಿದರ್ ಕೂಡೆ ವಂದನ್. ಅನ್ನೆಗಮ್ ಇತ್ತಮ್...)

**ಪುರಜನ:** ಅಕ್ಕಟ, ದುರ್ಯೋಧನನ್ ಎಂಬ ಎರಲೆಯಿನ್ ಅರಗಿನ ಮನೆಯೊಳ್ ಪಾಂಡವರ್ ಉರಿದು ಅಳ್ಗಿದರ್. ಅಯ್ಯೊ...

(ಎಂದು ಅಳುತುಮ್ ತತ್ ಪುರಜನಮ್ ಅಳಲ್ ಒದವೆ ಪರಿದು ಆಗಳ್ ನೋಡಿತ್ತು. ನೋಡಿ... ರೂಪಱಿಯಲಾಗದಂತು ಕರಿಮುರಿಕನಾಗಿರ್ದ ಬೇಡಿತಿಯುಮನ್ ಅವಳ ಅಯ್ವರ್ ಮಕ್ಕಳುಮನ್...)

**ಪುರಪ್ರಧಾನರು:** ಕೊಂತಿಯುಮ್ ಪಾಂಡವರುಮಪ್ಪರ್ ಏನುಮ್ ತಪ್ಪಲ್ಲ.

(ಎಂದು ಪುರಪ್ರಧಾನರ್ಕಳ್ ತತ್ ವೃತ್ತಾಂತಮೆಲ್ಲಮಮ್ ಪೇಳ್ದು ಧೃತರಾಷ್ಟ್ರಂಗಮ್ ಪೇಳಲಟ್ಟಿದೊಡೆ, ಮನದೊಳ್ ತ್ರೈಭುವನಮನ್ ಆಳ್ದನಿತುವರಮ್ ಸಂತಸಮ್ ತನಗೆ ಪೆರ್ಚಿಯುಮ್, ಅಂದು ಅಂಧನೃಪನ್ ತನ್ನಯ ಜನದೊಳ್ ಕೆಲನ್ ಅಱಿಯೆ ಇನಿಸು ಕೃತಕ ಶೋಕಮ್ ಗೆಯ್ದನ್. ಆಗಳ್ ನದೀತನೂಜ, ಭಾರದ್ವಾಜ ಕೃಪರ್ ಅವಿರಳ ಬಾಷ್ಪವಾರಿ ದುರ್ದಿನ ದೀನ ಆನನರ್ ಆಗಿರೆ, ವಿದುರನ್ ತಾನ್ ಅಱಿದುಮ್ ಅಱಿಯದಂತೆ ಶೋಕಾಕ್ರಾಂತನಾಗಿ ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ, ತದರ್ಧ ದಗ್ಧ ಕಳೇವರಂಗಳಮ್ ಸಂಸ್ಕರಿಸಿ, ಜಳದಾನಾದಿ ಕ್ರಿಯೆಗಳಮ್ ಮಾಡಿ, ಮಗುಳೆ ವಂದನ್.) ❖

# ೧೫. ಹಿಡಿಂಬೆಯ ಪ್ರಸಂಗ

(೮ ನೆಯ ಗದ್ಯದಿಂದ ೨೧ ನೆಯ ಪದ್ಯ)

## ಪಾತ್ರಗಳು

**ಕುಂತಿ:** ಪಾಂಡವರ ತಾಯಿ.

**ಪಾಂಡವರು:** ಧರ್ಮರಾಯ–ಭೀಮ–ಅರ್ಜುನ–ನಕುಲ–ಸಹದೇವ.

**ಭೀಮ:** ಪಾಂಡುರಾಜ ಮತ್ತು ಕುಂತಿಯ ಮಗ.

**ಹಿಡಿಂಬ:** ಕಾಡಿನಲ್ಲಿದ್ದ ರಾಕ್ಷಸ.

**ಹಿಡಿಂಬೆ:** ಹಿಡಿಂಬನ ತಂಗಿ.

**ಘಟೋತ್ಕಚ:** ಭೀಮ ಮತ್ತು ಹಿಡಿಂಬೆಯ ಮಗ.

# ಹಿಡಿಂಬೆಯ ಪ್ರಸಂಗ

ಇತ್ತ ಪಾಂಡವರ್ ಸುರಂಗದಿನ್ ಪೊಱಮಟ್ಟು ತಾರಾಗಣಂಗಳ್ ನಿಂದ ನೆಲೆಯಿನ್ ದೆಸೆಯನ್ ಪೊಟ್ಟುಮನ್ ಅಱಿದು, ತೆಂಕ ಮೊಗದೆ ಪಯಣಮ್ ಪೋಗಿ, ಕಡಕುಮ್ ಪೆಟ್ಟೆಯುಮ್ ಮೆಲ್ಲಡಿಗಳಮ್ ಒತ್ತೆ, ಬಳ್ಳುಕ್ತುಮ್ ಅಳ್ಳುಕ್ತುಮ್ ಓರಡಿಗೆ ಒರ್ಮೊರ್ಮೆ ಕುಳುತ್ತುಮ್ ಏಳುತಿರೆ ಕಂಡು...

**ಭೀಮ:** ಇಂತಾಗದು ಇನ್ನು ಏಱಿಮ್.

(ಎಂದು ಒಡನೆ ಅಂದು ಅಯ್ವರುಮನ್ ನಿಜಾಂಸಯುಗದೊಳ್ ಪೊತ್ತೆತ್ತಿ, ತಳ್ಪೊತ್ತ ಸೀಱುಡುವಿಂದೆ ಅದ್ಭುತದ ಆ ಹಿಡಿಂಬವನಮನ್ ಮರುನ್ನಂದನನ್ ಪೊಕ್ಕನ್. ಅದು ಮದದಂತಿ ದಂತ ಮುಸಲ ಪ್ರವಿಭಗ್ನ ಮಹಾಮಹೀರುಹ ಆಸ್ಪದಮ್; ಅದು ಸಿಂಹನಾದ ಜನಿತ ಪ್ರತಿಶಬ್ದ ಮಹಾ ಭಯಾನಕಪ್ರದಮ್; ಅದು ನಿರ್ಝರ ಉಚ್ಚಳಿತ ಶೀಕರ ಶೀತಳ ವಾತ ನರ್ತಿತ ಉನ್ನದ ಶಬರೀಜನ ಅಳಕಮ್; ಅದು ಆಯತ ವೇತ್ರಲತಾ ವಿತಾನಕಂ; ಆ ವನಾಂತರಾಳ ಮಧ್ಯಸ್ಥಿತ ವಿಶಾಳ ವಟವಿಟಪಿಯನ್ ಎಯ್ತಂದು, ಅದಱ ಕೆಳಗೆ ಅಯ್ವರುಮನ್ ಇಳಿಪಿದೊಡೆ, ಅಧ್ವಾನ ಪದ ಪರಿಶ್ರಮಶ್ರಾಂತರ್ ನಿದ್ರಾಭರಪರವಶರಾಗಿರೆ, ಭೀಮನ್ ಜಾವಮ್ ಇರ್ದು ತನ್ನೊಡವುಟ್ಟಿದರ್ಗೆ ಆದ ಪ್ರವಾಸ ಆಯಾಸಂಗಳ್ಗಮ್ ದೆಸೆಗಮ್ ಮನ್ಯುಮಿಕ್ಕು ಕಣ್ಣ ನೀರನ್ ತುಂಬಿ...)

**ಭೀಮ:** ಭರತನ ವಂಶದೊಳ್ ನೆಗಳ್ದ ಪಾಂಡುಗೆ ಪುಟ್ಟಿಯುಮ್, ಈ ಸಮಸ್ತ ಸಾಗರ ಪರಿವೇಷ್ಟಿತ ಅವನಿಗೆ ವಲ್ಲಭರ್ ಆಗಿಯುಮ್, ಈ ಮಹೋಗ್ರ ಕೇಸರಿ ಕರಿ ಕಂಠಗರ್ಜಿತ ಮಹಾಟವಿಯೊಳ್

ಮಱಿಕೆಂದಿ ನೀಮುಮ್ ಈ ಮರದಡಿಯೊಳ್ ಶಿವಾ ಅಶಿವರವಂಗಳಿನ್ ಎಚ್ಚಱುವಂತುಟು ಆದುದೇ...

(ಎಂದು ನುಡಿಯುತ್ತಿರ್ಪ ಅನ್ನೆಗಮ್, ಕೋಕನದ ಬಾಂಧವನ್ ಉದಯಾಚಳ ಶಿಖರ ಶೇಖರನಾದನ್. ಆಗಳ್ ಆ ಬನಮನ್ ಆಳ್ವ ಹಿಡಿಂಬನ್ ಎಂಬನ್ ಅವರ ಬರವನ್ ಅಱಿದು, ತನ್ನ ತಂಗೆ ಹಿಡಿಂಬೆ ಎಂಬಳನ್ ಕರೆದು...)

**ಹಿಡಿಂಬ:** ನಿಡಿಯರ್ ಬಲ್ಲಾಯದ ಬಲ್ದಡಿಗರ್ ಅಯ್ವರ್ ವಂದು ಆಲದ ಕೆಳಗೆ ಇರ್ದರ್. ನಮ್ಮಯ ಭಕ್ಷದೊಳ್ ಇನ್ ತೊಡರ್ದರ್. ಅಡು ಪಣ್ಣಿಡು ಪೋಗು. ನೀನುಮ್ ಆನುಮ್ ತಿಂಬಮ್.

(ಎಂಬುದುಮ್...)

**ಹಿಡಿಂಬೆ:** ಅಂತೆ ಗೆಯ್ವೆನ್.

(ಎಂದು ಆಗಸದೊಳಗೆ ಒಂದು, ಮಹೀಭಾಗದೊಳ್ ಇನ್ನೊಂದು ದಾಡೆಯಾಗಿರೆ, ಮನದಿಮ್ ಬೇಗಮ್ ಬರ್ಪಳ ದಿಟ್ಟಿಗಳ್ ಆಗಳೆ ಗೆಂಟಱಿಳ್ ಮಾರುತಿಯನ್ ಪತ್ತಿದುವು.

ಅಂತು ಒಂದು ಅಂಬುವೀಡಿನ ಎಡೆಯೊಳ್ ಕಾಮನ ಅಂಬುವೀಡಿಂಗೆ ಒಳಗಾಗಿ, ತಾನ್ ಕಾಮರೂಪೆಯಪ್ಪುದಱಿನ್ ದಿವ್ಯಕನ್ಯಕಾ ಸ್ವರೂಪಮನ್ ಕೆಯ್ಕೊಂಡು ತನ್ನತ್ತ ಮೊಗದೆ ಬರ್ಪಳನ್ ಕಂಡು...)

**ಭೀಮ:** ಖೇಚರಿಯೋ... ಭೂಚರಿಯೊ... ನಿಶಾಚರಿಯೋ ರೂಪು ಬಣ್ಣಿಸಲ್ಕೆ ಆರ್ಗಮ್ ಅವಾಗ್ಗೋಚರಮ್. ಈ ಕಾನನಮುಮ್ ಅಗೋಚರಮ್. ಇವಳ್ ಇಲ್ಲಿಗೆ ಏಕೆ ಬಂದಳೊ ಪೇೞಿಮ್.

(ಎಂಬನ್ನೆಗಮ್ ಆಕೆ ಮದನನ ಕೆಯ್ಯಿನ್ ಬರ್ದುಂಕಿದ ಅರಲಂಬು ಬರ್ಪಂತೆ ಬಂದು ಭೀಮಸೇನನ ಕೆಲದೊಳ್ ಕುಳ್ಳಿರೆ...)

**ಭೀಮ:** ನೀನ್ ಆರ್ಗೆ... ಏನ್ ಎಂಬೆ... ಏಕೆ ಬಂದೆ.

(ಎಂದೊಡೆ ಆಕೆ ಎಂದಳ್.)

**ಹಿಡಿಂಬೆ:** ಎರಡಱಿಯದೆ ಒಲ್ದು ನಿನ್ನೊಳ್. ಎನಗೆ ಎರಡನ್

ನುಡಿಯಲಾಗದು, ಈ ಬನಮ್ ಹಿಡಿಂಬವನಮ್ ಎಂಬುದು. ಇದನ್ ಆಳ್ವನ್ ಹಿಡಿಂಬನ್ ಎಂಬ ಅಸುರನ್ ಎಮ್ಮಣ್ಣನ್. ಆನುಮ್ ಹಿಡಿಂಬೆಯೆನ್ ಎಂಬೆನ್. ಆತನ ಬೆಸದಿಮ್ ನಿಮ್ಮಿನಿಬರುಮಮ್ ಪಿಡಿದು ಅಡಸಿ ತಿನಲ್ ಬಂದಿರ್ದ ಎಡೆಯೊಳ್, ನಿನಗಾಗಿ ಎನ್ನನೆ ಮದನನ್ ತಿನೆ, ಕೇಳ್ **"ಪಡೆನೋಡಲ್ ಬಂದವರನ್ ಗುಡಿವೊಱಿಸಿದರ್"** ಎಂಬುದಾಯ್ತು ನಿನ್ನ ಎನ್ನ ಎಡೆಯೊಳ್.

(ಎಂದು..)

ಈ ಮಱಿಲುಂದಿದರ್ ಆರ್ಗೆ.

**ಭೀಮ:** ಎನ್ನ ತಾಯ್ವಿರುಮ್ ಒಡವುಟ್ಟಿದರ್.

**ಹಿಡಿಂಬೆ:** ಹಿಡಿಂಬನ್ ಬಂದು ಅವರನ್ ತಿಂದೊಡಮ್ ತಿನ್ಗೆ. ನೀನ್ ಎನ್ನ ಪೆಗಲನ್ ಏಱು. ಗಗನತಳಕ್ಕೆ ಉಯ್ವೆನ್.

(ಎನೆ ಭೀಮಸೇನನಾ ಮಾತಿಂಗೆ ಮುಗುಳ್ನಗೆ ನಕ್ಕು...)

**ಭೀಮ:** ಅಳಿಪಿದೆ... ಅಂತುಮಲ್ಲದೆ ನಿಶಾಚರಿಯ್ಯೆ. ಈ ಅಳಿ ನುಡಿ ನಿನಗೆ ಅಪ್ಪುದಪ್ಪುದು. ನಿನ್ನ ಪಿರಿಯಣ್ಣನೆ ಬರ್ಕೆ. ಪಣ್ಣನೆ ಆತನ ಒಡ್ಡಳಿಯದ ಗಂಡವಾತನ್ ನೋಳ್ಪಮ್...

(ಎನುತೆ ಅಂತಿರೆ ತಂಗೆಯ ಮಾಣ್ದುದರ್ಕೆ ಅವನ್ ಮೊಳಗಿ ಸಿಡಿಲ್ದ್ ಅದೊಂದು ಸಿಡಿಲ್ ಏಳ್ಗೆಯಿನ್ ಎಯ್ತರೆ ವಂದು, ಭೀಮನನ್ ಕಂಡು, ಕಣ್ಗಳಿನ್ ಕೆಂಡದ ತಂಡಂಗಳುಮ್ ಉರಿಯ ತಂಡಂಗಳುಮ್ ಸೂಸೆ.)

**ಹಿಡಿಂಬ:** ನೀನ್ ಒರ್ವಯ್ ಎನ್ನೊಳಗೆ ಏನ್ ಕಾದುವೆ. ಈ ಮಱಿಲುಂದಿದರನ್ ಎತ್ತು. ಇನಿಬರುಮನ್ ಒರ್ಮೆಯೆ ಪೊಸೆದು ಮುಕ್ಕುವೆನ್.

(ಎನೆ ಸಾಹಸಭೀಮನ್ ಮಲ್ಲಂತಿಗೆಯನಪ್ಪೊಡಮ್ ಸಡಲಿಸದೆ ಅವನನ್ ಅವಯವದೊಳ್ ಇಂತೆಂದನ್...)

**ಭೀಮ:** ಏನ್ ಗಾವಿಲನಯೊ, ನಿನ್ನನ್ ನುಂಗುವುದರ್ಕೆ ಇವರನ್ ಎತ್ತವೇಳ್ಕುಮೆ. ನೆರಮನ್ ಸಂಗಳಿಸಲ್ವೇಳ್ಕುಮೆ ಮಾತಂಗ ವಿರೋಧಿಗೆ ಧರೆಯೊಳ್ ಕುರಂಗ ಸಂಗರಮ್.

(ಎಂಬುದುಮ್, ಹಿಡಿಂಬನ್ ಆಡಂಬರಮ್ ಗೆಯ್ದು ತುಂಬುರು ಕೊಳ್ಳಿಯಂತೆ ಅಂಬರಂಬರಮ್ ಸಿಡಿಲ್ದು, ಪಾಸರೆಯನ್ ಪೊತ್ತು, ಕಡುಪಿನೆ ಎಯ್ತರೆ... ಭೀಮನುಮ್ ಮಹೀಜಮೊಂದನ್ ಬೇರೊಡನೆ ಒತ್ತಿ ಕಿಳ್ತು ಇಡೆಯುಮ್, ಬಿಡೆ ಪೊಯ್ಯೆಯುಮ್ ಆ ಬನಮ್ ಪಡಲ್ವಡುತಿರೆ, ಕಲ್ಲೊಳಮ್ ಮರದೊಳಮ್ ಬಡಿದು, ಒಯ್ಯನೆ ಜೋಲ್ದ ದೈತ್ಯನನ್ ಪಿಡಿದು, ಮೃಣಾಳನಾಳಮನೆ ಸೀಳ್ವವೊಲ್ ಒರ್ಮೆಯೆ ಸೀಳ್ದು ಬೀಸಿದನ್. ಆಗಳ್ ಆ ಕಳಕಳಕ್ಕೆ ಮಱಲುಂದಿದ ಅಯ್ವರುಮ್ ಎಳ್ಚತ್ತು...)

**ಸೋದರರು:** ಇದೇನ್.

(ಎಂದು ಬೆಸಗೊಳೆ, ತದ್ವೃತ್ತಾಂತಮ್ ಎಲ್ಲಮನ್ ಅಱಿಪಿ ಹಿಡಿಂಬೆ ಡಂಬಮಿಲ್ಲದೆ ಭೀಮಸೇನನೊಳ್ ಅಪ್ಪ ಒಡಂಬಡಮ್ ನುಡಿಯೆ...)

**ಕೊಂತಿ:** ಈಕೆ ಸಾಮಾನ್ಯವನಿತೆಯಲ್ಲ.

**ಧರ್ಮರಾಯ:** ಇವಳ್ ರಾಕ್ಷಸ ಸ್ತ್ರೀಯೆಂದು ಭಾವಿಸಲ್ ಬೇಡ. ಈಕೆಯನ್ ಕೆಯ್ಕೊಳ್ವುದೆ ಕಜ್ಜಮ್.

(ಎಂದು ಆಕೆಗಮ್ ಭೀಮಸೇನಂಗಮ್ ಗಂಧರ್ವ ವಿವಾಹಮನ್ ಮಾಡಿದೊಡೆ...)

**ಹಿಡಿಂಬೆ:** ನೀಮ್ ಇಲ್ಲಿರಲ್ವೇಡ. ಪರ್ವತದ ಮೇಲೆ ಕಱಂಗಿ ಕಳ್ತಲಿಸಿದ ಮರದುಱುಗಲ ನಡುವೆ ಸುಧಾ ಧವಳಿತೋತ್ತುಂಗ ರಮ್ಯ ಹರ್ಮ್ಯಂಗಳಮ್ ಕಾಣ್ಬಿರಪ್ಪೊಡೆ... ಅದು ಹಿಡಿಂಬಪುರಮ್ ಎಂಬುದು. ಎಮ್ಮ ಪುರಮ್ ಅಲ್ಲಿಗೆ ಪೋಪಮ್ ಬನ್ನಿಮ್.

(ಎಂದು ಮುಂದಿಟ್ಟೊಡಗೊಂಡು ಪೋಗಿ ಮಹಾವಿಭೂತಿಯಿನ್ ಪೊಳಲನ್ ಪುಗಿಸಿ, ತನ್ನ ಸಂಪತ್ತುಮನ್ ಶ್ರೀಯುಮನ್ ಮೆಱೆದು, ಮಜ್ಜನ ಭೋಜನ ತಾಂಬೂಲ ಲೇಪನಂಗಳಿಮ್ ಪಥ ಪರಿಶ್ರಮಮೆಲ್ಲಮನ್ ಕಳೆದು, ಭೀಮಸೇನನುಮ್ ತಾನುಮ್ ಎಲ್ಲಿ ಕೊಳನ್... ಎಲ್ಲಿ ತಣ್ಬುಳಿಲ್... ಎಲ್ಲಿ ಲತಾಭವನಮ್... ಎಲ್ಲಿ ಧಾರಾಗೃಹಮ್ ಅಂತು ಅಲ್ಲಿಯೆ ತೊಡರ್ದು, ಅಲ್ಲಿಯೆ ನಿಂದು, ಅಲ್ಲಿಯೆ ಆಕೆ ಮರುದಾತ್ಮಜನೊಳ್ ರಮಿಯಿಸಿದಳ್.

ಅಂತು ರಮಿಯಿಸಿ ಪೊೞಲ್ಗೆ ಮಗುೞ್ದು ಬಂದೊಡೆ, ಆಕೆಗಮ್ ಭೀಮಂಗಮ್ ಕಾರಿರುಳ ತಿರುಳ ಬಣ್ಣಮ್ ಕೂರಿದುವು ಎನೆ ತೊಳಪ ದಾಡೆ, ಮಿಳಿರ್ವ ಉರಿಗೇಸಂ, ಪೇರೊಡಲ್ ಎಸೆದಿರೆ ಘಟೋತ್ಕಚನೆಂಬನ್ ಮಗನ್ ಆರುಮ್ ಅಗುರ್ವಿಸೆ ಪುಟ್ಟಿದನ್. ಅಂತು ಪುಟ್ಟುವುದುಮ್ ಈಶ್ವರ ಕಲ್ಪಿತದಿನ್ ರಾಕ್ಷಸರ್ಗೆ ಸದ್ಯೋಗರ್ಭಮುಮ್... ಸದ್ಯಃ ಪ್ರಸೂತಿಯುಮ್... ಸದ್ಯೋಯೌವನಮುಮ್ ಉಳ್ಳ ಕಾರಣದಿಂದ, ಆಗಳೆ ಷೋಡಶ ವರ್ಷದ ಕುಮಾರನ್ ಆಗಿರೆ, ಪಾಂಡವರುಮ್ ಅಲ್ಲಿ ಮೂಱು ವರುಷಮ್ ಇರ್ದು, ಕೃಷ್ಣದ್ವೈಪಾಯನ ಉಪದೇಶದಿಂದ ಏಕಚಕ್ರಕ್ಕೆ ಪೋಪ ಕಜ್ಜಮನ್ ಆಳೋಚಿಸಿ ಹಿಡಿಂಬೆಯನ್ ಬರಿಸಿ, ಘಟೋತ್ಕಚನನ್ ಸಾರೆ ಕರೆದು...)

**ಪಾಂಡವರು:** ಇನ್ನೆವರಮ್ ಮನೋಮುದಮ್ ಬೆರಸು ಒಸೆದು ಇರ್ದೆವು. ಇನ್ ಇರಲಾಗದು, ಪೋಪೆವು.

(ಎಂದೊಡೆ, ಆದರದೊಳೆ ಕೊಟ್ಟ ವಸ್ತುಗಳನ್ ಒಂದುಮನ್ ಒಲ್ಲದೆ, ಕೂರ್ತು ಬುದ್ಧಿವೇೞ್ದಿರಿಸಿ, ಸುಖಪ್ರಯಾಣದೊಳೆ ಪಾಂಡವರ್ ಏಕಚಕ್ರಮನ್ ಎಯ್ದಿದರ್.)



## ೧೬. ಬಕಾಸುರನ ಕೊಲೆ

(೨೨ ನೆಯ ಗದ್ಯದಿಂದ ೩೧ ನೆಯ ಗದ್ಯ)

### ಪಾತ್ರಗಳು

**ಪಾಂಡವರು:** ಧರ್ಮರಾಯ–ಭೀಮ–ಅರ್ಜುನ–ನಕುಲ–ಸಹದೇವ.

**ಕುಂತಿ:** ಪಾಂಡವರ ತಾಯಿ.

**ಪಾರ್ವ:** ಏಕಚಕ್ರ ನಗರದ ನಿವಾಸಿಯಾಗಿದ್ದ ಬ್ರಾಹ್ಮಣ.

**ಪಾರ್ವನ ಹೆಂಡತಿ:** ಬ್ರಾಹ್ಮಣನ ಹೆಂಡತಿ.

**ಪಾರ್ವನ ಮಗ:** ಬ್ರಾಹ್ಮಣನ ಮಗ.

**ಪಾರ್ವನ ಮಗಳು:** ಬ್ರಾಹ್ಮಣನ ಮಗಳು.

**ಬಕ:** ಏಕಚಕ್ರನಗರದ ಹೊರವಲಯದ ಕಾಡಿನಲ್ಲಿದ್ದ ರಾಕ್ಷಸ.

# ಬಕಾಸುರನ ಕೊಲೆ

ಅಂತು ಮೆಚ್ಚಿ ತಮ್ಮುತಯ್ವರುಮ್ **"ಇನ್ನವು ಪೊಳಲ್ಗಳ್ ಇಲ್ಲ. ಈ ಪೊಳಲ್ಗೆ ನಾಲ್ಕು ಯುಗದೊಳಮ್ ವಸುಮತಿ, ಪದ್ಮನಗರಮ್, ಏಕಚಕ್ರಮ್, ಬಹು ಧಾನ್ಯಮ್ ಎಂಬ ನಾಲ್ಕು ಪೆಸರ್ ಆದುದು"** ಎಂದು ಮನಂಗೊಂಡು ನೋಡುತ್ತುಮ್ ಬಂದು, ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಮ್ ಬಿಟ್ಟು, ಧರಾಮರ ವೇಷದೊಳ್ ಒಂದು ವರುಷಮ್ ಇರ್ಪನ್ನೆಗಮ್, ಒಂದು ದಿವಸಮ್ ತುಂಬಿದ ರಕ್ತತೆಯಿಮ್ ನಿಜಬಿಂಬಮ್ ವಾರುಣಿಯನ್ ಒಸೆದು ಸೇವಿಸೆ, ನಾಣ್ ಕೆಟ್ಟಂಬೋಲ್ ತೇಜಮ್ ಮಸುಳ್ವಿನಮ್ ಅಂಬರಮನ್ ಅಂಬುಜಮಿತ್ರನ್ ಬಿಸುಟನ್. ಆಗಳ್ ಸಂಧ್ಯಾವಂದನೆಗೆ ಧರ್ಮಪುತ್ರನ್ ಅರ್ಜುನ ನಕುಲ ಸಹದೇವರ್ ಪೋದರ್. ಅನ್ನೆಗಮ್ ಇತ್ತ ಬೀಡಿನೊಳ್ ಇರ್ದ ಕೊಂತಿಯ ಭೀಮನ ಕರ್ಣೋಪಾಂತದೊಳ್ ಸಾರೆಯೊಳ್ ಅಳ್ವ ಮಹಾದ್ವಿಜನಾರಿಯ ಮಮತಾ ವಿಪೂರಿತ ಊರ್ಜಿತ ರವದಿನ್ ಕಾರುಣ್ಯ ಆಕ್ರಂದನಮ್ ಅನಿವಾರಿತಮ್ ಒರ್ಮೊದಲೆ ಬಂದು ಆಗಳ್ ತೀಡಿತ್ತು. ಅದನ್ ಕೇಳ್ದು...

**ಕೊಂತಿ:** ಏನಾನುಮ್ ಒಂದು ಕಾರಣಮ್ ಆಗಲೆವೇಳ್ಕುಮ್. ಈ ಪುಯ್ಯಲನ್ ಆರಯ್ದು ಬರ್ಪೆನ್.

(ಎಂದು ಭೀಮನನ್ ಇರಿಸಿ ಕೊಂತಿ ತಾನೆ ಪೋಗಿ, ಕುಡಲಾದ ಕೂಸು ಅಳೆ, ಧರ್ಮಪತ್ನಿ ನೆಲದೊಳ್ ಪೊರಳುತ್ತಿರೆ, ಬಾಯಳಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನ್ ಆದ ಶೋಕದಿನ್ ಗಳಗಳ ಕಣ್ಣ ನೀರ್ ಸುರಿಯೆ, ಚಿಂತಿಪ ಪಾರ್ವನ ಶೋಕದ ಒಂದು ಪೊಂಪುಳಿಯನೆ ನೋಡಿ, ನಾಡೆ ಕರುಣಮ್ ತನಗೆ ಆಗಿರೆ ಕೊಂತಿ ಚಿಂತೆಯಿನ್...)

ಕುಂತಿ: ನಿನಗೆ ಇಂತು ಈ ಪಿರಿದು ಶೋಕಮ್ ಎಂತು ಆದುದು.

(ಎಂಬುದುಮ್, ಆ ಪಾರ್ವನ್ ಕೊಂತಿಗೆ ಇಂತು ಎಂದನ್.)

ಪಾರ್ವನ್: ಬಕನೆಂಬನ್ ಒರ್ವ ಅಸುರನ್ ಈ ಪೊಳಲ ತೆಂಕಣ ಬೆಟ್ಟದೊಳ್ ಇರ್ಪನ್. ಆತಂಗೆ ನಿಚ್ಚಮ್ ಒಂದು ಮನೆಯೊಳ್ ಎರಡು ಎಮ್ಮೆವೋಱಿಯೊಳ್ ಪೂಡಿದ ಪನ್ನಿರ್ಕಂಡುಗದ ಅಕ್ಕಿಯ ಕೂಳುಮನ್, ಅದರ್ಕೆ ತಕ್ಕ ಪರಿಕರಮುಮನ್ ಒರ್ವ ಮಾನಸನ್ ಕೊಂಡು ಪೋಪನ್. ಅಂತು ಆತನ್ ಬೆರಸು ಅದೆಲ್ಲಮನ್ ತಿಂದು ತಣಿಯದೆ ಪಲ್ಲನ್ ತಿಂಬನ್. ಅದೊಂದು ದಿವಸಮ್ ತಪ್ಪಿದೊಡೆ, ಈ ಪೊಳಲ್ ಅನಿತುಮನ್ ತಿಂಬನ್. ನಾಳಿನ ಬಾರಿ ಎಮ್ಮ ಮೇಲೆ ಬಂದುದು. ಎಮ್ಮ ಮನೆಯೊಳ್ ಆನುಮ್, ಎಮ್ಮ ಧರ್ಮಪತ್ನಿಯುಮ್, ಮಗನುಮ್, ಮಗಳುಮ್, ಇಂತು ಈ ನಾಲ್ವರೆ ಮಾನಸರ್. ಎಮ್ಮ ಪೆಂಡತಿಯನ್ ಈವೆನಪ್ಪೊಡೆ, ಆಕೆಯಿನ್ ಬಳಿಯಮ್ ಈ ಕೂಸುಗಳನ್ ನಡಪುವರಿಲ್ಲ. ಈ ಮಗಳನ್ ಈವೆನಪ್ಪೊಡೆ, ಕೊಡಗೂಸು ಎಂಬುದು ಪೆಱರ ಒಡವೆ. ಮಗನನ್ ಈವೆನಪ್ಪೊಡೆ, ಸಂತತಿಚ್ಛೇದಮುಮ್ ಪಿಂಡಚ್ಛೇದಮುಮ್ ಅಕ್ಕುಮ್. ಅದಱಿಂದ ಎನ್ನನೆ ಕುಡಲ್ವೇಳ್ಕುಮ್.

(ಎಂಬುದುಮ್ ಕೊಂತಿ ಇಂತು ಎಂದಳ್.)

ಕೊಂತಿ: ನಿಮ್ಮ ಈ ನಾಲ್ವರೊಳ್ ಒರ್ವರುಮ್ ಇನ್ ಮಿಡುಕಲ್ ಬೇಡ. ಎನಗೆ ಅಯ್ವರ್ ಮಕ್ಕಳ್ ಒಳರ್. ತಮ್ಮೊಳಗೆ ಎಸೆವ ಅಯ್ವರೊಳಮ್ ಒರ್ವನನ್ ನಾನ್ ಮಾಣದೆ ಬಕನ ಬಾರಿಗೆ ಈವೆನ್.

ಪಾರ್ವನ್: ಇಂತು ಎನಲ್ ಬೇಡ. ಮಕ್ಕಳೊಳ್ ಆದ ಮೋಹಮ್ ಎಲ್ಲಾ ಜೀವಕ್ಕಮ್ ಸಮಾನಮ್.

ಕೊಂತಿ: ನೀಮ್ ಅಱಿಯಿರ್, ಉಸಿರದಿರಿಮ್. ಅದರ್ಕೆ ತಕ್ಕ ಸವಕಟ್ಟಮ್ ಮಾಡಿಮ್.

(ಎಂದು ಬಂದು, ತತ್ ವೃತ್ತಾಂತಮ್ ಎಲ್ಲಮನ್ ಭೀಮಸೇನಂಗೆ ಅಱಿಪಿದೊಡೆ...)

**ಭೀಮಸೇನ:** ನಾಳಿನ ಉಣಿಸನ್ ಎನಗೆ ದೊರೆಕೊಳಿಸಿ ಬಂದುದು ಕರಮ್ ಒಳ್ಳಿತಾಯ್ತು.

(ಎಂದು ನಗುತ ಇರ್ಪನ್ನೆಗಮ್, ಮತ್ತಿನ ನಾಲ್ವರುಮ್ ಬಂದು, ತತ್ ವೃತ್ತಾಂತಮ್ ಎಲ್ಲಮನ್ ಕೇಳ್ದು..)

**ಸೋದರರು:** ನಮಗೆ ಈ ಪೊಳಲೊಳ್ ಒಂದು ಪರೋಪಕಾರಾರ್ಥಮ್ ಸಯ್ಪಿನಿಮ್ ದೊರೆಕೊಂಡುದು.

(ಎಂದು ಇರುಳೆಲ್ಲಮ್ ಬಕನ ಪಡೆಮಾತನೆ ನುಡಿಯುತ್ತ ಇರ್ಪನ್ನೆಗಮ್, ತಮೋಬಲಮ್ ಓಡೆ, ನಿಶಾಚರ ಬಲಮ್ ಅಗಿದು ಅಳ್ಳಾಡೆ, ರಥಾಂಗ ಯುಗಂಗಳ್ ಕೂಡೆ, ಬಗೆ ಕೂಡೆ ಬಕಂಗೆ ಮಿಳ್ತು ಮೂಡುವ ತೆಱದಿನ್ ನೇಸಱ್ ಮೂಡಿದುದು. ಆಗಳ್ ಸಾಹಸ ಭೀಮನ್ ತನ್ನ ಸಾಹಸಮಮ್ ತೋಱಲೆಂದು ಬಂದು, ಪಾರ್ವನ ಮನೆಯ ಮುಂದಣ ಬಂಡಿಯ ಕೂಳನ್ ಕೆಯ್ಕೊಂಡು ನಿಲ್ವುದುಮ್, ಪಾರ್ವಂತಿಯುಮ್ ಪಾರ್ವನುಮ್ ಪರಸಿ ಸೇಸೆಯನ್ ಇಕ್ಕಿ ಕಳಿಪೆ, ಪೊಳಲಿಮ್ ಬಂಡಿಯನ್ ಅಟ್ಟಿಕೊಂಡು ರಕ್ಕಸನ್ ಇರ್ದ ಎಡೆಗೆ ಎಯ್ತಂದು, ಅಱ್ಱೆಯೊಳ್ ದಾಡೆಗಳನ್ ಇಂಬಿಮ್ ತೀಡುತ್ತುಮ್ ತೀವ್ರಮಾಗೆ ಬಂಡಿಯ ಬರವನ್ ನೋಡುತ್ತಿರ್ದಾ ಬಕನನ್ ನಾಡೆಯೆ ಅಂತರದೆ ಕಂಡು ಭೀಮನ್ ಮುಳಿದನ್. ಕಡೆಗಣ್ಣೊಳೆ ರಕ್ಕಸನನ್ ನಡೆ ನೋಡಿ..)

**ಭೀಮಸೇನ:** (ತನ್ನಲ್ಲಿಯೇ)

ಕೊಲಲ್ಕೆ ಸತ್ತ್ವಮ್ ಅಪ್ಪಂತಿರೆ ಮುನ್ ಕೂಳನ್ ಪೊಡೆವೆನ್. ಬಳಿಯಮ್ ರಕ್ಕಸನನ್ ಪೊಡೆವೆನ್.

(ಎಂದು ಸಾಹಸ ಭೀಮನ್, ಅಂತು ತನ್ನ ತಂದ ಬಂಡಿಯ ಕೂಳೆಲ್ಲಮನ್ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದನ್ ಕಂಡು...)

**ಬಕಾಸುರ:** (ತನ್ನಲ್ಲಿಯೇ)

ಇವನ ಪಾಂಗಮ್ ಮೆಚ್ಚಲಾರೆನ್. ಎನ್ನುಮನ್ ಇಂತು ಸಮೆಯೆ ತುತ್ತುಗುಮ್.

(ಎಂದು ಬಕನ್, ಬಕವೇಷದಿನ್ ಪೆಱಗಣ ದೆಸೆಗೆ ಮೆಲ್ಲನೆ ಓಸರಿಸಿ ಬಂದು, ಎರಡುಮ್ ಕೆಲನುಮ್ ಎರಡುಮ್ ಕರಪರಿಘದಿನ್ ಅಡಸಿ ಗುರ್ದಿ ಪೆಱಪಿಂಗುವನಮ್, ಭೀಮನ್ ಮುರಿದು ಅಡಸಿ ಪಿಡಿದು ಘಟ್ಟಿಸಿ, ಪಿರಿಯ ಅಱೆಯೊಳ್ ಅಸಗವೊಯ್ಲುಮ್ ಪೊಯ್ದನ್. ಅಂತು ಪೊಯ್ದೊಡೆ ಪೊಡೆಸೆಂಡನ್ ಪೊಯ್ದಂತೆ ಮೇಗೊಗೆದು ಸೆಣಸೆ ಬಾರಿಯನಿಟ್ಟು ಕೂಡೆ...)

**ಭೀಮಸೇನ:** (ತನ್ನಲ್ಲಿಯೇ)

ಪೊಳಲನ್ ತವೆ ತಿಂದನನ್ ಆರುಮ್ ಅಣಮ್ ಬಾರಿಸಲ್ ಆರ್ತರಿಲ್ಲ. ಇನ್ ಜವನ ಬಾರಿಯೊಳ್ ಇಕ್ಕುವೆನ್.

(ಎಂದು ಪರ್ವೆ ಭೋರ್ಭೋರೆನೆ ಬೀಸೆ, ತತ್ ವದನ ಗಹ್ವರದಿನ್ ಬಿಸುನೆತ್ತರ್ ಉಣ್ಮೆ, ಅಂಕದ ಬಳಾಧಿಕನನ್ ಬಕನನ್ ವೃಕೋದರನ್ ಭೋರ್ಭೋರೆನೆ ಕೊಂದನ್. ಅಂತು ಕೊಂದು ನೀಲಗಿರಿಯನೆ ಪಿಡಿದು ಎಳೆವಂತೆ ರಕ್ಕಸನ ಕರಿಯ ಪಿರಿಯ ಒಡಲನ್ ಎಳೆದು ತಂದು ಪೊಳಲ ನಡುವೆ ಇಕ್ಕಿದಾಗಳ್, ಪೊಳಲೆಲ್ಲಮ್ ಚೋದ್ಯಮ್ ಪಟ್ಟು, ಬದ್ದವಣದ ಪಱೆಗಳಮ್ ಪೊಯ್ಸಿ, ಸಾಹಸಭೀಮನ ಸಾಹಸಮನ್ ಅಳವಲ್ಲದೆ ಪೊಗಳ್ದು, ತಮ್ಮ ಆಳ್ದನುಮನ್ ಇಷ್ಟ ದೈವಮುಮನ್ ಕೊಂಡಾಡುವಂತೆ ಅಯ್ವರುಮನ್ ಕೊಂಡಾಡೆ, ಕೆಲವು ದಿವಸಮ್ ಇರ್ಪನ್ನೆಗಮ್...)



# ೧೭. ಛತ್ರವತಿ ನಗರದತ್ತ ಪಾಂಡವರ ಪಯಣ

(೩೧ ನೆಯ ಗದ್ಯದಿಂದ ೩೩ ನೆಯ ಗದ್ಯ)

**ಪಾತ್ರಗಳು**

**ಪಾರ್ವನ್:** ಒಬ್ಬ ಬ್ರಾಹ್ಮಣ.

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

**ಧೃತರಾಷ್ಟ್ರ:** ದುರ್ಯೋಧನನ ತಂದೆ.

**ಸುಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. ದುರ್ಯೋಧನ ಎಂಬ ಮತ್ತೊಂದು ಹೆಸರಿದೆ.

**ದ್ರುಪದ:** ಛತ್ರವತಿ ನಗರದ ರಾಜ. ದ್ರೌಪದಿಯ ತಂದೆ.

**ದ್ರೋಣ:** ಕೌರವರ ಮತ್ತು ಪಾಂಡವರ ಗುರು.

**ಪಯೋವ್ರತ:** ಒಬ್ಬ ಮುನಿ.

**ಧೃಷ್ಟದ್ಯುಮ್ನ:** ದ್ರುಪದ ರಾಜನ ಮಗ.

**ಕೃಷ್ಣೆ:** ದ್ರೌಪದಿ.

## ಛತ್ರವತಿ ನಗರದತ್ತ ಪಾಂಡವರ ಪಯಣ

ಒಂದು ದಿವಸಮ್ ಅಶಿಶಿರಕಿರಣನ್ ಅಪರಜಲನಿಧಿ ತಟ ನಿಕಟವರ್ತಿಯಾದನ್. ಆಗಳ್ ಒರ್ವ ಪಾರ್ವನ್ ವಿಸ್ತೀರ್ಣಜೀರ್ಣ ಕರ್ಪಟ ಆವೃತ ಕಟಿತಟನುಮಾಗಿ ಬಂದು ಕಣ್ ಮುಚ್ಚಲ್ ಎಡೆ ಬೇಡೆ, ತನಗೆ ಅವರ್ ಪಾಸಲ್ ಕೊಟ್ಟ ಕೃಷ್ಣಾಜಿನಮನ್ ಪಾಸಿ ಪಟ್ಟಿರ್ದನನ್...

**ಧರ್ಮಪುತ್ರ:** ಆವ ನಾಡಿಮ್ ಬಂದಿರಿ. ಎಲ್ಲಿಗೆ ಪೋದಪಿರ್.

**ಪಾರ್ವನ್:** ಉತ್ತರಾಪಥದೆ ಹಸ್ತಿನಪುರದಿನ್ ಬಂದೆನ್.

**ಧರ್ಮಪುತ್ರ:** ಅಲ್ಲಿ ಪಾಂಡವರ ಪಡೆಮಾತು ಆವುದು. ಧೃತರಾಷ್ಟ್ರ ಸುಯೋಧನರ್ ಇರ್ಪ ಅಂದಮ್ ಆವುದು.

(ಎಂದು ಬೆಸಗೊಳೆ– ಪಾರ್ವನು ಹಸ್ತಿನಾವತಿಯಲ್ಲಿ ದುರ್ಯೋಧನನು ಪಾಂಡವರ ಬಗ್ಗೆ ಆಡಿದ್ದ ಮಾತುಗಳನ್ನು ಮತ್ತೊಮ್ಮೆ ಈಗ ಹೇಳುತ್ತಾನೆ.)

**ಪಾರ್ವನ್:** **“ಮನದೊಳ್ ಕೂರದ ಪಾಂಡುರಾಜಸುತರುಮ್ ಆ ಲಾಕ್ಷಾಗೃಹ ಉಗ್ರ ಅಗ್ನಿಯ ಆನನದೊಳ್ ಮಳ್ಗಿದರ್. ಅಱಿಯರ್ ವೇಮಾಱಿರ್ ಇನ್ನಾರೊ. ಬೇರನೆ ಕಿಳ್ತು ಇಕ್ಕಿದೆನ್. ಎನ್ನ ಪುಣ್ಯಮ್. ಈಗಳ್ ಧರೆ ನಿರ್ದಾಯಾದ್ಯಮ್ ಆಯ್ತು”** ಎಂದು ಆ ಸುಯೋಧನನ್ ಆಳುತ್ತಿರೆ ಸಂದ ಹಸ್ತಿನಪುರಮ್ ಸಂತಮ್ ಬಸಂತಮ್ ಕರಮ್.

ಅದಲ್ಲದೆಯುಮ್ ಯಜ್ಞಸೇನನ್ ಎಂಬ ಮೊದಲ ಪೆಸರ ಪಾಂಚಾಳ ದೇಶದ ಅರಸನ್ ದ್ರುಪದನ್ ಎಂಬನ್ ದ್ರೋಣನೊಳ್ ಆದ ಪರಿಭವಮನ್ ನೆನೆದು, **“ಆತನನ್ ಕೊಲ್ವನ್ನನ್ ಒರ್ವ ಮಗನುಮನ್, ವಿಕ್ರಮಾರ್ಜುನಂಗೆ ಪೆಂಡಿತಿಯಪ್ಪನ್ನಳ್ ಒರ್ವ ಮಗಳುಮನ್ ಪಡೆದಲ್ಲದೆ ಇರೆನ್”** ಎಂದು ಪೂಣ್ಬು ಪೋಗಿ,

ಪಯೋವ್ರತನ್ ಎಂಬ ದಿವ್ಯ ಮುನಿಪತಿಯಿನ್ ಪುತ್ರಕಾಮೇಷ್ಟಿ ಗೆಯ್ಸಿ, ಹೋಮಕುಂಡದಲ್ಲಿ ಧಗಧಗಿಸುವ ಜ್ವಾಲಾಮಾಲೆಗಳೊಳ್ ಕಿಳ್ತ ಬಾಳುಮ್, ಅತ್ತಪರಮುಮ್, ಅಭೇದ್ಯ ಕವಚಮುಮ್ ಬೆರಸು ಒಗೆದ ಧೃಷ್ಟದ್ಯುಮ್ನನ್ ಎಂಬ ಮಗನುಮನ್, ಜ್ವಾಳಾಮಾಳಿನಿ ಒಗೆವಂತೆ ಒಗೆದ ಕೃಷ್ಣೆ ಎಂಬ ಮಗಳುಮನ್ ಪಡೆದನ್. ಆ ಹೋಮಾಗ್ನಿಯೊಳ್ ಪುಟ್ಟಿದ ಒಂದು ದಿವ್ಯ ಚಾಪಮುಮ್ ಅಯ್ದು ದಿವ್ಯ ಶರಮ್ ಒಳವು.

ಆ ಬಿಲ್ಲನ್ ಏಱಿಸಿ ಆ ಸರಲ್ಗಳಿಂದ ಆತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ಮೀನನ್ ಎಚ್ಚನುಮ್ ಆಕೆಗೆ ಗಂಡನ್ ಅಕ್ಕುಮ್ ಎಂದು ಆದೇಶಮ್. ಅಂತಪ್ಪ ಸಾಹಸಪುರುಷನ್ ವಿಕ್ರಮಾರ್ಜುನನನ್ ಅಲ್ಲದೆ ಪೆಱರಿಲ್ಲ ಎಂಬರ್. ಅದಱಿಂದ **'ಇನ್ನುಮ್ ಪಾಂಡವರ್ ಒಳರ್'** ಎಂಬ ಮಾತುಗಳನ್ ಬುದ್ಧಿಯೊಡೆಯರ್ ಆರಾನುಮ್ ನುಡಿವರ್. ದ್ರುಪದನುಮ್ ಈಗಳ್ ಆ ಕೂಸಿಂಗೆ ಸಯಂಬರಮನ್ ಮಾಡಲೆಂದು ನೆಲದೊಳ್ ಉಳ್ಳ ಅರಸು ಮಕ್ಕಳ್ ಎಲ್ಲರ್ಗಮ್ ಬಳಿಯನ್ ಅಟ್ಟಿದೊಡೆ, ದುರ್ಯೋಧನಾದಿಗಳ್ ಮೊದಲಾದ ಅನೇಕ ದೇಶಾಧೀಶ್ವರರ್ ಎಲ್ಲಮ್ ಛತ್ರವತಿ ಎಂಬುದು ದ್ರುಪದನ ಪೊಳಲ್, ಆ ಪೊಳಲ್ಗೆ ವಂದು ಇರ್ದರ್. ಆನ್ ಅಲ್ಲಿಂದಮ್ ಬಂದೆನ್.

(ಎಂದು ಪೇಳೆ, ತತ್ ವೃತ್ತಾಂತಮ್ ಎಲ್ಲಮನ್ ಕೇಳ್ದು ತಮ್ಮೊಳ್ ಆಳೋಚಿಸಿ... **"ತಲೆಯೊಳ್ ಸೀರೆಯನ್ ಇಕ್ಕಿ ಕೆಮ್ಮನೆ ಎನಿತನ್ ಪೂಣ್ದು ಇರ್ಪಮ್. ಉಗ್ರ ಅರಿವಂಶ ಲತಾ ವಲ್ಲರಿಗಳ್ಗೆ ದಾವಶಿಖಿ ಪೊಲ್ ಮೆಯ್ದೋಱಿ, ತತ್ ದ್ರೌಪದೀ ಲಲನಾ ವ್ಯಾಜದಿನ್, ಈಗಳ್ ಒಂದೆ ಪೊಳಲೊಳ್ ಸಂದಿರ್ದ ಭಾಸ್ವತ್ಸುಹೃದ್ಬಲಕಮ್ ಮಾರ್ವಲಕಮ್ ಗುಣಾರ್ಣವ ಶರಪ್ರಾಗಲ್ಭ್ಯಮನ್ ತೋಱುವಮ್"** ಎಂದು ನಿಶ್ಚಯಿಸಿ, ತಮ್ಮ ಬಗೆದ ಬಗೆಯೊಳ್ ಪರಾಶರ ಮುನೀಂದ್ರ ಉಪದೇಶಮ್ ಒಡಂಬಡೆ, ಪಾಂಡವರ್ ಏಕಚಕ್ರದಿನ್ ಪೊಱಮಟ್ಟು...)



# ೧೮. ದ್ರೌಪದಿಯ ಸ್ವಯಂವರ

(೪೭ ನೆಯ ಗದ್ಯದಿಂದ ೬೪ ನೆಯ ಗದ್ಯ)

## ಪಾತ್ರಗಳು

| | |
|---|---|
| ದ್ರೌಪದಿ: | ದ್ರುಪದ ರಾಜನ ಮಗಳು. |
| ದ್ರುಪದ: | ಛತ್ರವತಿ ನಗರದ ರಾಜ. ದ್ರೌಪದಿಯ ತಂದೆ. |
| ಧೃಷ್ಟದ್ಯುಮ್ನ: | ದ್ರುಪದ ರಾಜನ ಮಗ. |
| ಮನ್ಮಥ: | ಒಬ್ಬ ದೇವತೆ. ಗಂಡು ಹೆಣ್ಣಿನ ಮಯ್ ಮನದಲ್ಲಿ ಮೂಡುವ ಕಾಮಕ್ಕೆ ಈ ದೇವತೆಯನ್ನು ಕಲ್ಪಿಸಿಕೊಳ್ಳಲಾಗಿದೆ. |
| ಸುಂದರಮಾಲೆ: | ದ್ರೌಪದಿಯ ಆಪ್ತ ಸಖಿ. |
| ದುರ್ಯೋಧನ: | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. |
| ಕರ್ಣ: | ಅಂಗರಾಜ್ಯದ ಒಡೆಯ. |
| ಬ್ರಾಹ್ಮಣರು: | ಛತ್ರಾವತಿ ನಗರವಾಸಿಗಳು. |
| ಅರ್ಜುನ: | ಪಾಂಡುರಾಜ ಮತ್ತು ಕುಂತಿಯ ಮಗ. |

# ದ್ರೌಪದಿಯ ಸ್ವಯಂವರ

ಅಂತು ನೆಱೆಯೆ ಪಸದನಂಗೊಳಿಸಿ ಬಿಡುಮುತ್ತಿನ ಸೇಸೆಯನ್ ಇಕ್ಕಿ ತಾಯ್ಗಮ್ ತಂದೆಗಮ್ ಪೊಡೆಮಡಿಸಿ...

**ದ್ರುಪದ:** ಅಕ್ಕ, ನಿಟ್ಟಿಸೆ ಹೋಮಾನಲನೊಳ್ ಪುಟ್ಟಿದ ನಿನಗೆ ಪರಕೆ ಆವುದೋ. ನಿನ್ನನ್ ಪುಟ್ಟಿಸಿದ ಬಿದಿ ನೆಗಳ್ತೆಯ ಜೆಟ್ಟಿಗನೊಳ್ ಅರಿಕೇಸರಿಯೊಳ್ ಈಗಳ್ ನೆರಪುಗೆ.

(ಎಂದು ಪರಸಿ ಕನತ್ಕನಕ ಖಚಿತಮುಮ್ ಮೌಕ್ತಿಕ ಸ್ತಂಭಮುಮ್ ಅಪ್ಪ ಸರ್ವತೋಭದ್ರಮ್ ಎಂಬ ಸಿವಿಗೆಯನ್ ಏಱಿಸಿ, ಚಾಮರದ ಕುಂಚದ ಅಡಪದ ಡವಕೆಯ ವಾರವಿಳಾಸಿನಿಯರ್ ಎರಡುಮ್ ಕೆಲದೊಳ್ ಸುತ್ತಿಱಿದು ಬಳಸಿ ಬರೆ, ತಲೆವರಿದ ಓಜೆಯ ಪಿಡಿಯನ್ ಏಱಿ, ಪೆಂಡವಾಸದ ಒಳ್ವೆಂಡಿರ್ ಬಳಸಿ ಬರೆ, ತಳ್ತು ಪಿಡಿದ ಕನಕ ಪದ್ಮದ ಸೀಗುರಿಗಳ ನೆಳಲ್ ಎಡೆವಱಿಯದೆ ಬರೆ, ದ್ರುಪದನುಮ್ ಧೃಷ್ಟದ್ಯುಮ್ನನುಮ್ ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧ ಗಂಧ ಸಿಂಧುರಂಗಳನ್ ಏಱಿ ಬರೆ, ಮುಂದೆ ಪರಿವ ಧವಳಚ್ಛತ್ರ ಚಂದ್ರಾದಿತ್ಯ ಪಾಳಿಕೇತನಾದಿ ರಾಜ್ಯ ಚಿಹ್ನಂಗಳುಮ್ ಮೊಳಗುವ ಮಂಗಳತೂರ್ಯಂಗಳ್ ಎಸೆಯೆ, ಪೆಱಪೆಱಗನೆ ದ್ರೌಪದಿ ಶೃಂಗಾರಸಾಗರಮೆ ಮೇರೆದಪ್ಪಿ ಬರ್ಪಂತೆ ಬರೆ, ಪರೆದು ಉಗುವ ಪಂಚರತ್ನದ ಪರಲ್ಗಳ್ ಉದಿರ್ದು ಎಸೆಯೆ, ಸೌಧದೊಳೆ ಕೆದಱಿದ ಕಪ್ಪುರದ ಪಳ್ಕುಗಳ್ ಎಸೆಯೆ, ಎಸೆವ ಲೀಲೆಯಿಮ್ ಸಯಂಬರ ಸಾಲೆಯನ್ ಪುಗುತಂದಳ್.

ಆಗಳ್, ಕೆಲರ್ ನುಡಿವುದನೆ ಮಱೆದು ಪೆಱತನ್ ನುಡಿಯೆ; ಕೆಲರ್ ನೋಡದಂತೆ ನೋಡೆ; ಕೆಲರ್ ಪಾವ್ ಅಡರ್ದವೊಲ್ ಇರೆ; ಕೆಲರ್ ಉದಗ್ರ ಅವನಿಪರ್ ಒಯ್ಯನೆ ತುಡುಗೆಯನ್ ಓಸರಿಸೆ; ಒಡನೆ ನೆರೆದ ಅರಸುಮಕ್ಕಳ ನಿಡುಗಣ್ಗಳ ಬಳಗಮ್ ಎಱಗೆ ತನ್ನಯ ಮೆಯ್ಯೊಳ್ ನಡೆ, ಪಲರುಮ್ ಬಳಸಿ ಅಂಬಮ್ ತುಡೆ ನಡುವೆ ಇರ್ದ ಒಂದು ಪುಲ್ಲೆ ಇರ್ಪಂತೆ ಇರ್ದಳ್.

**"ಕಿಱಿದು ಬೇಗದಿನ್ ಹರಿಗನ್ ಅನಿಬರುಮನ್ ಮೊನೆ ಅಂಬುಗಳೊಳೆ ಪೂಣ್ದಪನ್ ಅದರ್ಕೆ ಎನಗೆ ಎಡೆವೇಳ್ಕುಮೆ."**

ಎಂಬವೊಲ್ ಅತನು ಅನಿಬರುಮನ್ ನನೆ ಅಂಬುಗಳಿನ್ ಪೂಣ್ದನ್. ಆಗಳ್ ಪಾಂಡವರ್ ತಮ್ಮನ್ ಪೆಱರ್ ಅಱಿಯದಂತು ಬ್ರಾಹ್ಮಣ ವೇಷದೊಳೆ ಬ್ರಹ್ಮಸಭೆಯೊಳ್ ಬಂದಿರೆ, ಇಳೆಯೊಳ್ ಉದಗ್ರ ವೀರಭಟ ತುಂಗಮತಂಗಜ ವಾಜಿ ರಾಜಿ ಚೌಪಳಿಗೆಗಳೊಳ್ ಧರಾಧರ ಧುರಂಧರ ಬಂಧುರ ರಾಜಕಮ್, ವಿಯತ್ತಳದೊಳ್ ಅನೇಕ ಕಿಂಪುರುಷ ಕಿನ್ನರ ಖೇಚರ ಸಿದ್ಧ ಬೃಂದಮ್ ಮೂನೆಲೆಯಿನ್ ಅವ್ವಳಿಸಿರೆ, ಸ್ವಯಂಬರಮ್ ಮೂಱು ಲೋಕಮನೆ ಪೋಲ್ತುದು. ಆಗಳ್ ದ್ರೌಪದಿಯ ಕೆಲದೊಳ್ ಇರ್ದ ಸುಂದರಮಾಲೆ ಎಂಬ ಚೇಟಿ ವಿದಿತ ವೃತ್ತಾಂತೆಯಾಗಿ...)

**ಸುಂದರಮಾಲೆ:** (ದ್ರೌಪದಿಯನ್ನು ಕುರಿತು)

ಪಂಕೇಜ ಪ್ರತ್ರೇಕ್ಷಣೇ, ನೋಡು... ಕನಕ ಉಚ್ಚಾಸನ ಸಂಸ್ಥಿತನ್ ನೃಪನ್ ಅವನ್ ಬೆಂಗೀಶನ್; ಉತ್ತುಂಗ ಪೀನ ನಿಜ ಅಂಸ ಅರ್ಪಿತ ಲಂಬಹಾರನ್ ಅವನ್ ಆ ಪಾಂಡ್ಯನ್; ಮನಂಗೊಂಡು ನಿನ್ನನೆ ಕಿಳ್ಗಣ್ಣೊಳೆ ನೋಡುತಿರ್ಪವನ್ ಅವನ್ ಚೇರಮ್ಮನ್; ಆದಿತ್ಯ ತೇಜನ್ ಅವನ್ ಕಳಿಂಗ ದೇಶದ ಅರಸನ್; ಮತ್ತೆ ಇತ್ತ ಬೀಸುವ ಚಾಮರಂಗಳ ಪೊಳಪಿನೊಳಮ್, ಎತ್ತಿದ ಬೆಳ್ಗೊಡೆಗಳ ಬೆಳ್ಪಿನೊಳಮ್ ದೆಸೆಗಳೆಲ್ಲಮ್ ಧವಳಿಸಿದನ್ನವಾಗೆ, ಪೊಗಳುತೆ ವರ್ಪವರ ಸರಂಗಳೊಳಮ್ ಪಾಡುವ ಪಾಠಕಾಱರ ಇಂಚರಗಳೊಳ್

ಎಲ್ಲಮ್ ದಿಗ್ಭಿತ್ತಿಗಳ್ ತೆಕ್ಕನೆ ತೀವೆ, ಮಣಿಮಯ ಪೀಠದ ಮೇಲೆ ಕಾಲನ್ ಅವಷ್ಟಂಭದಿನ್ ನೀಡಿ, ಎನ್ನ ಮೆಲ್ ಎರ್ದೆಯನ್ ಅಲರ್ ಅಂಬಿಂದೆ ಉಱಿದೆ, ಇದು ಇಂತು ಉರ್ಚಿತ್ತು ಎಂಬಂತೆ ನೆಯ್ದಿಲ ಕಾವನ್ ಒಂದನ್ ತಿರುಪುತ್ತುಮ್, ಅನಿಬರ್ ತಮ್ಮಂದಿರುಮ್ ತನ್ನ ಎರಳ್ಕೆಲದೊಳ್ ಬಂದು ಇರೆ, ನೋಡಿ ಸೋಲ್ತು ನಿನಗೆ ಆ ಗೇಯಕ್ಕೆ ಸೋಲ್ತಂತೆವೋಲ್ ತಲೆಯನ್ ತೂಗುವವನ್ ಸುಯೋಧನ ನೃಪನ್; ನೀನ್ ಆತನನ್ ನೋಡುಗೆ. ಅಂಬುಜವದನೇ, ಮತ್ತೆ ಇತ್ತ ಮಿಂಚನ್ ತಟ್ಟಿ ಮೆಡಱಿದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದ ಅಗಣ್ಯ ಪಣ್ಯಾಂಗನಾ ಜನದ ನಡುವೆ ಮಣಿಮಯ ಪೀಠಂಗಳನ್ ಏಱಿ ಆಯತ ಯದುವಂಶ ಕುಲಶ್ರೀಯನ್ ತಳ್ಕೈಸಿದ ಅದಟರ್ ಅತಿರಥರ್ ಅವರ್ ಅತ್ಯಾಯತ ಭುಜಪರಿಘರ್ ನಾರಾಯಣ ಬಲದೇವರ್ ಎಂಬರ್.

(ಎಂದು ಕಿಱಿದು ಅಂತರಮ್ ಪೋಗಿ, ಇಂತು ಇವರ್ ಇನ್ನರ್ ಈ ದೊರೆಯರ್ ಎಂದು ಅಱಿವಂತಿರೆ ಪೇಳ್ದುವೇಳ್ದು, ರಾಜಾಂತರದಿಂದೆ ರಾಜಸುತೆಯನ್ ಅಂತು ನಯದಿಂದ ಸದ್ಭ್ರಾಂತ ಸಮೀರಣ ಉತ್ಥಿತ ವಿಶಾಳ ವಿಳೋಳ ತರಂಗ ರೇಖೆ ಮಾನಸಹಂಸಿಯನ್ ಪದ್ಮಾಂತರದಿಂದಮ್ ಇಂಬಱಿದು ಉಯ್ವ ಮಾರ್ಗದಿನ್ ಅವಳ್ ಉಯ್ದಳ್. ಅಂತು ನೆರೆದ ಅರಸುಮಕ್ಕಳ್ ಆರುಮನ್ ಮೆಚ್ಚದೆ ಮಗುಳೆವರೆ...)

**ದ್ರುಪದ:** ಇದಱೊಳೆಲ್ಲಮ್ ಏನಿಮ್. ಹೋಮಾಗ್ನಿಸಂಭವಮ್ ಅಪ್ಪ ದಿವ್ಯಚಾಪಮನ್ ಏಱಿಸಿಯುಮ್, ಈ ಅಯ್ದು ಶರದೊಳ್ ಆಕಾಶದೊಳ್ ನಲಿದು ಪೊಳೆಯುತ್ತಿರ್ಪ ಜಂತ್ರದ ಮೀನನ್ ಇಸಲ್ ಆರ್ಪೊಡೆ ಬಂದು, ಏಱಿಸಿಯುಮ್ ಎಚ್ಚು ಗೆಲ್ಲಂಗೊಂಡು ಎನ್ನ ಮಗಳನ್ ಮದುವೆಯಪ್ಪುದು.

(ಎಂಬುದುಮ್, **"ಆಮ್ ಆಮೆ ಬಿಲ್ಲನ್ ಏಱಿಸಿದಪೆವು"** ಎಂದು ಎನಿಬರಾನುಮ್ ಅರಸುಮಕ್ಕಳ್ ಬಂದು ಏಱಿಪೆವು ಎಂದವರ್ ನೆಲದಿನ್ ಎತ್ತಲುಮ್ ಆಱದೆ ಬಿಳ್ದು, ನೆತ್ತರನ್

ಕಾೞಿಯುಮ್, ಎತ್ತಿ ಕಯ್ ಉಡಿದುಮ್, ಆಗಳೆ ಕಾಲ್ ಉಡಿದುಮ್ ಬಳಲ್ದು, ಪಲ್ಲಾೞಿ ಪೊಡರ್ಪುಗೆಟ್ಟು ಉಸಿರಲಪ್ಪೊಡಮ್ ಆೞಿದೆ ಪೋದೊಡೆ... ಆಗಳ್...)

**ದುರ್ಯೋಧನ:** ಆನ್ ಏಱಿಪೆನ್.

(ಎಂದು ಪೊಚ್ಚಱಿಸಿ ಬಂದು, ಉಗ್ರಚಾಪಮನ್ ಮೂಱ್ ಸೂಳ್ ಬಲವಂದು ಪೊಡೆಮಟ್ಟು ಪಿಡಿದು ಆರ್ಪಭರದಿನ್ ಎತ್ತಲ್ಕೆ ಒಡರಿಸಿದೊಡೆ, ನೆಲದಿನ್ ಅಣಮೆ ಬಿಲ್ ತಳರದೆ ನಿಲ್ತೊಡೆ **"ಗುಡು ಗುಡು ಗುಡು ಗೊಳ್"** ಎಂದು ಒಡನೆ ಆರೆ, ಸುಯೋಧನನ್ ಕರಮ್ ಸಿಗ್ಗಾದನ್. ಆಗಿ ಪೋಗಿ ಕರ್ಣನ ಮೊಗಮನ್ ನೋಡಿದೊಡೆ, ಕರ್ಣನ್ ಆಳ್ದನ ಸಿಗ್ಗಾದ ಮೊಗಮನ್ ಕಂಡು...)

**ಕರ್ಣ:** ಆನ್ ಏಱಿಪೆನ್.

(ಎಂದು ಆ ಕಾನೀನನ್ ಬಂದು ಎತ್ತಿ ಬಿಲ್ಲನ್ ಏಱಿಸಿ ತೆಗೆಯಲ್ ತಾನ್ ಆರ್ತನಿಲ್ಲ. ತೆಗೆವಂತು ಆ ನೃಪತಿಗಳ್ ಅರಿಗನ ಇದಿರೊಳ್ ಏನ್ ಪುಟ್ಟಿದರೇ. ಅಂತು ಆ ಬಿಲ್ಲನ್ ಪಿಡಿದವರೆಲ್ಲಮ್ ಬಿಲ್ಲುಂಬೆಱಗುಮ್ ಆಗಿ ಸಿಗ್ಗಾಗಿ ಪೋಗಿ ತಂತಮ್ಮ ಇರ್ಪ ಎಡೆಯೊಳ್ ಇರೆ...)

**ದ್ರುಪದ:** ಈ ನೆರದ ಅರಸು ಮಕ್ಕಳೊಳ್ ಆರುಮ್ ಈ ಬಿಲ್ಲನ್ ಏಱಿಸಲ್ ಆರ್ತರಿಲ್ಲಮ್. ಈ ಜನವಡೆಯೊಳ್ ಆರಾನುಮ್ ಈ ಬಿಲ್ಲನ್ ಏಱಿಸಲಾರ್ಪೊಡೆ ಬನ್ನಿಮ್.

(ಎಂದು ಸಾಱುವುದುಮ್, ಮುಸುಕಿದ ನೀರದಾವಳಿಗಳನ್ ಕಿರಣಂಗಳೊಳ್ ಒತ್ತಿ ತೇಜಮ್ ಅವಿರ್ಪವಿನಮ್ ಆಗಳ್ ಒರ್ಮೊದಲೆ ಮೂಡುವ ಬಾಳ ದಿನೇಶಬಿಂಬದ ಒಂದು ಎಸಕದಿನ್ ಆ ದ್ವಿಜನ್ಮ ಸಭೆಯನ್ ಪೊಱಮಟ್ಟೊಡೆ, ಆ ಕದನತ್ರಿಣೇತ್ರನ ಮಾಸಿದ ಅಂದಮುಮ್ ಪಸನದಂತೆ ಕಣ್ಗೆ ಎಸೆದು ತೋಱಿದುದು. ಅಂತು ಪೊಱಮಡುವ ಅರಾತಿಕಾಲಾನಲನನ್ ಕಂಡು ಕಡ್ಡುವಂದ ದೊಡ್ಡರೆಲ್ಲಮ್ ಮುಸುಱಿ...)

**ಹಿರಿಯ ಬ್ರಾಹ್ಮಣರು:** (ಅರ್ಜುನನ್ನು ಕುರಿತು)

ಸಂಗತಸತ್ವರ್ ಕುರುರಾಜಂಗಮ್ ಕರ್ಣಂಗಮ್ ಏಱಿಸಲ್ಕೆ ಅರಿದಮ್... ಇದನ್ ತಾನ್ ಏಱಿಪನ್ ಗಡಮ್... ಅಕ್ಕಟ... ಈ ಪಾರ್ವಂಗೆ ಒಂದು ಮರುಳ್ ಮೆಯ್ಯೊಳ್ ಉಂಟಕ್ಕುಮ್.

(ಎಂದು ಬಾಯ್ಗೆ ವಂದುದನೆ ನುಡಿಯೆ, ರಂಗಭೂಮಿಯ ನಡುವೆ ನಿಂದು ದಿವ್ಯಚಾಪಕ್ಕೆ ಪೊಡೆವಟ್ಟು, ಅದನ್ ಅವಯವದಿನ್ ಎಡಗೆಯ್ಯೊಳ್ ಎತ್ತಿಕೊಂಡು, ತನ್ನ ಬಗೆದ ಕಜ್ಜಮನ್ ಗೊಲೆಗೊಳಿಸುವಂತೆ ಆ ಬಿಲ್ಲ ಗೊಲೆಯನ್ ಏಱಿ ನೂಂಕಿ, ದೆಸೆ ಕಂಪಂಗೊಳೆ ದಿವ್ಯ ಶರಮನ್ ಕೊಂಡು ಕರ್ಣಾದಿಗಳು ಕಂಡು ಬೆಕ್ಕಸಮ್ ಆಗಿ ಇರ್ಪಿನಮ್, ಒಂದೆ ಸೂಳೆ ತೆಗೆದು ಆಕರ್ಣಾಂತಮಮ್ ತಾಗೆ, ಆರ್ಗೆ ನಿಟ್ಟಿಸಲ್ ಆರ್ಗೆ ಇಸಲ್ ಅಕ್ಕುಮ್ ಎಂಬ ಎಸಕದ ಆ ಮೀನನ್ ಸಮಂತು ಎಚ್ಚು ವಿದ್ವಿಷ್ಟವಿದ್ರಾವಣನ್ ದೇವರುಮನ್ ಧನುರ್ಧರರುಮನ್ ಮೆಚ್ಚಿಸಿದನ್.

ಆಗಳ್ ಆ ಪಿಡಿದ ಬಿಲ್ಲೆ ಕರ್ಬಿನ ಬಿಲ್ಲಾಗೆಯುಮ್, ಅಂಬುಗಳೆ ಪೂವಿನ ಅಂಬುಗಳ್ ಆಗೆಯುಮ್, ಎಚ್ಚ ಮೀನೆ ಮೀನಕೇತನಮ್ ಆಗೆಯುಮ್, ಸಹಜಮನೋಜನನ್ ಮನೋಜನ್ ಎಂದೆ ಬಗೆದು ಕಡೆಗಣ್ ನಡೆ, ಮನಮ್ ಬಯಸೆ, ತಳ್ತು ಅಮರ್ದು ಅಪ್ಪಲೆ ತೋಳ್ಗಳ್ ಆಸೆಯೊಳ್ ತೊಡರ್ದಿರೆ, ಘರ್ಮಜಲಮ್ ಪೊಣ್ಮೆ, ಭಯಮ್ ಉಣ್ಮೆ, ನಾಣ್ ಕಿಡೆ, ಕೆಯ್ತಮ್ ವಿಕಾರದೊಳ್ ತೊಡರ್ದಿರೆ, ಉಮ್ಮಳಿಪ ಕನ್ನೆಗೆ ಸುಂದರಮಾಲೆ ಮಾಲೆಯನ್ ತಡೆಯದೆ ನೀಡೆ,

ಸತಿ ಮಾಣದೆ ಗುಣಾರ್ಣವನನ್ ಮಾಲೆ ಸೂಡಿದಳ್. ಆಗಳ್ ದ್ರುಪದನ್ ಬದ್ದವಣದ ಪಱೆಗಳನ್ ಬಾಜಿಸಲ್ ಪೇಳ್ದು, ಸುರತಮಕರಧ್ವಜನನ್ ದ್ರೌಪದಿಯೊಡನೆ ಸಿವಿಗೆಯನ್ ಏಱಿಸಿ, ಧೃಷ್ಟದ್ಯುಮ್ನ ಯುಧಾಮನ್ಯು ಉತ್ತಮೌಜ ಶಿಖಂಡಿ ಚೇಕಿತಾನರ್ ಎಂಬ ತನ್ನ ಮಗಂದಿರುಮ್ ತಮ್ಮಂದಿರುಮ್ ಬೆರಸು ನೆಲನ್ ಮೂರಿವಿಟ್ಟಂತೆ ಬರೆ ಮುಂದಿಟ್ಟು ಪೊಳಲ್ಗೊಂಡು ವರ್ಪುದುಮ್). 

# ೧೯. ಹತಾಶೆಗೊಂಡವರ ಹೋರಾಟ

(೬೪ ನೆಯ ಗದ್ಯದಿಂದ ೭೪ ನೆಯ ಪದ್ಯ)

## ಪಾತ್ರಗಳು

| | |
|---|---|
| ದುರ್ಯೋಧನ: | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. |
| ಕರ್ಣ: | ಅಂಗರಾಜ್ಯದ ಒಡೆಯ. |
| ಶಕುನಿ: | ಗಾಂಧಾರಿಯ ಅಣ್ಣ. |
| ದುಶ್ಶಾಸನ: | ದುರ್ಯೋಧನನ ತಮ್ಮ. |
| ಶಲ್ಯ: | ಮದ್ರ ದೇಶದ ರಾಜ. ಮಾದ್ರಿಯ ಸೋದರ. ಪಾಂಡವರು ಮತ್ತು ಕೌರವರ ಸೋದರ ಮಾವ. |
| ದ್ರುಪದ: | ಛತ್ರಾವತಿ ನಗರದ ರಾಜ. |
| ಅರ್ಜುನ: | ಪಾಂಡುರಾಜ ಮತ್ತು ಕುಂತಿಯ ಮಗ. |
| ಕೃಷ್ಣ: | ವಸುದೇವ ಮತ್ತು ದೇವಕಿಯರ ಮಗ, ಪಾಂಡವರ ಹಿತ ಚಿಂತಕ. |
| ಬಲರಾಮ: | ಕೃಷ್ಣನ ಅಣ್ಣ, ದ್ವಾರಕಾ ಪಟ್ಟಣದ ಒಡೆಯ. |
| ದ್ರೌಪದಿ: | ದ್ರುಪದನ ರಾಜನ ಮಗಳು. |

## ಹತಾಶೆಗೊಂಡವರ ಹೋರಾಟ

ಇತ್ತ ದುರ್ಯೋಧನನ್ ಕರ್ಣ ಶಲ್ಯ ಶಕುನಿ ದುಶ್ಯಾಸನಾದಿಗಳೊಳ್ ಆಲೋಚಿಸಿ...

**ದುರ್ಯೋಧನ:** ಪೇಳಿಮ್ ಏಗೆಯ್ವಮ್.

(ಎನೆ ಕರ್ಣನ್ ಇಂತು ಎಂದನ್.)

**ಕರ್ಣ:** ಜನಮೆಲ್ಲಮ್ ನೆರೆದು ಅಕ್ಕಟ... ಅಣ್ಣರ್ ಇವರ್ ಇಂದು ಏವಂದರ್... ಏವೋದರ್ ಎಂಬಿನಮ್ ಏನ್ ಪೋಪಮೆ ನಾಡ ಕೂಟಕುಳಿಗಳ್ಗೆ ಏದೋಸಮ್... ಏನ್ ಬನ್ನಮ್. ಒಂದನೆ ಕೇಳ್ ಆಂತರನ್ ಇಕ್ಕಿ, ಮಿಕ್ಕ ವಿಜಯಶ್ರೀಕಾಂತೆಗಮ್ ಕಾಂತೆಗಮ್ ನಿನಗಮ್ ದೋರ್ವಲದಿಂದಮ್ ಒಂದೆ ಪಸೆಯೊಳ್ ಪಾಣಿಗ್ರಹಮ್ ಗೆಯ್ಯೆನೇ.

(ಎನೆ ಶಲ್ಯನ್ ಇಂತು ಎಂದನ್.)

**ಶಲ್ಯ:** ಕನ್ನೆಯನ್ ಕುಡುವೊಡೆ ನಿಸ್ತ್ರಪಮ್ ಕುಡುವುದು. ಬೆಸೆಕೋಲನ್ ಏಱಿಸಿದನ್ ಎಂದು... ಪೇಳ್, ದ್ವಿಜಕುಲಂಗೆ ಕುಡುವುದೆ. ಇದು ವಿಶ್ವ ನರೇಂದ್ರ ವೃಂದದೊಳ್ ತೊಡರ್ದ ಪರಾಭವಮ್. ಆನ್ ದ್ರುಪದನನ್ ತಱಿದು ಒಟ್ಟದೆ, ಕೆಮ್ಮಗೆ ಇದನ್ ಕಡೆಗಣಿಸಿ ಇರ್ದೊಡೆ, ಎನ್ನ ಕಡುಗೊರ್ವಿದ ತೋಳ್ಗಳ ಕೊರ್ವು ಅದೇವುದೋ.

(ಎಂದು ಕೆಳರ್ದು ನುಡಿದು, ಸಯಂಬರಕೆ ನೆರೆದ ಅರಸು ಮಕ್ಕಳ್ ಎಲ್ಲರನ್ ಉತ್ಸಾಹಿಸಿ ನೋಡೆ ನೋಡೆ... ಹಯಮ್ ಪಕ್ಕರೆಯಿಕ್ಕಿ ಬಂದುವು; ಘಟೆ ಪಣ್ಣಿದುವು; ಆಯುಧಂಗಳಿನ್ ರಥಮ್ ತೆಕ್ಕನೆ ತೀವಿ ಬಂದುವು; ಒಂದು ಅಣಿ ಪುಲಿವಿಂಡುವೊಲ್ ಆದ ಅಳುರ್ಕೆ ಕೈಮಿಕ್ಕಿರೆ ಬಂದುದು; ರಣಾನಕ ರಾವಮ್

ಅಳುಂಬಮ್ ಆದುದು; ಇವರ್ಗೆ ಮಿಕ್ಕು ಬರ್ದುಂಕುವನ್ನರ್ ಆರ್ ಎಂಬಿನೆಗಮ್ ರಾಜಕಮ್ ಮಸಗಿತ್ತು. ಅಂತು ನೆಲನ್ ಮೂರಿವಿಟ್ಟಂತೆ ತಳರ್ದು ಮಿಳಿರ್ವ ಕೇತನ ರಾಜಿಗಳ್, ತೆರೆಗಳ ಬಂಬಲಮ್ ಎತ್ತಿಸಿದ ಬೆಳ್ಗೊಡೆಗಳ್, ಓಳಿವಟ್ಟ ಬೆಳ್ನೊರೆಗಳ ಪಿಂಡನ್, ಭಯಂಕರ ಕರಿಗಳ್ ಮಕರಂಗಳ, ಉಳ್ಕುವ ಕೈದುಗಳ್ ತೆಱಂಬೊಳೆವ ಮೀಂಗಳನ್ ನಿರಾಕರಿಸಿರೆ, ನರಾಧಿಪ ಸೈನ್ಯಸಾಗರಮ್ ಮೇರೆದಪ್ಪಿ ಕವಿದತ್ತು. ಅಂತು ಕವಿದ ರಿಪುಬಳಜಳನಿಧಿಯ ಕಳಕಳರವಮನ್ ಕೇಳ್ದು, ಪೊಳಲನ್ ಪುಗಲ್ ಒಲ್ಲದೆ ನಿಂದ ಮನುಜಮಾಂಧಾತನನ್ ಪಾಂಚಾಳರಾಜನ್ ಇಂತು ಎಂದನ್.)

**ದ್ರುಪದ:** ವಿದ್ವಿಷ್ಟವಿದ್ರಾವಣ, ನೀನ್ ಧನುವನ್ ತೆಗೆದು ಮೀನನ್ ಎಚ್ಚು ಅಳವನ್ ಕೈಕೊಂಡುದರ್ಕಮ್, ಕರಮ್ ಈ ಕನ್ನಿಕೆ ನಿನಗೆ ಸೋಲ್ತುದರ್ಕಮ್, ಇನಿತುಮ್ ರಾಜಕುಲಮ್ ಎರ್ದೆಯೊಳ್ ಕೋಪಾಗ್ನಿ ಕೈಗಣ್ಮೆ ಬಂದು ಸಮಸ್ತಭರದಿನ್ ಮೇಲೆಳ್ದುದು. ನೀನಲ್ಲದೆ ಇನ್ ಕಾವನ್ ಆವನೊ. ಎನ್ನ ತಲೆಯನ್ ಕಾವುದು.

(ಎಂಬುದುಮ್ ಅರಾತಿಕಾಳಾನಳನ್...)

**ಅರ್ಜುನ:** ಇದರ್ಕೆ ಏನುಮ್ ಚಿಂತಿಸಲ್ವೇಡ. ನೀಮ್ ಎನ್ನ ಕಾಳೆಗಮನ್ ಪೆಱಗಿರ್ದು ನೋಡಿಮ್.

(ಎಂದು ತಾನುಮ್ ಭೀಮಸೇನನುಮ್ ದಿವ್ಯಶರಾಸನಂಗಳನ್ ಕೊಂಡು, ಪೂಣೆ ಪುಗುವ ಅರಾತಿಬಲಮನ್ ಮಾರ್ಕೊಂಡು, ತೆಗೆ ನೆರೆದು ಇಸೆ, ಸರಳ ಪೊದಲ್ದ ಬಲ್ಸರಿಯ ಕೋಳ್ಗೆ ಇರಲಾಱದೆ ಬಿಲ್ ತೆರಳ್ದು, ದುರ್ಧರ ಹಯಮ್ ಅಳ್ಗಿ, ಸಂದ ಅಣಿ ಸಂದಣಿಸಿ ಕೂಳ್ಗುದಿಗೊಂಡು, ಉದಗ್ರ ಭೀಕರ ರಥಮ್ ಅಳ್ಗಿ, ದಂತಿ ಘಟೆಗಳ್ ಪೆಱಗಿಟ್ಟೊಡೆ, ಕಟ್ಟೆಗಟ್ಟಿದಂತಿರೆ ಅರಾತಿಬಲಮ್ ತಳರ್ದತ್ತು. ಕದನತ್ರಿಣೇತ್ರನನ್ ಆಂಪವರ್ ಆರ್. ಆಗಳ್ ಕರ್ಣನ್ ಅರ್ಣವ ನಿನಾದದಿಂದೆ ಆರ್ದು, ಗುಣಾರ್ಣವನೊಳ್ ಬಂದು ತಾಗಿ, ಶಲ್ಯನ್ ಭೀಮಸೇನನೊಳ್ ತಾಗಿ, ಕಿಱಿದುಮ್ ಪೊಳ್ತು ಕಾದೆ...)

**ಕರ್ಣ:** (ತನ್ನಲ್ಲಿಯೇ)

ಪಾರ್ವನ ಶರಾಸನ ವಿದ್ಯೆಯನ್ ಗೆಲಲ್ಕೆ ಅರಿದು.

(ಎಂದು ನೊಂದು ನಿತ್ತರಿಸದೆ)

ಪಾರ್ವನೊಳ್ ಕಲಹಮ್ ಆಗದು. ಚೀಃ ಇದು ದೊರೆಯಲ್ತು.

(ಎಂದು ಭಾಸ್ಕರಸುತನ್ ಒಯ್ಯನೆ ಓಸರಿಸೆ, ಮರುತ್ಸುತನ್ ಮದ್ರಮಹೀಶನುಮನ್ ವಿರಥನೆ ಮಾಡಿ, ತಳ್ತು ಮಲ್ಲಯುದ್ಧದೊಳ್ ಒರ್ಮೆಯೆ ನೆಲಕೆ ಇಕ್ಕಿದನ್. ಆಗಳ್ ಆ ಬಲದ ನಡುವೆ ಇರ್ದ ನಾರಾಯಣನ್ ಬಲದೇವಂಗೆ ಸುಟ್ಟಿತೋಱಿ...)

**ಕೃಷ್ಣ:** ಇವರ್ ಭೀಮಾರ್ಜುನರ್ಕಳ್ ಅಮೋಘಮ್ ಅಪ್ಪರ್.

(ಎಂದು ಅವರ ಸಾಹಸಕ್ಕೆ ಮೆಚ್ಚಿ, ಸಂತಸಮ್ ಪಟ್ಟು ಇರ್ದಾಗಳ್, ಉಳಿದ ಅರಸು ಮಕ್ಕಳ್ ಎಲ್ಲಮ್ ಕರ್ಣ ಶಲ್ಯರ್ ಮೊಗಮ್ ತಿರಿದುದನ್ ಕಂಡು ಮನಂಗೆಟ್ಟು, ಕರಮ್ ಒಸೆದು ಆ ದ್ರುಪದಜೆಯೊಳ್ ನೆರೆದ ಒಸಗಗೆ ತಮ್ಮ ಬೀರಮನ್ ಬಿಂಕಮುಮನ್ ತೆಱವುಮ್ ತೆಲ್ಲಂಟಿಯುಮ್ ಎಂದು ಈವ ವೋಲ್ ಅರಿಕೇಸರಿಗೆ ಆಗಳ್ ಬೆನ್ನಿತ್ತರ್. ಆಗಳ್ ವಿಕ್ರಾಂತ ತುಂಗನ್ ಬಿಲ್ಲ ಕೊಪ್ಪಿನ ಮೇಲೆ ಕೆಯ್ಯನ್ ಊಱಿ ಮುಗುಳ್ನಗೆ ನಗುತ್ತುಮ್, ಪಾಂಚಾಳ ರಾಜತನೂಜೆಗೆ ಇಂತು ಎಂದನ್.)

**ಅರ್ಜುನ:** ನಿನ್ನನ್ ಉಳುಗಿಸಲುಮ್, ಆಜಿಯೊಳ್ ಎನ್ನನ್ ಬೆಂಕೊಂಡು ಕಾದಲುಮ್ ಬೀರರ್ ಈಗಳ್ ಬಂದು, ಬಿನ್ನನೆ ಮೊಗದಿನ್ ಬೆನ್ನಿತ್ತುದನ್ ಸರಸಿರುಹಮುಖೀ, ಇನಿಸು ನೋಡ.

(ಎಂಬನ್ನೆಗಮ್, ದ್ರುಪದನ್ ಬಂದು ಅವರ್ ಪಾಂಡವರ್ ಅಪ್ಪುದುಮನ್, ತನ್ನ ಅಳಿಯನ್ ವಿಕ್ರಮಾರ್ಜುನನ್ ಅಪ್ಪುದುಮನ್ ತಪ್ಪಿಲ್ಲದೆ ಅಱಿದು, ಮಹಾವಿಭೂತಿಯಿನ್ ಪೊಳಲನ್ ಪುಗಿಸಿ, ಪೊಳಲೊಳಗೆ ಕನ್ನಡಿಯ ಕಂಚಿನ ತೋರಣದ ಓಳಿಗಳ್ ತಳತ್ತಳಿಸೆ ಒಪ್ಪೆ, ವಿಚಿತ್ರಕೇತುತತಿಗಳ್ ಮಿಳಿರ್ದು ಆಡೆ, ಪುರಾಂಗನಾಜನಂಗಳ ಜಯಜೀಯಮಾನ ರವಮ್, ಇಕ್ಕುವ ಸೇಸೆ ಮನೋನುರಾಗಮನ್ ಬಳೆಯಿಸೆ, ಪರಸೈನ್ಯಭೈರವನ್ ಆ ದ್ರುಪದಮಂದಿರಮನ್ ಪೊಕ್ಕನ್.) ❖

# ೨೦. ಪಾಂಡವರು ಹಸ್ತಿನಾವತಿಗೆ ಹಿಂತಿರುಗುವುದು

(೧ ನೆಯ ಗದ್ಯದಿಂದ ೪ ನೆಯ ಗದ್ಯ)

## ಪಾತ್ರಗಳು

| | |
|---|---|
| ದ್ರುಪದ: | ಪಾಂಚಾಲ ದೇಶದ ರಾಜ. |
| ಪಾಂಡವರು: | ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ. |
| ಚರ: | ಕೌರವರ ಕಡೆಯ ಗೂಢಚಾರ. |
| ಧೃತರಾಷ್ಟ್ರ: | ಹಸ್ತಿನಾವತಿಯ ರಾಜ. |
| ದುರ್ಯೋಧನ: | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. |
| ವಿದುರ: | ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ. |
| ಭೀಷ್ಮ: | ಶಂತನು ಮತ್ತು ಗಂಗಾದೇವಿಯ ಮಗ. |
| ದ್ರೋಣ: | ಕೌರವರ ಮತ್ತು ಪಾಂಡವರ ವಿದ್ಯಾಗುರು. |

## ಪಾಂಡವರು ಹಸ್ತಿನಾವತಿಗೆ ಹಿಂತಿರುಗುವುದು

ಅಂತು ದ್ರುಪದನ ಪೊಳಲೊಳ್ ಪಾಂಡವರ್ ಚಾಗಕ್ಕೆ ಬೂತುಮ್, ಭೋಗಕ್ಕೆ ಪೊಳ್ತುಮ್ ನೆಱೆಯದು ಎನಿಸಿ, ಸುಖಸಂಕಥಾ ವಿನೋದದಿನ್ ರಾಜ್ಯಮ್ ಗೆಯ್ಯುತ್ತಿರ್ಪನ್ನೆಗಮ್, ಇತ್ತಲ್ ಆಗ ಚರರ್ ಎಯ್ದಿದರ್. ಎಯ್ದಿ ಹಸ್ತಿನಾಪುರಕ್ಕೆ...

**ಚರ:** ಆ ಪಾಂಡವರ್ ತಮ್ಮುತಯ್ವರುಮ್ ದ್ರುಪದಾಧಿರಾಜಪುರದೊಳ್ ಪಾಂಚಾಳಿಯನ್ ಕೈಗೊಂಡು ಇರ್ದರ್. ಧುರದೊಳ್ ಕರ್ಣನನ್ ಆಂತು ಗೆಲ್ದವನ್ ಅವನ್ ಸಂದ ಅರ್ಜುನನ್. ಸಂಗರದೊಳ್ ತಳ್ತು ಶಲ್ಯನನ್ ಇಕ್ಕಿ ಗೆಲ್ದ ಅದಟನ್ ಆ ಭೀಮನ್ ಗಡಮ್ ಕಾಣಿರೇ.

(ಎಂಬ ಮಾತನ್ ಧೃತರಾಷ್ಟ್ರ ದುರ್ಯೋಧನಾದಿಗಳ್ ಕೇಳ್ದು ಬಿಲ್ಲುಂಬೆಱಗುಮ್ ಆಗಿ...)

**ಧೃತರಾಷ್ಟ್ರ ಮತ್ತು ದುರ್ಯೋಧನ:** (ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಾರೆ.)
ಜತುಗೃಹದೊಳಗೆ ಕಾಯ್ವ ಅಳಲ್ ಉಱೆ ಅಯ್ವರುಮನ್ ಮಂತ್ರಬಲದೆ ಸುಟ್ಟೊಡಮ್ ದೆಯ್ವಬಲಮೊಂದೆ ಕಾದುದು. ದೆಯ್ವಮನ್ ಮೀಱಿ ಬಾಳಲ್ ನೆಱೆವರ್ ಆರಯ್ಯ.

(ಎಂಬುದುಮ್, ಭೀಷ್ಮ ದ್ರೋಣಾದಿಗಳ್ ನಿಶ್ಚಿತಮಂತ್ರರಾಗಿ ವಿದುರನನ್ ಕರೆದು ಆಳೋಚಿಸಿ...)

**ಭೀಷ್ಮ:** ಪೃಥಾತನೂಜರನ್ ನಿನ್ನ ಬಲ್ಲ ಮಾಳ್ಕೆಯಿನ್ ನುಡಿದು ಒಡಗೊಂಡು ಬರ್ಪುದು.

(ಎಂದು ಪೇಳ್ದು ಅಟ್ಟುವುದುಮ್, ಆತನ್...)

ವಿದುರ: ಅಂತೆ ಗೆಯ್ವನ್.

(ಎಂದು ರಥಾರೂಢನಾಗಿ ಪಾಂಚಾಳ ರಾಜಪುರಕ್ಕೆ ವಂದು ಪಾಂಡುಪುತ್ರರನ್ ಕಂಡು...)

ವಿದುರ: ಅದು ಪಿರಿದುಮ್ ಪ್ರಮಾದಮ್. ಅದುವುಮ್ ಕುರುರಾಜನಿನ್ ಆಯ್ತು ಪೋಯ್ತು ಸಂದುದು. ಅದನ್ ಮಱೆಯಲ್ಕೆವೇಳ್ಪುದು. ಪಾಂಡುರಾಜನ್ ಆಳ್ದುದನ್ ಎಳೆಯನ್ ತಪ್ಪದೆ ಆಳ್ವುದು. ಮನಮ್ ಬಸದೆ ನೀಮ್ ಬರ್ಪುದು.

(ಎನೆ, ಪೋಪ ಕಜ್ಜಮನ್ ಅಯ್ವರುಮ್ ವಿದುರನೊಳ್ ಸಮೆದು, ಆ ದ್ರುಪದಂಗೆ ರಾಗದಿನ್ ಪೇಳ್ವುದುಮ್, ಆತನ ಬಳಿವಳಿಗೊಟ್ಟ ಮದಕರಿ, ಕರೇಣು, ಜಾತ್ಯಶ್ವ, ಶಶಿತಾರಹಾರ ವಸ್ತುಗಳನ್ ಕೆಯ್ಕೊಂಡು ದ್ರುಪದಜೆಯನ್ ಒಡಗೊಂಡು, ದ್ರುಪದನನ್ ಇರವೇಳ್ದು ಕತಿಪಯ ಪ್ರಯಾಣಂಗಳಿಮ್ ಮದಗಜಪುರಮನ್ ಎಯ್ದೆ ವಂದಾಗಳ್...)



# ೨೧. ಭೀಷ್ಮರ ಎಚ್ಚರಿಕೆ

(೫ ನೆಯ ಗದ್ಯದಿಂದ ೯ ನೆಯ ಪದ್ಯ)

## ಪಾತ್ರಗಳು

**ಧೃತರಾಷ್ಟ್ರ:** ಹಸ್ತಿನಾವತಿಯ ರಾಜ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಕರ್ಣ:** ಅಂಗರಾಜ್ಯದ ಒಡೆಯ.

**ಶಲ್ಯ:** ಪಾಂಡವರ ಮತ್ತು ಕೌರವರ ಸೋದರಮಾವ.

**ಶಕುನಿ:** ಗಾಂಧಾರಿಯ ಸೋದರ.

**ನದೀತನೂಜ:** ಶಂತನು ಮತ್ತು ಗಂಗಾ ದೇವಿಯ ಮಗ. ಈತನಿಗೆ ಗಾಂಗೇಯ ಎಂಬ ಮತ್ತೊಂದು ಹೆಸರಿದೆ.

**ಭಾರದ್ವಾಜ:** ದ್ರೋಣಾಚಾರ್ಯ. ಕೌರವರು ಮತ್ತು ಪಾಂಡವರ ವಿದ್ಯಾ ಗುರು.

**ಕೃಪ:** ಕೌರವರು ಮತ್ತು ಪಾಂಡವರು ವಿದ್ಯಾ ಗುರು.

**ವಿದುರ:** ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ.

## ಭೀಷ್ಮರ ಎಚ್ಚರಿಕೆ

ಆಗಳ್ ಆ ಪೊಳಲ ಬೀದಿಗಳೊಳೆಲ್ಲಮ್ ಗಂಧೋದಕ ಪಂಚಗವ್ಯಂಗಳನ್ ತಳಿಯಿಸಿ, ಗುಡಿಯನ್ ತೋರಣಗಳುಮನ್ ತುಱುಗಲುಮ್ ಬಂಬಲುಮಾಗೆ ಕಟ್ಟಿಸಿ, ಧೃತರಾಷ್ಟ್ರನ್ ದುರ್ಯೋಧನ ಕರ್ಣ ಶಲ್ಯ ಶಕುನಿ ನದೀತನೂಜ ಭಾರದ್ವಾಜ ಕೃಪಾದಿಗಳ್ ಬೆರಸಿ ಇದಿರ್ವಂದು, ಯಥೋಚಿತ ಪ್ರತಿಪತ್ತಿಗಳಿಂದ ಅಯ್ವರುಮನ್ ನಿಬಿಡಾಲಿಂಗನಮ್ ಗೆಯ್ದು, ಮುಂದಿಟ್ಟು ಒಡಗೊಂಡು ವಂದು ಪೊಳಲನ್ ಪುಗಿಸಿ, ಮುನ್ನಮೆ ಸಮೆದ ಬೀಡುಗಳೊಳ್ ಬೀಡನ್ ಬಿಡಿಸಿ, ಸೂಳ್ ಸೂಳೊಳೆ ಬಿರ್ದನಿಕ್ಕಿ, ವಿವಿಧ ವಿನೋದಂಗಳನ್ ತೋಱಿ, ಕೆಲವು ದಿವಸಮ್ ಇರ್ದು... ದ್ರೋಣ ಭೀಷ್ಮ ಕೃಪ ವಿದುರರ್ಕಳ್ ತಮ್ಮೊಳ್ ಆಲೋಚಿಸಿ...

**ಭೀಷ್ಮ:** ಎನ್ನ ನಡಪಿದುದರ್ಕಮ್ ಕೂರ್ತುದರ್ಕಮ್ ಪಾಂಡು ಪುತ್ರರ್ಗೆ ನೆಲನನ್ ಪಚ್ಚುಕೊಟ್ಟು ಪಟ್ಟಮನ್ ಕಟ್ಟುವೆನ್.

(ಎನೆ, ದುರ್ಯೋಧನನ್ ಏಗೆಯ್ದುಮ್ ಒಡಂಬಡದಿರೆ, ಭೀಷ್ಮರ್ ಮುನಿದು...)

**ಭೀಷ್ಮ:** ಒಡೆಯರ್ ಅದು ಏವರ್ ಎಂದು ನಿನಗೆ ಪಟ್ಟಮನ್ ಇತ್ತೊಡೆ ಉರ್ಕಿದಪ್ಪೆ. ಪೇಳ್, ಪೊಡವಿಗೆ ಅಧೀಶರಂತು ಅವರ್ಗಳ್ ಅಯ್ವರುಮನ್ ಕ್ರಮದಿಂದೆ ಪಟ್ಟಮನ್ ತಡೆಯದೆ ಕಟ್ಟಿ ಭೂತಳಮನ್ ಆಳಿಸದಿರ್ದೊಡೆ, ಅದರ್ಕೆ ಸೊರ್ಕಿ ನೀನ್ ನುಡಿಯದಿರಣ್ಣ. ನಿನ್ನ ನುಡಿಗೆ ಆನ್ ತಡೆದು ಇರ್ಪನೆ. ಸುಯೋಧನಾ ಪೇಳ್, ಕ್ರಮಮ್ ಅಱಿದು ಎನ್ನ ಕೊಟ್ಟುದನೆ ಕೊಂಡು ಮನೋಮುದದಿಂದೆ ಅಂತು ಬಾಳ್ವುದು. ಅವರ್ ಇವರ್ ಎಲ್ಲರುಮ್ ಸಮಮ್. ಅದಲ್ಲದೆ ಮಾರ್ಮಲೆದು ಉರ್ಕಿ ಭೀಮನೊಳ್ ಸಮರದೆ ಗರ್ವದಿನ್ ಗಾವಿಲರ್

ಪೊಣರಲ್ ಆರ್ಪಿರೆ... ಇನ್ನುಮ್ ಎಲ್ಲರನ್ ಯಮಸುತನುಮ್ ಸುರೇಂದ್ರಸುತನುಮ್ ಪೊಸೆದು ಈಗಳೇ ಮುಕ್ಕಿ ತೋಱಿರೇ. ಅದಲ್ಲದೆಯುಮ್ ಪಾಂಡುಪುತ್ರರಪ್ಪೊಡೆ ಪಾಂಡುರಾಜಂಗೆ ಬೆಸಕೆಯ್ಯದುದನ್ ಎನಗೆ ಬೆಸಕೆಯ್ವರ್. ಎನ್ನ ಎಂದುದನ್ ಮೀರುವರಲ್ಲರ್. ಆನ್ ಅವರ್ಗೆ ಪಟ್ಟಮನ್ ಕಟ್ಟಿ ನೆಲನನ್ ಪಚ್ಚುಕೊಡುವಾಗಳ್ ಅಡ್ಡಮ್ ಬರ್ಪ ಗಂಡರನ್ ನೋಳ್ಪೆನ್.

(ಎಂದು ಭೀಷ್ಮರ್ ಬಗ್ಗಿಸಿದೊಡೆ, ದುರ್ಯೋದನನ್ ಅತಿ ಸಂಭ್ರಮಾಕುಳಿತನಾಗಿ..)

**ದುರ್ಯೋಧನ:** ನೀಮ್ ಎಂದುದನ್ ಎಂದು ಬಾಳ್ವೆನ್.

(ಎಂದೊಡೆ ಅಪ್ಪುದು ಎಂದು..)

**ಭೀಷ್ಮ:** ಪಾಂಡುವಿನ್ ಬಳಿಯಮ್ ಧರಣೀ ನಾರಿಗೆ ಪೆಱರ್ ಗಂಡರ್ ಆರುಮ್ ಇಲ್ಲ. ಅಂತಿರಲ್ ಏವಮ್ ಪಡೆದು ಇರ್ದೊಡೆ ಸಪ್ತಾಂಗಮ್ ಅಳ್ದು ಕಿಡುಗುಮ್. ಈ ರಾಜಕಕ್ಕೆ ಅರಸನ್ ಧರ್ಮಜನ್ ಅಕ್ಕು.

(ಎಂದು ನಯದಿನ್ ನಿಶ್ಚೈಸಿ, ಕಲ್ಯಾಣ ಕಾರ್ಯರತರ್ ಆ ಯುಧಿಷ್ಠಿರ ನೃಪಂಗೆ ಉತ್ಸಾಹದಿನ್ ಪಟ್ಟಮನ್ ಕಟ್ಟಿದರ್. ಕಟ್ಟಿ...)

**ಭೀಷ್ಮ:** (ಧರ್ಮರಾಯನನ್ನು ಕುರಿತು)

ಸೇತುಬಂಧಮನ್ ತಾಗೆ ಗಂಗಾನದಿಯ ತೆಂಕಣ ಪಡುವಣ ನೆಲನನ್ ನೀಮ್ ಆಳ್ವುದು.

(ದುರ್ಯೋಧನನ್ನು ಕುರಿತು)

ಮೂಡಣ ಬಡಗಣ ನೆಲನನ್ ದುರ್ಯೋಧನನ್ ಆಳ್ವುದು.

(ಎಂದು ಪೂರ್ವಸ್ಥಿತಿಯೊಳ್ ಪಚ್ಚುಕೊಟ್ಟು...)

**ಧೃತರಾಷ್ಟ್ರ:** (ಪಾಂಡವರನ್ನು ಕುರಿತು)

ದುರ್ಯೋಧನನಪ್ಪೊಡೆ ಪೊಲ್ಲ ಮಾನಸನ್. ನೀಮುಮ್ ತಾಮುಮ್ ಒಂದೆಡೆಯೊಳ್ ಇರೆ, ಕಿಸುರುಮ್ ಕಲಹಮುಮ್ ಎಂದುಮ್ ಕುಂದದು. ಅದು ಕಾರಣದಿಂದ ಇಲ್ಲಿಗೆ ಅಱುವತ್ತು

ಯೋಜನದೊಳ್ ಇಂದ್ರಪ್ರಸ್ಥಮ್ ಎಂಬುದು ಪೊಳಲ್. ಅಲ್ಲಿಗೆ ಪೋಗಿ ಸುಖದಿನ್ ರಾಜ್ಯಂಗೆಯ್ಯುತ್ತಿರಿಮ್.

(ಎಂಬುದುಮ್)

**ಪಾಂಡವರು:** ಅಂತೆ ಗೆಯ್ವೆಮ್.

(ಎಂದು ಸಮಸ್ತ ಪರಿವಾರ ಪರಿವೃತರಾಗಿ ಒಡವರ್ಪ ಉಗ್ರಮಧೇಭ ವಾಜಿ ಗಣಿಕಾ ಅನರ್ಘ್ಯಾದಿ ರತ್ನಂಗಳೊಳ್ ಲಕ್ಷ್ಮಿ ತೊಡರ್ದು ಒಪ್ಪುತ್ತಿರೆ, ದಂತಿ ತುರಗಮ್ ಶ್ರೀದಿವ್ಯಕಾಂತಾಜನಮ್ ತೊಡವು ಎಂಬ ಒಂದುಮನ್ ಆ ಸುರಾಸುರರಿನ್ ಆ ಗೋವಿಂದನಿನ್ ಮುನ್ನೆ ಕೋಳ್ಪಡದ ಅಂಭೋನಿಧಿಯಂತೆ ಧರ್ಮಜನ್ ಬಂದು ನೆಗಳ್ದ ಇಂದ್ರಪ್ರಸ್ಥಮನ್ ಎಯ್ದುವುದುಮ್.)



# ೨೨. ಅರ್ಜುನನ ಜೈತ್ರ ಯಾತ್ರೆ

(೧೦ ನೆಯ ಗದ್ಯದಿಂದ ೧೨ ನೆಯ ಗದ್ಯ)

## ಪಾತ್ರಗಳು

ಅರ್ಜುನ: ಪಾಂಡುರಾಜ ಮತ್ತು ಕುಂತಿಯ ಮಗ.

ದ್ರೌಪದಿ: ಅರ್ಜುನನ ಹೆಂಡತಿ.

## ಅರ್ಜುನನ ಜೈತ್ರಯಾತ್ರೆ

ಅಂತು ಅಜಾತಶತ್ರು ಶತ್ರುಪಕ್ಷಕ್ಷಯಕರ ಕರವಾಳ ದಂಷ್ಟ್ರಾಭೀಳ ಭುಜಂಗಮೂರ್ತಿ ವಿಶ್ವವಿಶ್ವಂಬರ ಆಧಾರಮಪ್ಪ ಅರಿಕೇಸರಿಯ ತೋಳ್ವಲದೊಳ್ ರಾಜ್ಯಮ್ ಗೆಯ್ಯುತಿರ್ಪನ್ನೆಗಮ್, ವಿಕ್ರಾಂತತುಂಗನ್ ಒಂದೆಡೆಯೊಳಿರ್ಪ ಇರವಿಂಗೆ ಉಮ್ಮಳಿಸಿ ದಿಗಂಗನಾ ಮುಖಾವಲೋಕನ ಗೆಯ್ಯಲ್ ಬಗೆದು...

**ಅರ್ಜುನ:** (ತನ್ನಲ್ಲಿಯೇ)

ಸೆಣಸುಳ್ಳ ಉದ್ವೃತ್ತರನ್ ತಳ್ತು ಇಱಿಯದೆ, ಚತುರಂಭೋಧಿ ಪರ್ಯಂತಮಮ್ ತಾನ್ ಪೋಗಿ ಧಾರಿಣಿಯನ್ ಬಾಯ್ಕೇಳಿಸದೆ, ದಾರುಣ ದೈತ್ಯರ್ ಮುನಿಜನಕ್ಕೆ ಇಷ್ಟಿ ವಿಘ್ನಗಳಮ್ ಮಾಡೆ ನೀಡಿಲ್ಲದೆ, ಸಲೆ ಚಲದೆ ಆಟಂದು ಕೊಂದಿಕ್ಕದೆ, ಒರ್ವನ್ ಗುಣಮ್ ಉಂಟು ಎಂದು, ಉಂಡು ಪಟ್ಟಿರ್ಪನನ್ ಅಣಮೆ ನಿರುದ್ಯೋಗಿಯನ್ ಭೂಪನ್ ಎಂಬರ್.

(ಎಂದು ವಿಜಿಗೀಷುವೃತ್ತ ಉದ್ಯುಕ್ತನಾಗಲ್ ಬಗೆದು...)

**ಅರ್ಜುನ:** (ತನ್ನಲ್ಲಿಯೇ)

ಎನ್ನ ಪೋಗನ್ ಇನಿಯಳ್ಗೆ ಅಱಿಪಿದೊಡೆ ಮನಮ್ ಮಱುಕಕ್ಕೆ, ನೀಳ್ದ ಕಣ್ ಒಱೆದು ಉಗುವ ಅಶ್ರುವಾರಿಗೆ, ತೊದಳ್ನುಡಿ ಲಲ್ಲೆಗೆ ಪಕ್ಕುಗೊಟ್ಟು, ಕಾಲ್ಗೆ ಎಱಗಿರೆ, ಪೋಗು ಕೆಟ್ಟಪುದು. ಕಳತ್ರಮ್ ಮೋಹಮಯಮ್ ನಿಗಳಮ್.

(ಎಂದು ಅಱಿಪದೆ, ನಟ್ಟಿರುಳ್ ಮಱೆದು ಸಾರ್ಚಿದ ನಲ್ಲಳ ತಳ್ತ ತೋಳ್ಗಳನ್ ಮೆಲ್ಲಮೆಲ್ಲನೆ ಪತ್ತುವಿಡಿಸಿ, ತನ್ನ ತೊಟ್ಟ ದಿವ್ಯ ಆಭರಣಂಗಳ್ ಎಲ್ಲಮನ್ ಕಳೆದು, ದಿವ್ಯ ಶರಧಿಗಳನ್ ಬಿಗಿದು

ಕೊಂಡು, ದಿವ್ಯ ಚಾಪಮನ್ ಪಿಡಿದು ಪ್ರಥಮ ಚಳಿತ ದಕ್ಷಿಣ ಚರಣನಾಗಿ ನಿಜ ನಿವಾಸದಿನ್ ಪೊಱಮಟ್ಟು, ಖಾಂಡವಪ್ರಸ್ಥದಿಂದ ಉತ್ತರಾಭಿಮುಖನಾಗಿ ಕಾಮ್ಯಕವನದೊಳಗನೆ ನೀಲಪರ್ವತದ ಮೇಗನೆ ಪೋಗಿ...)



# ೨೩. ಬನವಾಸಿ ನಾಡಿನಲ್ಲಿ ಅರ್ಜುನ

(೨೭ ನೆಯ ಗದ್ಯದಿಂದ ೩೧ ನೆಯ ಗದ್ಯ)

## ಪಾತ್ರ

ಅರ್ಜುನ: ಪಾಂಡುರಾಜ ಮತ್ತು ಕುಂತಿಯ ಮಗ.

# ಬನವಾಸಿ ನಾಡಿನಲ್ಲಿ ಅರ್ಜುನ

ಬಾಳೇಂದು ಮೌಳಿಯನ್ ಸ್ತುತಿಸಿ....

**ಅರ್ಜುನ:** (ಬನವಾಸಿಯ ಪ್ರಾಂತ್ಯದಲ್ಲಿನ ನಿಸರ್ಗದ ಚೆಲುವನ್ನು ಕಂಡು ಮೋಹಗೊಂಡು...)

ಬನವಾಸಿ ದೇಶದೊಳ್ ಆವ ಬೆಟ್ಟುಗಳೊಳಮ್ ಆವ ನಂದನ ವನಂಗಳೊಳಮ್ ನೋಳ್ಪೊಡೆ ಸೊಗಯಿಸಿ ಬಂದ ಮಾಮರನೆ; ತಳ್ತ ಎಲೆವಳ್ಳಿಯೆ; ಪೂತ ಜಾತಿ ಸಂಪಗೆಯೆ; ಕುಕಿಲ್ವ ಕೋಗಿಲೆಯೆ; ಪಾಡುವ ತುಂಬಿಯೆ; ನಲ್ಲರ ಒಳ್ಮೊಗಮ್; ನಗೆಮೊಗದೊಳ್ ಪಳಂಚೆ ಅಲೆಯೆ ಕೂಡುವ ನಲ್ಲರೆ;

ಚಾಗದ ಭೋಗದ ಅಕ್ಕರದ ಗೇಯದ ಗೊಟ್ಟಿಯ ಅಲಂಪಿನ ಇಂಪುಗಳ್ಗೆ ಆಗರಮಾದ ಮಾನಸರೆ ಮಾನಸರ್; ಅಂತು ಅವರಾಗಿ ಪುಟ್ಟಲ್ ಏನಾಗಿಯುಮ್ ಏನೊ ತೀರ್ದಪುದೆ; ತೀರದೊಡಮ್ ಮಱಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಬನವಾಸಿ ದೇಶದೊಳ್ ನಂದನದೊಳ್ ಪುಟ್ಟುವುದು;

ತೆಂಕಣ ಗಾಳಿ ಸೋಂಕಿದೊಡಮ್, ಒಳ್ನುಡಿ ಕೇಳ್ದೊಡಮ್, ಇಂಪನ್ ಆಳ್ದ ಗೇಯಮ್ ಕಿವಿವೊಕ್ಕಡಮ್, ಬಿರಿದ ಮಲ್ಲಿಗೆ ಕಂಡೊಡಮ್, ಆದ ಕೆಂದು ಅಲಂಪನ್ ಗೆಡೆಗೊಂಡೊಡಮ್, ಮಧು ಮಹೋತ್ಸವಮ್ ಆದೊಡಮ್, ಏನನ್ ಎಂಬೆನ್ ಎನ್ನ ಮನಮ್ ವನವಾಸಿ ದೇಶಮನ್ ಆರ್ ಅಂಕುಸಮ್ ಇಟ್ಟೊಡಮ್ ನೆನವುದು;

ಅಮರ್ದನ್ ಮುಕ್ಕುಳಿಪಂತುಟಪ್ಪ ಸುಸಿಲ ಒಂದು ಇಂಪು; ತಗುಳ್ದ ಒಂದು ಗೇಯಮುಮ್; ಆದ ಅಕ್ಕರ ಗೊಟ್ಟಿಯುಮ್; ಚದುರರ

ಒಳ್ಪಾತುಮ್; ಕುಳಿರ್ ಕೋಳ್ಪ ಜೊಂಪಮುಮ್; ಏವೇಳ್ಪುದನುಳ್ಳ ಮೆಯ್ ಸುಕಮನ್ ಇಂತು ಎನ್ನನ್ ಕರಮ್ ನೋಡಿ ನಾಡೆ ಮನಂಗೊಡಿರೆ, ತೆಂಕನಾಡ ಮಱೆಯಲ್ಕೆ ಇನ್ನೇನ್ ಮನಮ್ ಬರ್ಕುಮೇ.

(ಎಂದು ಅರಿಕೇಸರಿ ತೆಂಕನಾಡನ್ ನಾಡಾಡಿಯಲ್ಲದೆ ಮೆಚ್ಚುತ್ತುಮ್ ಆ ನಾಡನ್ ಒಂದೆ ಬಿಲ್ಲೊಳ್ ಉಂಡಿಗೆ ಸಾಧ್ಯಮ್ ಮಾಡಿ ಪಶ್ಚಿಮ ದಿಕ್ ವಿಭಾಗ ಅಭಿಮುಖನಾಗಿ ಬಂದು...)



# ೨೪. ದ್ವಾರಾವತಿ ಪಟ್ಟಣಕ್ಕೆ ಅರ್ಜುನನ ಆಗಮನ

(೩೨ ನೆಯ ಪದ್ಯದಿಂದ ೩೯ ನೆಯ ಪದ್ಯ)

## ಪಾತ್ರ

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಹೆಂಗಸು:** ದ್ವಾರಾವತಿ ಪಟ್ಟಣದ ಪ್ರಜೆ.

## ದ್ವಾರಾವತಿ ಪಟ್ಟಣಕ್ಕೆ ಅರ್ಜುನನ ಆಗಮನ

ಸಾರ ವಸ್ತುಗಳಿಮ್ ನೆರೆದ ಅಂಭೋರಾಶಿಯೆ ಕಾದಿಗೆ; ಕಾವನುಮ್ ಸೀರಪಾಣಿ; ವಿಳಾಸದಿನ್ ಆಳ್ದನ್ ಚಕ್ರಧರನ್; ಬಗೆವಂಗೆ ಸಂಸಾರಸಾರಮಿದು ಎಂಬುದನ್, ಅಸಂಚಳ ಕಾಂಚನದ್ವಾರ ಬಂಧುರ ಬಂಧ ಗೃಹ ಉದ್ಯತ್ ದ್ವಾರವತೀಪುರಮನ್ ನರನ್ ಅಂದು ಎಯ್ತಂದನ್.

ಅನ್ನೆಗಮ್ ತನ್ನ ಮಯ್ದುನನಪ್ಪ ಅಮೋಘಾಸ್ತ್ರ ಧನಂಜಯನ ಬರವಿನ ಸಂತಸದ ಒಸಗೆ ಪಡೆಮಾತನ್ ಮುಂದುವರಿದು ಅಱಿಪುವಂತೆ– **“ಪಲವುಮ್ ಜನ್ಮದೊಳಾದ ನಿನ್ನ ಕೆಳೆಯನ್ ಬಂದಪ್ಪನ್. ಆತಂಗೆ ಇನ್ ನೀನ್ ಬೆಂಬಲಮ್. ನಿನಗೆ ಆತನ್. ಇಳಾ ವಿಖ್ಯಾತನನ್ ಆತನನ್ ಕೂರ್ತು ನೋಡಲುಮ್, ಅಳ್ಕರ್ತು ಅಮರ್ದು ಅಪ್ಪಲುಮ್ ಇಂದು ಪಡೆವೆ”** ಎಂಬಂತೆ ದಲ್ ಆ ಬಲಿಬಲಪ್ರಧ್ವಂಸಿಗೆ ಬಲಗಣ್ಣುಮ್ ಬಲದೋಳುಮ್ ಅಂದು ಇಟ್ಟಳಮ್ ಕೆತ್ತಿತ್ತು.

ಅಂತು ದಕ್ಷಿಣಾಕ್ಷಿ ಸ್ಪಂದನದೊಳಮ್ ಸೂಚಿಸುವ ಶುಭಸೂಚನೆಯೊಳಮ್ ನಾರಾಯಣನ್ ಉದಾತ್ತನಾರಾಯಣನ ಬರವನ್ ಅಱಿದು, ಬಲದೇವ ಸಾತ್ಯಕಿ ಕೃತವರ್ಮಾದಿಗಳಪ್ಪ ತನ್ನೊಡವುಟ್ಟಿದರುಮ್, ವೃಷ್ಣಿ ಕಾಂಭೋಜ ಕುಳತಿಳಕರಪ್ಪ ಯಾದವರುಮ್ ಬೆರಸು, ಮದಕರಿ ಕರೇಣು ತುರಗಾದಿ ನಾನಾ ವಿಧ ವಾಹನಂಗಳನ್ ಏಱಿ, ಮಯ್ದುನಂಗೆ ಇದಿರ್ವಂದು, ತಮ್ಮ ಅಲಂಪಿನ ಅಳ್ಕಱಿನ ರೂಪನೆ ಕಾಣ್ಬಂತೆ ಕಂಡು, ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮ್ ಓರೊರ್ವರನ್ ತೆಗೆದಪ್ಪಿ ನಿಬಿಡಾಲಿಂಗನಮ್ ಗೆಯ್ದು, ಆನಂದ ಜಳ ಪರಿಪೂರ್ಣ ವಿಸ್ತೀರ್ಣ ವಿಲೋಚನಂಗಳಿಂದಮ್ ಮುಹುರ್ ಮುಹುರ್ ಆಲೋಕನಮ್ ಗೆಯ್ಯುತ್ತುಮ್, ಉತ್ತುಂಗ ಮತ್ತ ವಾರಣಂಗಳನ್ ಏಱಿ ಪೊಳಲನ್ ಪುಗೆ–

**“ಸುರ ನರ ಕಿನ್ನರ ಉರಗ ನಭಶ್ಚರ ಕಾಂತೆಯರ್ ಏವರ್ ಎಂದು ಮಾಂಕರಿಸುವ ಕೆಯ್ತದ ಅಂದದ ಮುರಾರಿಯ ತಂಗೆಯನ್ ಅಪ್ಪುಕೆಯ್ದು ಚಚ್ಚರಮ್ ಒಳಪೊಯ್ದು ನೀನ್ ನಿನಗೆ ಮಾಡುವುದು”** ಎಂದು ಅಮರೇಂದ್ರ ಪುತ್ರನನ್ ಆ ಪುರದ ವಾತ ವಿಧೂತ ವಿನೂತ ಕೇತುಗಳ್ ಕರೆವವೊಲ್ ಆದುವು.

ಆಗಳ್ ಮೊಳಗುವ ಬದ್ಧವಣದ ಪಱೆಗಳುಮ್, ಪಿಡಿದ ಕೆಂಬೊನ್ನ ತಳಿಗೆಯೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಸೇಸೆಯುಮ್ ಬೆರಸು-ಒದವಿದ ನೂಲ ತೊಂಗಲ ಉಲಿ ದೇಸೆಯನ್ ಆಂತು ವಿಳಾಸದಿಂದೆ ಇಱುಂಕಿದ ನಿಱಿ, ಗಂಡರ ಅಳ್ಳೆರ್ದೆಗಳನ್ ತುಳಿವೋಜೆಯನ್ ಉಂಟುಮಾಡುವ ಅಂದದೆ ನಿಡುಗಣ್ಣುಗಳೊಳ್ ನಡೆ, ಮನೋಭವನ ಒಡ್ಡಣದಂತೆ ತಂಡ ತಂಡದೆ ಪರಿತಂದು ಪುರಾಂಗನಾ ಜನಮ್ ಅಂದು ಸೇಸೆಯನ್ ಸೂಸಿದುದು.

ಮಿಳಿರ್ವ ಕುರುಳ್ಗಳೊಳ್ ಪೊಳೆವ ಕಣ್ಗಳ ಬೆಳ್ಪು ಪಳಂಚಿ ಚೆನ್ನ ಪೂಗಣೆಗೆ ಎಣೆಯಾಗೆ, ಪುರ್ವುಮ್ ಎಮೆಗಳ್ ಬಿಡದೆ ಅಳ್ಳಿಱಿದು ಇಕ್ಷುಚಾಪದೊಳ್ ಖಳ ಕುಸುಮಾಸ್ತ್ರನ್ ಇಟ್ಟ ಗೊಣೆಯಕ್ಕೆ ಎಣೆಯಾಗಿರೆ, ನಿಳ್ಕಿ ನಿಳ್ಕಿ ಕರಿಯನ್ ಏಱಿದನನ್ ಪಡೆಮೆಚ್ಚೆಗಂಡನನ್ ಕೋಮಳೆ ನಡೆ ನೋಡಿದಳ್.

ಮತ್ತೊರ್ವಳ್ ಅತಿ ಸಂಭ್ರಮ ತ್ವರಿತದಿನ್ ಮೇಖಳಾಕಳಿತ ರುಚಿರ ಲುಳಿತಾಧರ ಪಲ್ಲವೆ ನೋಟ್ಪ ದಂಡುಗಳೊಳ್ ಅಂಡುಗೊಂಡು ಸೊರ್ಕಿದಾನೆ ಬರ್ಪಂತೆ ಬಂದು

ಕಾಯದೆ ಕಾಮನ್ ಆರ್ದು ಇಸೆ ತೊವಲ್ ಪಿಡಿವಂತೆ ತೋರ್ಪ ಆ ಎಲೆ ಎಡಗಯ್ಯೊಳ್ ಒಪ್ಪೆ, ನೋಟ ಬೇಟದ ಕೊನರ್ ತಲೆದೋರ್ಪವೊಲಾಗೆ, ಬಾಯೊಳ್ ಇರ್ದ ಆ ಎಲೆ ಕಣ್ಗೆವಂದು ಎಸೆಯೆ, ಕಯ್ ಎಲೆ ಕಯ್ಯೊಳೆ ಬಾಯ ತಂಬುಲಮ್

ಬಾಯೊಳೆ ತೋಟೆ, ಆ ಸಮರೈಕಮೇರುವನ್ ಮೆಯ್ಮಱೆದು ನೋಡಿದಳ್. ಮತ್ತೊರ್ವಳ್ ಕರ್ವಿನ ಬಿಲ್ಲ ತಿರುವಿನ್ ಬರ್ದುಂಕಿ ಬರ್ಪ ಅಲರಂಬು ಬರ್ಪಂತೆ ಬಂದು...

**ಒಬ್ಬಳು:** ರೂಪಿನೊಳ್ ಸ್ಮರನನ್ ವಿಭವದೊಳ್ ಇಂದ್ರನನ್ ಆವ ಗಂಡರುಮನ್ ಪೋ ಆನ್ ಮೆಚ್ಚೆನ್. ಕಚ್ಚೆಯೊಳಿಟ್ಟು ಕಟ್ಟುವೆನ್.

(ಎನುತ್ತಿರ್ಪಾಕೆ, ಗಂಧೇಭ ಕಂಧರಬಂಧ ಪ್ರವಿಭಾಸಿಯಪ್ಪ ಅರಿಗನನ್ ಕಾಣುತ್ತೆ ಕಣ್ ಸೋಲ್ತು ಕಾಮರಸಮ್ ಭೋಂಕೆನೆ ಸೂಸೆ, ತಾಳ್ದಲ್ ಅರಿದು ಎಂದು ಇರ್ಕಚ್ಚೆಯನ್ ಕಟ್ಟಿದಳ್. ಅಂತು ನೋಡಿದ ಪೆಂಡಿರೆಲ್ಲಮ್ ಕಾಮದೇವನೆಂಬ ಬೇಂಟೆಕಾಱಂಗೆ ಒಡ್ಡಿದ ಪುಲ್ಲೆಗಳಂತೆ ಅರಲಂಬಿನ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ, ಪೊಟಿಲ ಒಳಗಣಿನ್ ಬಂದು ದಿವಿಜೇಂದ್ರ ವಿಳಾಸ ಉಪಹಾಸಿತಮಪ್ಪ ನಿಜಮಂದಿರಮನ್ ಪುಗೆ-ಲತೆಗಳ್ ಜಂಗಮರೂಪದಿನ್ ನೆರೆದುವೋ... ದಿವ್ಯ ಅಪ್ಸರೋವೃಂದಮ್ ಇಂದ್ರನ ಶಾಪದಿಂದೆ ಈ ಕ್ಷಿತಿಗೆ ಏನ್ ಇಳಿದುವೋ... ಪೇಳ್ ಎಂಬ ಶಂಕಾಂತರಮ್ ಮತಿಗಮ್ ಪುಟ್ಟುವಿನಮ್, ಕೃಷ್ಣನಾ ಷೋಡಶಸಹಸ್ರ ಅಂತಃಪುರಮ್ ಇಂದ್ರತನೂಜಂಗೆ ಇದಿರ್ವಂದು ಪರಕೆಗಳ್ ಕರಮ್ ತಳ್ಪೊಯ್ಯೆ ಸೇಸಿಕ್ಕಿತು.



# ೨೫. ಸುಭದ್ರೆ ಮತ್ತು ಅರ್ಜುನರ ಕಣ್ ಮಿಲನ

(೩೯ ನೆಯ ಗದ್ಯದಿಂದ ೪೩ ನೆಯ ಪದ್ಯ)

**ಪಾತ್ರಗಳು**

**ಸುಭದ್ರೆ:** ದ್ವಾರಾವತಿ ಪಟ್ಟಣದ ಒಡೆಯರಾದ ಬಲರಾಮ ಮತ್ತು ಕೃಷ್ಣನ ತಂಗಿ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಮೇಳದವರು:** ಸುಭದ್ರೆಯ ಸಖಿಯರು.

# ಸುಭದ್ರೆ ಮತ್ತು ಅರ್ಜುನರ ಕಣ್ ಮಿಲನ

ಆಗಳ್ ನಾರಾಯಣನ ತಂಗೆ ಸುಭದ್ರೆಯೆಂಬ ಕನ್ನೆ ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಱಮಡುವ ವಿದ್ಯಾಧರಿಯಂತೆ ತನ್ನ ಚೆಂಬೊನ್ನ ಕನ್ನೆಮಾಡದ ಮೇಗಣ ನೆಲೆಯ ಚೌಪಳಿಗೆಯ ಬಾಗಿಲೊಳ್ ನಿಂದು, ಬಳಸಿದ ಗುಜ್ಜುಗಳ್, ನೆರೆದ ಮೇಳದ ಕನ್ನೆಯರ್, ಎತ್ತಮಿಕ್ಕೆ ಸಂಚಳಿಸುವ ಚಾಮರಮ್, ಕನಕ ಪದ್ಮದ ಸೀಗುರಿ ತೊಟ್ಟ ಮಾಣಿಕಂಗಳ ಬೆಳಗು ಇಟ್ಟಳಮ್ ತನಗೆ ಒಡಂಬಡೆ, ದೇಸೆ ವಿಳಾಸಮನ್ ಪುದುಂಗೊಳಿಸೆ, ಕನ್ನೆ ನಡೆನೋಡಿ ಮರಲ್ದು...

**ಸುಭದ್ರೆ:** ಗುಣಾರ್ಣವನ್ ಎಂಬನ್ ಈತನೇ...

(ಎಂದು ತನ್ನ ಮೇಳದಾಕೆಗಳನ್ ಬೆಸಗೊಂಡಡೆ, ಆಕೆಗಳ್ ಆಕೆಯ ಪತ್ತಿದ ಕಣ್ಣುಮನ್, ಉಳ್ಗಿದ ಮನಮುಮನ್, ಜೋಲ್ದ ನಾಣುಮನ್, ನೀಳ್ದ ಸರಮುಮನ್ ಅಱಿದು, ಸಹಜ ಮನೋಜನ ಕುಲದ ಚಲದ ಚಾಗದ ಬೀರದ ಭಾಗ್ಯದ ಸೌಭಾಗ್ಯದ ಅಗುಂತಿಗಳನ್ ಅಂತುಮ್ ಅಳವಲ್ಲದೆ ಪೊಗಳೆ,

ಒದವಿದ ತನ್ನ ಜವ್ವನದ ರೂಪಿನ ಮೆಯ್ಯೊಳೆ, ತಪ್ಪುದಪ್ಪು ನೋಟದೊಳೆ, ಪೊಡರ್ಪು ತಪ್ಪು ಬಗೆ ತಪ್ಪು ಮನೋಜನ ಪೂವಿನಂಬು ತೀವಿದ ದೊಣೆ ತೀವಿ ತನ್ನನ್ ಇಸೆ, ಆ ಸತಿ ತಪ್ಪದೆ ಗುಣಾರ್ಣವನನ್ ತಪ್ಪುನೋಟದೊಳ್ ಅಪ್ಪ ನೋಡಿದುದಱಿಮ್ ಜಾಣನೆ ತಪ್ಪದೆ ತಪ್ಪುದು.

ಅಂತು ತಳತಳ ತೊಳಗುವ ದುಕೂಲದ ಸಕಳವಟ್ಟೆಯೊಳೆ ನಿಮಿರ್ಚಿದಂತಾನುಮ್, ಅರಲ್ದ ತಾವರೆ ಎಸಳ್ಗಳೊಳ್ ಪುದಿದು ಪುದುಂಗೊಳಿಸಿದಂತಾನುಮ್, ಅನಂಗಾಮೃತವರ್ಷಮನ್ ಒದವಿಸಿದಂತಾನುಮ್, ಎರ್ದೆಯೊಳ್ ಎಡೆವಱಿಯದ

ಪೊಳಪಿನೊಳ್ ತಳ್ಪೊಯ್ದು, ಕಡೆಗಣ್ಣ ಬೆಳ್ಪುಗಳ್ ಸೊಗಯಿಸುವ ಕುವಳಯದಳನಯನೆಯ ನೋಟಮ್ ತನ್ನ ಮನದೊಳ್ ಅಳ್ಳಾಟಮನ್ ಪಡೆಯೆ...)

**ಅರ್ಜುನ:** (ತನ್ನಲ್ಲಿಯೇ)

ಈಕೆಗೆ ನನೆಯಂಬು ಅಂಬನೆ ಕರ್ಚ್ಚಿ ಪಾಱಿದಪುದೋ... ಶೃಂಗಾರ ವಾರಾಸಿ ಭೋಂಕೆನೆ ಬೆಳ್ಳಂಗೆಡೆದತ್ತೊ... ಕಾಮನ ಎಱಿ ಮೆಯ್ವೆರ್ಚಿತ್ತೋ...

(ಎಂಬಿನೆಗಮ್ ಸೋಲಮನ್ ಉಂಟುಮಾಡೆ, ಆಕರ್ಣಾಂತ ವಿಶ್ರಾಂತಲೋಚನನ್ ಹರಿಗನ್ ಆಲೋಚನ ಗೋಚರಮ್ ಬರೆಗಮ್ ಒಲ್ದು ಆ ಕನ್ನೆಯನ್ ನೋಡಿದನ್.

ಅಂತು ಸುರತ ಮಕರಧ್ವಜನ ಕಡೆಗಣ್ಣ ನೋಟಮ್, ಕಾಮನ ಕಿಸುಗಣ್ಚಿದ ನೋಟದಂತೆ ಒರ್ಮೊದಲೆ ತನ್ನ ಮನದೊಳ್ ಅಳ್ಳಾಟಮನ್ ಪಡೆಯೆ, ಸೋಲದೊಳ್ ಎಯ್ದೆ ಪೀರ್ವ ತೆಱದಿಂದೆ ಎಮೆಯಿಕ್ಕದೆ ನೋಳ್ಪ ಕಣ್ಗೆ ಪೆಱತೊಂದು ಪೀಲಿವೊಲಾಗೆ ಬಂದು ಮನಂಬುಗೆ, ಕಾವನಂಬು ಚಿತ್ತದೊಳ್ ಪತ್ತಿ ಕೀಲಿಸೆ, ಅವಱ ಬಿಣ್ಪಿನೊಳ್ ಒಯ್ಯನೆ ಜೋಲ್ದವೋಲೆ ಬಾಲೆ ಲೀಲೆಯಿಮ್ ತಾಂಬೂಲ ಕರಂಕವಾಹಿನಿಯ ಮೇಲೆ ನೆಱಿಲ್ದಿರೆ....)



# ೨೬. ಸುಭದ್ರೆಯ ವಿರಹ ವೇದನೆ

(೫೪ ನೆಯ ಪದ್ಯದಿಂದ ೬೯ ನೆಯ ಗದ್ಯ)

**ಪಾತ್ರಗಳು**

**ಸುಭದ್ರೆ:** ದ್ವಾರಾವತಿ ಪಟ್ಟಣದ ಒಡೆಯರಾದ ಬಲರಾಮ ಮತ್ತು ಕೃಷ್ಣನ ತಂಗಿ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಚೂತಲತಿಕೆ:** ಸುಭದ್ರೆಯ ದಾದಿಯ ಮಗಳು. ಸುಭದ್ರೆಯ ಸಖಿ.

## ಸುಭದ್ರೆಯ ವಿರಹ ವೇದನೆ

ಅತ್ತ ಸುಭದ್ರೆಯುಮ್ ಒಡಲ್ ಉರಿಯುತ್ತಿರೆ ಮರವಟ್ಟು, ವಿಜಯನ್ ಇರ್ದತ್ತಲೆ ನೋಡುತ್ತಿರೆ, ಆಕೆಯ ರೂಪನ್ ಕೆಳದಿಯರ ತಂಡಮ್ ಸುಸಾಳಭಂಜಿಕೆ ಗೆತ್ತುದು....

**ಸುಭದ್ರೆ:** (ತನ್ನಲ್ಲಿಯೇ)

ನಾಣ್ ಕನ್ನೆತನಮ್ ಗೆಯ್ಯಲ್ ಬಗೆಗುಮ್. ಮನಮುಮ್ ಮಿಗೆ ಇಳ್ದುವರಿಯಲ್ ಬಗೆಗುಮ್. ತನ್ನಳಿಪನ್ ಕನ್ನಡಿಕುಮ್.

(ಇಂತು ಕನ್ನೆ ತನ್ನಲೆ ತಾನ್ ತಳವೆಳಗಾದಳ್. ಹರಿಗನ ಪಡೆಮಾತನೆ ನುಡಿಯಿಸಿ ಕೇಳ್ಗುಮ್. ಮಾತು ತಪ್ಪೊಡಮ್ ಮತ್ತಮ್ ಅದನ್ ಮೊದಲಿಂದ ನುಡಿಯಿಸುಗುಮ್. ಆ ನುಡಿ ಪಱಿಪಡೆ ಕೆಳದಿಯರನ್ ಮುಳಿದು ನೋಡುಗುಮ್. ಅಱಿಮರುಳ್ ಅಂತುಟೆ ಸೋರ್ಕಿನ ತೆಱನಂತುಟೆ ಮನಮ್ ಒಱಲ್ವುದು. ಎರ್ದೆ ಉರಿವುದು. ಮೆಯ್ ಎಱಗುವುದು ಪದೆವುದು...)

**ಸುಭದ್ರೆ:** (ತನ್ನಲ್ಲಿಯೇ)

ಇದನ್ ಆನ್ ಇದೇಕೆಂದು ಅಱಿಯೆನ್.

(ಎಂದು ಕನ್ನೆ ತಳವೆಳಗಾದಳ್, ಆನೆಯನ್ ಏಱಿ ಸೌಷ್ಠವದೆ ಬರ್ಪ ಅರಿಕೇಸರಿಯ ಒಂದು ಗಾಡಿಯ ಉದ್ದಾನಿ ತಗುಳ್ದು, ಕಣ್ಣೊಳೆ ತೊಳಲ್ದು, ಎರ್ದೆಯೊಳ್ ತಡಮಾಡೆ ಬೇಟದ ಉದ್ದಾನಿಯನ್ ಆನೆ)

**ಸುಭದ್ರೆ:** (ತನ್ನಲ್ಲಿಯೇ)

ಮನ್ಮಥಮಹೀಭುಜನ್ ಓವದೆ ತೋಱಿಕೊಟ್ಟುದೊಂದು ಆನೆಯೆ ತನ್ನನ್ ಆನೆಗೊಲೆ ಕೊಂದಪುದು.

(ಎಂದು ಲತಾಂಗಿ ಬೆರ್ಚಿದಳ್.)

**ಸುಭದ್ರೆ:** (ತನ್ನಲ್ಲಿಯೇ)

ಮನಮ್ ಆರಾಧಿತ ಹೋಮಭೂಮಿ; ಕಾಮಾತುರರ್ ಪಶುಗಳ್; ಬಂದ ಮಾವು ಅನಿತುಮ್ ಸ್ಥಾಪಿತ ಯೂಪಕೋಟಿ; ಬಳವತ್ ಕಾಮಾಗ್ನಿ ಹೋಮಾಗ್ನಿ; ಚಂದನ ಕರ್ಪೂರ ಮೃಣಾಳ ನಾಳಮೆ ಪೊದಳ್ದ ಇಧ್ಮಂಗಳ್. ಇಂತಾಗೆ ತಾನ್ ಇನಿತುಮ್ ಕಾಮನ ಬೇಳ್ವೆ.

(ಎಂದು ತನ್ವಂಗಿ ಬೆಳ್ದಿಂಗಳೊಳ್ ಸುಗಿದಳ್. ಅಂತು ಕಾಮದೇವನೆಂಬ ಮಂತ್ರವಾದಿಯ ದಿವ್ಯಮಂತ್ರದಿನ್ ಸ್ತೋಭಂಗೊಂಡ ದಿವ್ಯಗ್ರಹದಂತೆ ಕಾಮಗ್ರಹಗೃಹೀತೆಯಾಗಿರೆ ಮನೋವೈಕಲ್ಯ, ರೋಮಾಂಚಕ, ಸ್ತಂಭಕ, ಕಂಪ, ಸ್ವೇದ, ವೈವರ್ಣ್ಯ, ಸಂತಾಪ ಅನಾಹಾರ, ವ್ಯಾಮೋಹ, ಗದ್ಗದ, ಅಶ್ರುಮೋಕ್ಷ ಮೂರ್ಛಾದಿ ನಾನಾ ವಿಕಾರಂಗಳ್ ಒಡನೊಡನೆ ತೋಱುವುದುಮ್, ಆಕೆಯ ದಾದಿಯ ಮಗಳ್ ಚೂತಲತಿಕೆ ಎಂಬಳ್ ಕಂಡು..)

**ಚೂತಲತಿಕೆ:** (ತನ್ನಲ್ಲಿಯೇ)

ಪದೆವೆರ್ದೆ ಬತ್ತೆ, ಕೆತ್ತುವ ಅಧರಮ್, ದೆಸೆಗೆಟ್ಟ ಅಲರ್ಗಣ್ಣ ನೋಟಮ್, ಉಣ್ಮಿದ ಬೆಮರ್, ಓಳಿವಟ್ಟ ನಿಡುಸುಯ್, ತೊದಳಿಂಗೆ ಎಡೆಗೊಂಡ ಮಾತು, ಕುಂದಿದ ಲತಿಕಾಂಗಮ್, ಒಂದಿದ ವಿಕಾರಮ್ ಅದು ಈಕೆಯೊಳ್ ಈಗಳ್ ಆದುದು. ಇಂತಿದು ಕುಸುಮಾಸ್ತ್ರನೆಂಬ ಅದಟನ್ ಇಕ್ಕಿದ ಸೊರ್ಕಿನ ಗೊಡ್ಡಮಾಗದೇ...

(ಎಂದು ತನ್ನೊಳೆ ಬಗೆದು ಮತ್ತಮ್ ಇಂತು ಎಂದಳ್.)

**ಚೂತಲತಿಕೆ:** (ತನ್ನಲ್ಲಿಯೇ)

ಕಳಿಯಲರಾದ ಸಂಪಗೆಯ ಬಣ್ಣದ ವೋಲೆ ಬೆಳರ್ತ ಬಣ್ಣದೊಳ್ ಕಣ್ಗಳ ಮೊದಲ್ಗಳೊಳ್ ಕೆಂಪು ಗಳಿಯಿಸೆ, ಒಯ್ಯನೆ ತೋರೆ ಮೈಯೊಳೆ ಬಾಡಿ, ಪಾಡಳಿದು ಬಳಲ್ದು ಜೋಲ್ದ ಇರವು, ಮೆಯ್

ಪಿಡಿದು ಎನ್ನ ಕಣ್ಗೊಳೊಳ್ ಸುಳಿದುವು. ತಾಮೆ ಕನ್ನೆಯ ಕನ್ನೆವೇಟಮನ್ ಕನ್ನಡಿಸಿದಪ್ಪುವು. ಅದಱಿನ್ ಈಕೆಯ ಬಗೆಯನ್ ಅಱಿಯಲ್ವೇಳ್ಕುಮ್.

(ಎಂದು ಮೆಲ್ಲಮೆಲ್ಲನೆ ಕೆಲಕ್ಕೆ ವಂದು, ಕುಂಚದ ಅಡಪದ ಡವಕೆಯ ಪರಿಚಾರಿಕೆಯರೆಲ್ಲರುಮನ್ ಕಣ್ಗೆತ್ತಿ ಕಳೆದು, ಏಕಾಂತದೊಳ್ ಕನ್ನೆಯನ್ ಇಂತು ಎಂದಳ್.)

**ಚೂತಲತಿಕೆ:** ಈ ಕದಂಪುಗಳ್ ಮೃಗಮದ ಪತ್ರರೇಖೆಗಳನ್ ಏಕೆಗೆ ತಾಳ್ದಿರದಾದುವು; ಹಾರಮಣಿಮಂಜರಿಯಿಲ್ಲದೆ ಉರಮ್ ಏಕೆ ಬಿನ್ನಗಿರ್ದುದು; ಹೇಮರಶನಾ ಧ್ವನಿಯಿಲ್ಲದೆ ಈ ಜಗನಮ್ ಇದೇಕೆ ಮೂಗುವಟ್ಟುದು; ಈ ಬಗೆಯೊಳ್ ಪಾದಪಂಕಜಮ್ ಅಲಕ್ತಕ ದ್ರವದೊಳ್ ಒಂದದೆ ನಿಂದುವು; ಸೋರ್ವ ಕದುಷ್ಣವಾರಿಚಯದಿನ್ ನಗೆಗಣ್; ಸುಯ್ಯ ಬೆಂಕೆಗಳಿನ್ ಬಿಂಬಾಧರಮ್ ನಾಡೆ ಬೆಡಂಗುಗೆಟ್ಟ ಇರವು ಇದು. ಇಂತು ಮಜ್ಜನಮ್ ಪುಗದೆ, ಆರೋಗಿಸಲ್ ಒಲ್ಲದ ಇರವು ಏನ್ ಕಾರಣಮ್; ನಾಣಳ್ಕು ಇದೇನ್. ಸರೋಜಾನನೇ, ಕಾಮನ ಅಂಬುಗಳ್ ಅತ್ತಿತ್ತ ಎಡೆಯಾಡಿ ನಿನ್ನನ್ ಸೋಂಕವೆ ವಲಮ್.

(ಎಂದು ಮುನ್ನಮೆ ಮುಟ್ಟಿ ನುಡಿಯದೆ ಪೊಱಪೊಱಗನೆ ಬಳಸಿ ಕನ್ನೆಯ ಸಂಕೆಯನ್ ಕಿಡಿಸಿ ಮತ್ತಮ್ ಇಂತು ಎಂದಳ್.)

**ಚೂತಲತಿಕೆ:** ವನಭೃತ್ಕುಂತಳೆಯಾ ಶಿರೀಷ ಕುಸುಮಾಭಾಂಗಕ್ಕೆ ಕಂದಮ್; ಕನತ್ಕನಕಾಂಭೋಜ ನಿಭಾನನಕ್ಕೆ ಪಿರಿದುಮ್ ದೀನತ್ವಮನ್; ನೀಳ್ದ ಮಾವಿನ ಪೋಳಂದದ ಕಣ್ಗೆ ಬಾಷ್ಪಜಲಮನ್; ಚಿತ್ತಕ್ಕೆ ಸಂತಾಪಮನ್ ಆವನ್ ನಿನಗಮ್ ಮಾಡಿದನ್, ಆತನೆ ಗಂಧೇಭ ವಿದ್ಯಾಧರನ್ ವಲಮ್.

(ಎಂದು ತನ್ನ ಮನಮನ್ ಅಱಿದು ಮುಟ್ಟಿ ನುಡಿದ ಕೆಳದಿಯ ನುಡಿಗೆ ಪೆಱತೇನುಮನ್ ಎನಲ್ ಅಱಿಯದೆ, ನಾಣ್ಚಿ ತಲೆಯನ್ ಬಾಗಿ ನೆಲನನ್ ಬರೆಯುತ್ತುಮ್, ನೀರೊಳ್ ಮುಳಿಗಿದರಂತೆ ಉಮ್ಮನೆ ಬೆಮರುತ್ತ ಉಮ್ಮಳಿಕೆ ವಂದು ಬೆಚ್ಚನೆ ಸುಯ್ದೊಡೆ..)

**ಚೂತಲತಕೆ:** ಉಸಿರದಿರೆ ಮನದೊಳ್ ಮಱುಕಮ್ ಎರ್ದೆಯನ್ ಪಸರಿಸುಗುಮ್. ಅದಱಿನ್ ಎನಗೆ ಇಂತುಟೆ ಉಸಿರ್. ಉಸಿರ್ದೊಡೆ ಬಗೆ ತೀರ್ಗುಮ್. ಬಿಸಿದುಮ್ ಬೆಟ್ಟಿತ್ತುಮ್ ಉಸಿರದೆ ಏನ್ ತೀರ್ದಪುದೇ ಪೇಳ್...

**ಸುಭದ್ರೆ:** ಆನ್ ನಿನಗೆ ಎಡೆವೇಳದೆ ಪೇಳ್ ಆರ್ಗೆ ಪೇಳ್ವೆನ್. ಇಂದಿನ ಬಂದ ಆ ಕಾಳಾದ ವಾಳ್ತೆಗೊಂಡಡೆ ಮನಮುಮ್ ಎರ್ದೆಯುಮ್ ಪಾಳಾದುದು. ಏನನ್ ಪೇಳ್ವೆನ್, ಪಾಣ್ಬರಂಕುಸನ ಅಂಕುಸದಾ ಪೊಳಪುಮ್, ಅವನ ಕಣ್ಗಳ ಬೆಳ್ಪುಮ್ ಭೋಂಕನೆ ಮನಮನ್ ಕದಡಿ ಕಲಂಕಿದಪುದು. ಬಿಡದೆ ಮನಮನ್ ಆದಮ್ ಒನಲಿಸಿದಪುದು ಕೆಳದಿ. ಮನಸಿಜನ ಅಂಬು, ಅರಲ್ದ ಪೊಸ ಮಲ್ಲಿಗೆ, ತೆಂಕಣ ಗಾಳಿ ಎಂಬಿವು ಅನುಬಲದಿಂದಮ್ ಎನ್ನನ್ ಅಲೆದಪ್ಪುವು. ಅವು ಚಂದ್ರನ ಬಲದಿಂದಮ್ ಪೆಟ್ಟುವೆರ್ಚಿ ಎನ್ನನೆ ಅಲೆದಪ್ಪುವು.

ಅದರ್ಕೆ ಎನಗೆ ಈಗಳ್ ಚಂದ್ರನ ಬಲಮ್ ಒಳ್ಳಿತಾಗಿ ಸಲೆಯಿಲ್ಲದೊಡೆ ಆವುದುಮ್ ಒಳ್ಳಿಕೆಯ್ಯುಗ್ಗಮೇ.

(ಎಂದು ಮನದ ಮಱುಕಮುಮನ್, ಎರ್ದೆಯ ಕುದಿಪಮುಮನ್, ಬಗೆಯ ಕುಱಿಪಮುಮನ್, ಮೆಯ್ಯ ಬಡತನಮುಮನ್ ಅಱಿಯೆ ತೋಱಿ ನುಡಿದೊಡೆ....)

**ಚೂತಲತಿಕೆ:** (ತನ್ನಲ್ಲಿಯೇ ಈ ರೀತಿ ಅಂದುಕೊಳ್ಳುತ್ತಾಳೆ.)

ರಾಜಹಂಸಿ ಮಾನಸ ಸರೋವರಮನಲ್ಲದೆ ಪೆಱತನ್ ಏಕೆ ಬಯಸುಗುಮ್. ಕಳಹಂಸಗಮನೆ ಆ ಸುರತಮಕರಧ್ವಜನನಲ್ಲದೆ ಪೆಱನನ್ ಏಕೆ ಬಯಸುಗುಮ್.

(ಎಂದು ಮನದೊಳೆ ಮಂತಣಮಿರ್ದು, ಬಗೆಯೊಳೆ ಗುಡಿಗಟ್ಟಿ, ಸಂತಸಂಬಟ್ಟು ಇಂತು ಎಂದಳ್.)

**ಚೂತಲತಿಕೆ:** ನನೆ ಅಂಬನ್ ತೆಗೆದು ಎಚ್ಚನ್ ಅಂಗಜನ ತಪ್ಪು ಏನಾನುಮನ್ ತೋಱಿ ಕಾಣ್ಬನಿತನ್ ಮಾಡದೆ, ಪದ್ಮಜನ್ ಮದನನನ್ ಬೈದಂತುಟೇ ಈ ಬಿನದಮ್ ಬೇಡ. ಕಲ್ಪಿತಮ್ ತಪ್ಪಲೆ. ನಿನ್ನ ಈ ಮನಮ್ ಆತಂಗೆ ಎಂದು ಪರಿಯದು. ನಿನಗೆ ಆತನ್ ದೊರೆ. ಆದಿಪುರುಷಂಗೆ ನೆಟ್ಟನೆ ನೀನ್ ನಾಣ್ಚುವಯ್ ಏಕೆ ಅಕ್ಕ. ನೀನ್ ಇದರ್ಕೆ ಏನುಮನ್ ಬಗೆಯಲ್ವೇಡ. ನಿನ್ನ ಬಗೆಯನ್ ಬಗೆದಂತೆ ತೀರ್ಚುವೆನ್.

(ಎಂದು ಅನೇಕ ಪ್ರಕಾರ ವಚನ ರಚನೆಗಳಿಂದ ಆಕೆಯ ಮನಮನ್ ಆರೆ ನುಡಿಯುತ್ತ ಇರ್ಪಿನಮ್...)



# ೨೭. ಸುಭದ್ರೆ ಮತ್ತು ಅರ್ಜುನರ ಮಿಲನ

(೧೩ ನೆಯ ಗದ್ಯದಿಂದ ೨೨ನೆಯ ಗದ್ಯ)

## ಪಾತ್ರಗಳು

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಸುಭದ್ರೆ:** ದ್ವಾರಾವತಿ ಪಟ್ಟಣದ ಒಡೆಯರಾದ ಬಲರಾಮ ಮತ್ತು ಕೃಷ್ಣನ ತಂಗಿ.

**ಚೂತಲತಿಕೆ:** ಸುಭದ್ರೆಯ ಆಪ್ತ ಸಖಿ.

**ಬಲದೇವ:** ದ್ವಾರಾವತಿ ಪಟ್ಟಣದ ಒಡೆಯ.

**ಕೃಷ್ಣ:** ಬಲರಾಮನ ತಮ್ಮ.

## ಸುಭದ್ರೆ ಮತ್ತು ಅರ್ಜುನರ ಮಿಲನ

ನಂದನವನ ಉಪಕಂಠಗಳೊಳ್ ಅನಂಗಶರವಶನಾಗಿ ತೊಳಲ್ದು ನೋಡುತ್ತುಮ್, ತನ್ನ ಮನದೊಳ್ ಇಂತೆಂದು ಬಗೆಗುಮ್....

**ಅರ್ಜುನ:** ಉರಿವ ಎರ್ದೆ ಆಱೆ, ಚಿಂತಿಪ ಮನಮ್ ಗುಡಿಗಟ್ಟೆ, ಮರಲ್ದು ನೋಡುವ ಅಚ್ಚರಿಯೊಳೆ ಬೆಚ್ಚ ಕಣ್ಮಲರ್ಗೆ ಸಂತಸದ ಆಗರಮಾಗೆ, ಬೇಟದೊಳ್ ಬಿರಿಯುವ ಒಡಲ್ ಒಯ್ಯನೆ ಅಂಕುರಿಸೆ, ಸೈಪಿನೊಳ್ ಇಂತು ಎನಗೆ ಈ ವನಾಂತರದೊಳೆ ಮದೀಯ ಮನೋರಥ ಜನ್ಮಭೂಮಿಯನ್ ಕಾಣಲಕ್ಕುಮೊ...

(ಎಂದು ಬಗೆಯುತ್ತುಮ್, ಆಕೆ ಇರ್ದ ಮಾಧವೀ ಮಂಟಪಕ್ಕೆ ಮೊಗಸಿ, ಪಲರ ಪಲವುಮ್ ತೆಱದ ಬೇಟದ ಪಡೆಮಾತುಗಳನ್ ಕೇಳ್ದು, ಅಲ್ಲಿ ಆರಾನುಮ್ ಎಮ್ಮಂದಿಗರ್ ಇರ್ದರಕ್ಕುಮ್ ಎನುತ್ತುಮ್ ಬರ್ಪ ಗಂಧೇಭವಿದ್ಯಾಧರನನ್ ಭೋಂಕನೆ ಸುಭದ್ರೆ ಕಂಡು...

ಪಡಿ ತೆಱೆವ ಅಂದದಿನ್ ಎರ್ದೆಯುಮ್ ತೆಱೆದತ್ತು; ಪೊದಳ್ದ ಸಂಕೆಯಿನ್ ನಡುಕಮುಮ್ ಆಗಳ್ ಉಬ್ಬದಿಗಮ್ ಆದುದು; ಸಾಧ್ವಸದಿನ್ ಬೆಮರ್ ಬೆಮರ್ವಡೆಗಳಿನ್ ಉಣ್ಮಿ ಪೊಣ್ಮಿದುದು; ಕಣ್ ನಡೆ ನೋಡದೆ ತಪ್ಪು ನೋಡಿ ನಾಣೆಡೆಯೊಳಮ್ ಆ ಸತಿಗೆ ಪಡೆಮೆಚ್ಚೆಗಂಡನನ್ ನೋಡಲೊಡಮ್ ಆದುದು; ಆಗಳ್ ಸುರತಮಕರಧ್ವಜನುಮ್ ಅನಂಗಾಮೃತ ಪಯೋಧಿಯೊಳ್ ಮೂಡಿ ಮುಳ್ಕಾಡಿದರಂತೆ ಕಿಱಿದು ಬೇಗಮನಿರ್ದು, ತನ್ನಿಮ್ ತಾನೆ ಚೇತರಿಸಿ ಸುಭದ್ರೆಯ ರೂಪನ್ ಆಪಾದಮಸ್ತಕಂಬರಮ್ ಎಯ್ದೆ ನೋಡಿ, ತನ್ನೊಳಾದ ಬೇಟದೊಳ್ ಬಡವಟ್ಟುಮ್

ಏಳ್ಗೆವಾಡಿವದ ಸಸಿಯಂತೆ ಸೊಗಯಿಸುವ ಅಸಿಯಳನ್ ಕಂಡು..)

**ಅರ್ಜುನ:** (ತನ್ನಲ್ಲಿಯೇ ಈ ರೀತಿ ಆಲೋಚಿಸಲು ತೊಡಗುತ್ತಾನೆ.)

ಸರಸ ಮೃಣಾಳನಾಳವಳಯಂಗಳೊಳ್ ಉಜ್ವಳ ವೃತ್ತ ಮೌಕ್ತಿಕಾಭರಣ ಗಣಂಗಳೊಳ್ ಶಶಿಕರಂಗಳೊಳ್ ಆಱದೆ, ಬೇಟದೊಳ್ ಕನಲ್ದು ಉರಿವ ಎರ್ದೆ ನೋಡ ನೋಡಲೊಡನೆ ಆಱಿದುದು. ಎನ್ನ ನಲ್ಲಳನ್ ಅಜನ್ ಏನ್ ಅಮರ್ದಿಂದೆ ತೊಯ್ದು, ಕಪ್ಪುರವಳುಕಿಂದೆ ಕಡೆದು ಕಂಡರಿಪನ್ ವಲಮ್. ವೃತ್ತಕುಚಂಗಳಿಂದ ಉದಿರ್ದ ಚಂದನದೊಳ್ ತಳಿರ್ವಾಸು ಬೆಳ್ಪನಾಳ್ದತ್ತು. ದುಕೂಲದ ಒಂದು ಮಡಿ ಮಾಸಿದ ಮಾಳ್ಕೆವೊಲಾಯ್ತು. ಮೆಯ್ಯನಿಕ್ಕುತಿರೆ ಕೆಂದಳಿರ್ಗಳ್ ಅಚ್ಚುಗಳ್ ಅಚ್ಚೆಱಿದಂತೆ ಪತ್ತಿ, ಕಾಮನಚ್ಚೊತ್ತಿದ ಬೇಟದಚ್ಚುಗಳ ಮಾಳ್ಕೆಯೊಳ್ ಸುಭದ್ರೆಯಾ ಮೆಯ್ ಇರ್ದುದು. ಅದಱಿನ್ ಈಕೆಯುಮ್ ಎನಗೆ ಎರಡಱಿಯದ ನಲ್ಲ ಮನಂದೋಱುವುದು ಸಲ್ಗೆದೋಱುವುದುಮ್ ಆವುದು ದೋಸಮ್.

(ಎಂದು ಆಕೆ ಕುಳ್ಳಿರ್ದ ತಳಿರ ಸಜ್ಜೆಯೊಡನೆ ಕುಳ್ಳಿರ್ಪುದುಮ್, ನಾಣ್ಚಿ ಪೋಗಲೆಂದು ಎಳ್ದ ಕನ್ನೆಯನ್ ಚೂತಲತಿಕೆಯೆಂಬ ಕೆಳದಿ ಜಡಿದು ಕುಳ್ಳಿರಿಸಿ, ಗಂಧೇಭವಿದ್ಯಾಧರನನ್ ಇಂತು ಎಂದಳ್.)

**ಚೂತಲತಿಕೆ:** ಮದನನ ಕಾಯ್ಪು ಮಾಣ್ಗೆ. ಸರಸೀರುಹಜನ್ಮನ ಮೆಚ್ಚು ತೀರ್ಗೆ. ಕೋಳ್ಗುದಿ ಮನದಿಂದಮ್ ಇಂದು ಪೊಱಮಾಱುಗೆ. ಚಂದ್ರಕರಂಗಳ್ ಇಂದು ಎರ್ದೆಗೆ ತಣ್ಣಿದುವಕ್ಕೆ. ಕೆಂದಳಿರ ಸೆಜ್ಜೆಯ ಜಿಂಜಿಣಿ ಪೋಕೆ. ನಿನ್ನ ಕೂಟದೊಳ್ ಮತ್ಸಖಿಗೆ ಇನಿದಕ್ಕೆ. ಗುಣಾರ್ಣವಾ, ಬೇಱೆ ಪಳಾಳದೊಳೇನ್ ಬೆಳಗುವ ಸಾಂದ್ರ ಚಂದ್ರಕಿರಣಾಳಿಗಳ ಓಳಿಗಳಿಂದಮ್, ಎತ್ತಮ್ ಉಜ್ವಳಿಸುವ ಇರುಳ್ಗಳನ್ ಕಳೆದುಮ್, ಎಯ್ದೆ ತಳಿರ್ತೆಳಮಾವುಮನ್, ಮನಂಗೊಳೆ ನಡೆ ನೋಡಿಯುಮ್, ಇಂದೊಳದ ಇಂಚರಕೆ ಕಿವಿಯನ್ ಆಂತುಮ್, ಇಂತು ಕೋಮಳೆಯ ಅಸು ಮತ್ತಮ್ ಈ ಒಡಲೊಳ್ ಇರ್ದುದು ಭೂಪತೀ ಇದು ಎಮ್ಮಯ ಸೈಪು...

(ಎಂಬ ಅನ್ನೆಗಮ್ ಸುರತಮಕರಧ್ವಜನ ಸುಭದ್ರೆಯ ವಿರಹ ಪರಿತಾಪದೊಳಾದ ಪಡೆಮಾತನ್ ಕರ್ಣಪರಂಪರೆಯಿನ್ ಕೇಳ್ದು ಸಂತಸಂಬಟ್ಟು, ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದ ಆ ವನಾಂತರಾಳಕ್ಕೆ ಒರ್ವನೆ ಬಂದು, ಮಾಧವೀಮಂಟಪಮನ್ ಪೊಕ್ಕು, ಅವರಿರ್ವರ ನಾಣುಮನ್ ನಡುಕಮುಮನ್ ಪತ್ತುವಿಟ್ಟು ನುಡಿದು...)

**ಕೃಷ್ಣ:** ಬಲದೇವನ್ ಎನ್ನ ಅನುಜೆಯನ್ ದುರ್ಯೋಧನಂಗೆ ಕುಡಲಿರ್ಪನ್. ಆನ್ ಒಡಂಬಡೆನ್. ನಿನಗೆ ಈವ ಅಳ್ತಿ ಆಗಳುಮ್ ದಲ್. ಪದ್ಮಾಸನನ್ ತಾನೆ ನೇರ್ಪಡಿಸಲ್ ಕೂಡಿದನ್. ಇನ್ ಇರ್ಪುದು ನಯಮಲ್ತು. ಈ ಪೊಳ್ತೆ ಪೊಳ್ತಾಗೆ, ನೀನ್ ಕನ್ನೆಯನ್ ಒಡಗೊಂಡು ಉಯ್ವುದು. ವಿದ್ವಿಷ್ಟವಿದ್ರಾವಣಾ ತಡೆಯದಿರ್. ಅಂತು ಪೋಗೆವೋಗೆ ಬಲದೇವನ ಅನುಮತದೊಳ್ ಪೆಱಗನ್ ತಗುಳ್ವ ಯಾದವ ಬಲಮ್ ಉಂಟಪ್ಪೊಡೆ, ಅದನ್ ಅಂಬುಗಾಣಿಸಲ್ ನೀನೆ ಸಾಲ್ವೆ. ಉಳಿದುದನ್ ಮಾಣಿಸಲ್ ಆನೆ ಸಾಲ್ವೆನ್. ಇದುವೆ ಮುಹೂರ್ತಮಾಗಿ ನಡೆವುದು...

(ಎಂದು ಶೈಬ್ಯ ಬಳಾಹಕ ಮೇಘವರ್ಣ ಸುಗ್ರೀವಂಗಳೆಂಬ ನಾಲ್ಕು ಕುದುರೆಗಳೊಳ್ ಪೂಡಿದ ದಿವ್ಯರಥಮನ್ ಎಸಗಳ್ ದಾರುಕನೆಂಬ ಸಾರಥಿಯನ್ ಈವುದುಮ್, ಆ ರಥಮನ್ ಮನೋರಥನ್ ಬೆರಸೇಱಿ, ಚೂತಲತಿಕೆವೆರಸು ಸುಭದ್ರೆಯನ್ ಏಱಲ್ ಪೇಳ್ದು, ಉದಾತ್ತನಾರಾಯಣನ್ ನಾರಾಯಣನ ಪರಸಿದ ಪರಕೆಗಳುಮನ್ ಕೆಯ್ಕೊಂಡು ಬೀಳ್ಕೊಂಡು, ಇಂದ್ರಪ್ರಸ್ಥದ ಬಟ್ಟೆಯೊಳ್ ಸುಖ ಪ್ರಯಾಣಮ್ ಗೆಯ್ದನ್. ಅನ್ನೆಗಮ್ ಇತ್ತ ಬಲದೇವನ್ ಸುಭದ್ರೆಯನ್ ಸಾಮಂತ ಚೂಡಾಮಣಿ ಉಯ್ದನ್ ಎಂಬುದನ್ ಕೇಳ್ದು...)

**ಬಲರಾಮ:** ಎನ್ನನ್ ಉಱದೆ, ಕುಡಲಿರ್ದ ಕೂಸನ್ ಒಡಗೊಂಡು ಉಯ್ವಾತನನ್ ತಾಗಿ ತಳ್ತಿಱಿಯಲ್, ಕೋಡಗಗಟ್ಟುಗಟ್ಟಿ ತರಲ್ ಇನ್ನಾರ್ ಆರ್ಪರ್, ಅಂತಪ್ಪ ಪೊಚ್ಚಱ ಸಾಮಂತರೆ ಪೋಗಿಮ್.

(ಎಂದು ಪಲರನ್ ಪೇಳ್ದಾಗಳ್, ಎಯ್ತಂದರನ್ ಅರಿಗನ್ ಎಚ್ಚ ಉಗ್ರೇಷು ಧಾರಾಜಳಮ್ ತೊಱೆಗೊಳ್ವಂತಿರೆ ಅಂದು ಕೊಂಡುವು. ಆಗಳ್ ತನ್ನ ಪೇಳ್ದ ನಾಯಕರ ಸಾವನ್ ಕೇಳ್ದು, ಯಾದವಬಲ

ಜಳನಿಧಿವೆರಸು ವಿಳಯಕಾಲ ಜಳನಿಧಿಯಂತೆ ತೆರಳಲ್ ಬಗೆದ ಬಲದೇವನನ್ ವಾಸುದೇವನ್ ಇಂತು ಎಂದನ್.)

**ಕೃಷ್ಣ:** ಕುಲಮನ್ ಪೇಳ್ವೊಡೆ ಸೋಮವಂಶ ತಿಲಕನ್; ಬಲ್ಲಾಳ್ತನಮ್ ಪೇಳ್ವೊಡೆ ಉಜ್ವಲ ತೀವ್ರ ಅಸ್ತ್ರ ನಿಘಾತಪಾತಿತ ರಿಪುವ್ಯೂಹನ್; ಬಲಮ್ ಪೇಳೆ ದೋರ್ವಲದೊಳ್ ಕೇಳ್ ನಿನಗಮ್ ಬಲಸ್ಥನ್. ಕೂಸಿಂಗೆ ಒಡೆಯನ್ ಕೊಂಡುಯ್ವುದು ಏನ್ ಚಲಮ್, ಏನ್ ದೋಷಮ್. ಅದರ್ಕೆ ನೀನ್ ಮುಳಿವುದೇ ನೀನ್ ಪೇಳ್ವೊಡೆ ಆನ್ ಸಾಲೆನೇ.

(ಎಂದು ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚನ್ ತನ್ನ ಮೃದು ಮಧುರ ವಚನರಚನಾಜಲಂಗಳನ್ ತಳಿದು ನದಿಪಿದನ್. ಇತ್ತ ವಿಕ್ರಮಾರ್ಜುನನುಮ್ ಕತಿಪಯ ದಿನಂಗಳಿಂದೆ ಅನೇಕ ಸಹಕಾರ ಅಶೋಕ ಅನೋಕಹ ನಂದನವನಪ್ರಸ್ಥಮನ್ ಇಂದ್ರಪ್ರಸ್ಥಮನ್ ಎಯ್ದೆವಂದು, ಮುನ್ನಮೆ ತನ್ನ ಬರವನ್ ಅಱಿದು, ಪೊಳಲೊಳ್ ಅಷ್ಟಶೋಭೆಯನ್ ಮಾಡಿ, ತನಗೆ ಇದಿರ್ವಂದ ಕೊಂತಿಯ ಧರ್ಮಪುತ್ರ ಭೀಮಸೇನಾದಿಗಳ ಪಾದ ಪದ್ಮಂಗಳನ್ ತನ್ನ ಕರಕಮಲಂಗಳಿಂದೆ ಅರ್ಚಿಸಿ, ತದೀಯಾಶೀರ್ವಚನಗಳನ್ ಆಂತು, ತನಗೆ ಪೊಡಮಟ್ಟ ನಕುಲ ಸಹದೇವರನ್ ಪರಸಿ ಪುನಃ ಪುನರಾಲಿಂಗನಮ್ ಗೆಯ್ದು, ಮುಹುರ್ಮುಹುರ್ ಆಲೋಕನಮ್ ಗೆಯ್ಯುತ್ತುಮ್ ಬಂದು, ದಿವಿಜೇಂದ್ರ ವಿಳಾಸದಿನ್ ಪೊಳಲನ್ ಪುಗೆ...)



# ೨೮. ಖಾಂಡವ ವನ ದಹನ

(೬೮ ನೆಯ ಗದ್ಯದಿಂದ ೧೦೩ ನೆಯ ಪದ್ಯ)

## ಪಾತ್ರಗಳು

ಅಗ್ನಿದೇವ : ಒಬ್ಬ ದೇವತೆ.

ಅರ್ಜುನ : ಪಾಂಡುರಾಜ ಮತ್ತು ಕುಂತಿಯ ಮಗ.

ಕೃಷ್ಣ : ದ್ವಾರಾವತಿ ಪಟ್ಟಣದ ಒಡೆಯ.

ವನಪಾಲಕ : ಖಾಂಡವ ವನದ ಕಾವಲುಗಾರ.

ಮಯ : ಖಾಂಡವ ವನದಲ್ಲಿದ್ದ ವಿಶ್ವಕರ್ಮ.

ಅಶ್ವಸೇನ : ಖಾಂಡವ ವನದಲ್ಲಿದ್ದ ಹಾವು.

ಲಾವಗೆ : ಖಾಂಡವ ವನದಲ್ಲಿದ್ದ ಹಕ್ಕಿ.

ಇಂದ್ರ : ದೇವತೆಗಳ ಒಡೆಯ. ಖಾಂಡವ ವನದ ಒಡೆಯ.

ಬ್ರಹ್ಮ : ಒಬ್ಬ ದೇವತೆ.

# ಖಾಂಡವ ವನ ದಹನ

ಅಂತು ಆ ವನಾಂತರಾಳಮನ್ ತೊಳಲ್ದು ತೋಱುತ್ತಿರ್ಪನ್ನೆಗಮ್...

**ಅಗ್ನಿದೇವ:** (ತನ್ನಲ್ಲಿಯೇ)

ಅನೂನದಾನಿಯ ದಾನದುದ್ದಾನಿಯ ದಾನಮನ್ ಆನಲ್ ಆನಲ್ಲದೆ ಪೆಱರ್ ನೆರೆಯರ್.

(ಎಂಬಂತೆ ತೊಟ್ಟನೆ ಕಟ್ಟಿದಿರೊಳ್ ಉರಿವುರಿಯನೆ ತಲೆನವರ್ ಅನುಕರಿಸಿರೆ, ಸಂತಪ್ತ ಕನಕವರ್ಣಮುಮ್ ಉರಿಯ ಒಂದು ಉರುಳಿವೊಲಿರೆ ಜಠರಾನಳನ್ ಉರಿವಿನಮ್ ಅಂತು ಒರ್ವನ್ ಉರಿಯ ಬಣ್ಣದ ಪಾರ್ವನ್. ಅಂತು ವರ್ಪನಮ್ ಕಂಡು ಸಾಮಂತಚೂಡಾಮಣಿ ತನ್ನೊಳ್ ಇಂತೆಂದು ಬಗೆದನ್.)

**ಅರ್ಜುನ:** (ತನ್ನಲ್ಲಿಯೇ ಈ ರೀತಿ ಅಂದುಕೊಳ್ಳುತ್ತಾನೆ.)

ತಪ ನಿಯಮ ನಿಯತನ್ ಈ ಬರ್ಪ ಪಾರ್ವನ್ ತನಗೆ ಏನ್ ಅಳ್ತಿ ಅದನ್ ಬೇಡಿದೊಡೆ, ಇನ್ ಅಪಗತದುರಿತರ್ ಸಂಪೂರ್ಣ ಪುಣ್ಯರ್ ಆನಲ್ಲದಿಲ್ಲ... ಪೆಱರ್ ಒಳರೇ ಪೇಳ್.

(ಎಂಬನ್ನೆಗಮ್ ಸಾಮಂತ ಚೂಡಾಮಣಿಯನ್ ಎಯ್ದೆ ವಂದು, ನಾಲ್ಕು ವೇದಂಗಳೊಳ್ ನಾಲ್ಕುಮ್ ಋಚಂಗಳನ್ ಪೇಳ್ದು, ಸಿತ ದೂರ್ವಾಂಕುರ ವಿಮಿಶ್ರಂಗಳಪ್ಪ ಶೇಷಾಕ್ಷತೆಗಳನ್ ಕೊಟ್ಟು ಮುಂದೆ ನಿಂದನನ್...)

**ಅರ್ಜುನ:** ನಿಮಗೆ ಬಾಳ್ತೆಯಪ್ಪುದನ್ ಬೇಡಿಕೊಳ್ಳಿಮ್.

(ಎನೆ)

**ಅಗ್ನಿದೇವ:** ಮಣಿ ಕನಕಾದಿ ವಸ್ತುಗಳನ್ ಒಂದುಮನ್ ಒಲ್ಲೆನ್. ಅವು ಏವುವು ಎನಗೆ. ಆದಮ್ ಇನ್ನುಣಿಸು ಅಳ್ತಿ. ಪಸಿದು ಮೆಯ್ ಜೊಮ್ಮನೆ ಪೋದಪುದು. ಎನ್ನ ವೇಳ್ಪುದನ್ ತಣಿಯುಣಲ್ ಈವೊಡೆ ಈವುದು.

**ಅರ್ಜುನ:** ಅದೇವಿರಿದು ಇತ್ತೆನ್. ಆವುದು ಉಣ್ಬ ಉಣಿಸು.

**ಅಗ್ನಿದೇವ:** ಪೇಳ್ವೆನ್.

(ಎಂಬ ಪದದೊಳ್, ನರಕಾಂತಕನ್ ಅಗ್ನಿದೇವನನ್ ಕಾಣಲೊಡಮ್ ಅಱಿದು, ಶರಣಾಗತಜಳನಿಧಿಯನ್ ಎಯ್ದೆ ವಂದನ್.)

**ಕೃಷ್ಣ:** ಈ ಬಕವೇಷಿ ನಿನ್ನನ್ ಏನನ್ ಬೇಡಿದನ್. ನೀನ್ ಈತಂಗೆ ಏನನ್ ಇತ್ತೆ.

**ಅರ್ಜುನ:** ಬಡವನ್ ಪಸಿದು ಉಣವೇಡಿದನ್, ಇತ್ತೆನ್. ಅದಲ್ಲದೆ ದಲ್, ಇಲ್ಲಿ ಕುಸುರಿಯ ಮಾತು ಕಾಣೆನ್.

(ಎನೆ ಮುರಾಂತಕನ್ ಕೇಳ್ದು...)

**ಕೃಷ್ಣ:** ಏನ್ ತಗುಳ್ದೆ. ಈವ ಮಾತನ್ ಇನ್ ಉಸಿರದಿರ್. ಇವನ್ ಉಣ್ಬುದು ಖಾಂಡವನ್. ಈತನ್ ಅಗ್ನಿ. ಮುನ್ ಇವನ್ ಇಂತೆ ಪುಸಿದು, ಆದಿ ನರೇಂದ್ರರೆಲ್ಲರನ್ ಇಂದ್ರನೊಳ್ ಪಾಯಿಸಿದನ್. ಈತನ್ ಅಜಮುಖವ್ಯಾಘ್ರನ್... ಶ್ವೇತಕೃಷ್ಣಕಾರಕನ್. ಈತನ ಮಾತು ಮಾತಲ್ಲ.

(ಎಂದೊಡೆ, ಆ ಮಾತು ತನ್ನನ್ ಮೂದಲಿಸಿದಂತಾಗೆ ವಿದ್ವಿಷ್ಟವಿದ್ರಾವಣನ್ ಇಂತು ಎಂದನ್.)

**ಅರ್ಜುನ:** ಎರೆದನ ಪೆಂಪು ಪೇಳ್ವೊಡೆ ಅನಲನ್. ಪೂಣರ್ವಾತನ ಪೆಂಪು ಪೇಳ್ವೊಡೆ ಆ ಸುರಪತಿ. ಕೊಟ್ಟ ತಾಣದ ಎಡೆ ಪೇಳ್ವೊಡಮ್ ಆ ಯಮುನಾನದೀತಟಾಂತರಮ್. ಒಸೆದಿತ್ತನ್ ಆನ್. ಎರೆಯೆ ಕೇಳ್ದನ್. ಇಳಾಧರ, ನೀನ್ ಅದರ್ಕೆ ಮಾತೆರಡ ಅಣಮ್ ಆಡ ಲಾಗದು. ಇದು ಸೈಪಿನೊಳಲ್ಲದೆ ಕೂಡಿ ಬರ್ಕುಮೇ.

ದನುಜಾರೀ ದಿವಿಜೇಂದ್ರ ಶಾಶ್ವತಗುಣಾ, ನಿನ್ನ ಅಳ್ಕು ಅದೇನ್. ಬೇಡಿದಾನ್ ಅನಲನ್. ತೀರ್ಥ ಸಮೀಪಮ್. ಅಂಬುನಿವಹ ವ್ಯಾಲೋಳ ಕಾಳಿಂದಿಯಾ ವನಮುಮ್ ಕೇಳ್ದುವು. ಭೂತಮಯ್ದುಮ್ ಕೊಟ್ಟಿರ್ದುದಾನ್ ಅಱಿಗುಮ್. ಅಂತಱಿಮ್ ಎನಗೆ ಇನ್ ಮಾಣ್ಬುದು ಸೂಳೆ.

ಇಂದು ಆನ್ ತಳ್ವಿಲ್ಲದೆ ಖಾಂಡವಮನ್ ಊಡುವೆನ್. ಮುರಾಂತಕಾ, ಒತ್ತಿ ತಱುಂಬಿ ನಿಂದ ರಿಪುಭೂಜ ಸಮಾಜದ ಬೇರ್ಗಳನ್ ನಭಕ್ಕೆ ಎತ್ತದೆ... ಬಂದು ತನ್ನ ಮಱೆವೊಕ್ಕೊಡೆ ಕಾಯದೆ... ಚಾಗದ ಒಳ್ಪಿನ ಅಚ್ಚೊತ್ತದೆ... ಮಾಣ್ದು ಬಾಳ್ವ ಪುಳುವಾನಸನ್ ಎಂಬನ್, ಅಜಾಂಡಮ್ ಎಂಬುದೊಂದು ಅತ್ತಿಯ ಪಣ್ಣೊಳ್ ಇರ್ಪ ಪುಳುವಲ್ಲದೆ ಮಾನಸನೇ.

(ಎಂದು ಮಱುಮಾತಿಂಗೆ ಎಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚೆಗಂಡನ ಗಂಡವಾತುಮನ್ ನನ್ನಿವಾತುಮನ್ ಮುರಾಂತಕನ್ ಮೆಚ್ಚಿ....)

**ಕೃಷ್ಣ:** ಅರಿಗ, ಕೇಳ್ ಸಮಕಟ್ಟಿಂಗೆ ಒರೆಗೆ ಆರುಮ್ ನಿನ್ನೊಳ್ ಸಮಮ್ ಧಾತ್ರಿಯೊಳ್ ಇಲ್ಲ. ಹಿಮಕೃದ್ಭೂಧರದಂತೆ ನಿನ್ನ ಗುಣಸಂದೋಹಂಗಳನ್ ಮತ್ತೊರ್ವನೊಳ್ ಕಾಣಲಕ್ಕುಮೆ, ಆಗದು. ಅದು ಎಂತೆನೆ ಸಮಸ್ತ ಉರ್ವೀಧರ ಅಶೇಷ ಶೇಷ ಮಹಾನಾಗ ಫಣಾಮಣಿದ್ಯುತಿಯನ್ ಖದ್ಯೋತದೊಳ್ ಏನ್ ಕಾಣ್ಬರೇ...

ಮುನಿಯಿಸಿದನ್ ಕರಮ್ ಪಿರಿಯನಪ್ಪುದು. ಬೇಳ್ಪನ ಬೇಳ್ಪ ವಸ್ತು ಕಾಂಚನಗಿರಿಯಿಂದಮ್ ಅಗ್ಗಳಮ್ ಎನಿಪ್ಪುದದು. ಆದೊಡಮ್ ಏನೋ ಜೀವಮ್ ಉಳ್ಳಿನಮ್ ಇಱಿದು, ಅರ್ಥಮ್ ಉಳ್ಳಿನೆಗಮ್ ಇತ್ತು, ನೆಗಳ್ತೆಯನ್ ಆಂಪುದು ಎಂಬ ಪೆಂಪಿನ ಸಮಕಟ್ಟು ಕಣ್ಗೆ. ಅರಿಕೇಸರಿ, ನಿನ್ನವೊಲ್ ಪೆಱಿನ್ ಆರ್ ದೊರೆ.

(ಎಂದು ತನಗೆ ಕೊಟ್ಟ ಕೋಡಿಂಗೆ ಒಡಂಬಟ್ಟ ದಿತಿಜಕುಲ ದಾವಾನಲನುಮನ್ ಅರಾತಿಕಾಲಾನಲನುಮನ್ ಅನಲನ್...)

**ಅಗ್ನಿದೇವ:** ಇಷ್ಟಾರ್ಥಸಿದ್ಧಿಯಕ್ಕುಮ್.

(ಎಂದು ಪರಸಿ, ಮನಃಪವನವೇಗದಿನ್ ಪಾಲ್ಗಡಲನ್ ಎಯ್ದಿ, ತನ್ನ ಬಯಿತ್ತಿಟ್ಟ ದಿವ್ಯ ಸಂಭವಂಗಳಪ್ಪ ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯ ರಥಮುಮನ್, ದಧೀಚಿಗಂಡಸ್ಥಮಪ್ಪ ಗಾಂಡೀವಮ್ ಎಂಬ ಬಿಲ್ಲುಮನ್, ದಿವ್ಯಶರಂಗಳೊಳ್ ತೆಕ್ಕೆನೆ ತೀವಿದ ತವದೊಣೆಗಳುಮನ್ ತಂದು...)

**ಅಗ್ನಿದೇವ:** ಎನ್ನ ಪ್ರತಿಜ್ಞೆಯನ್ ತೀರ್ಚುವೊಡಮ್... ಇಂದ್ರನನ್ ಗೆಲ್ವೊಡಮ್ ಇವನ್ ಅಮೋಘಮ್ ಕೆಯ್ಕೊಳಲ್ವೇಳ್ಕುಮ್.

(ಎಂದೊಡೆ ಅತಿರಥಮಥನನ್ ಅಗ್ನಿದೇವಂಗೆ ಪೊಡೆವಟ್ಟು ಕೆಯ್ಕೊಂಡು, ಬೃಹಂದಳನ್ ಎಂಬ ಸಾರಥಿವೆರಸು ರಥಮನ್ ಏಱಲೊಡಮ್...)

**ಕೃಷ್ಣ:** ಪಾವಕನ್ ಅಳ್ವಿ ಖಾಂಡವಮನ್ ಉಂಡಪನ್. ಅರ್ಜುನನ್ ಊಡಿದಪನ್. ಐರಾವತವಾಹನನ್ ನೆಱೆದು ಸಾಧನ ಸಂಯುತನ್ ಆಂಪನ್. ಅಲ್ಲಿ ನಾನಾ ವಿಧ ಯುದ್ಧಮ್ ಉಂಟು.

(ಎನುತೆ ಶೈಬ್ಯ ಬಳಾಹಕ ಮೇಘವರ್ಣ ಸುಗ್ರೀವ ಹಯಂಗಳಿಂದ ಎಸೆವುದಮ್ ರಥಮನ್ ಹರಿ ತಾನುಮ್ ಏಱಿದನ್. ಅಂತು ದಾರುಕನ್ ರಥಮನ್ ಚೋದಸಲೊಡಮ್ ಇರ್ವರ ರಥಚೋದಕರ್ ಚೋದಿಸುವುದುಮ್, ಅವರ ಎರಡು ರಥದ ಗಾಳಿಯ ಕೋಳಿಂದಾದ ರಜಃಪಟಲಮ್ ಕವಿದು ದಿವಿಜ ವಧುವಿರ ಕಣ್ಣೊಳ್ ಆದಮೆ ತೀವಿದುದು.

ಅಂತು ಎಯ್ದಿ ಯಮುನಾನದಿಯ ತೆಂಕಣ ದೆಸೆಯೊಳ್ ನೂಱು ಯೋಜನದ ಅಗಲದೊಳಮ್ ಅನಿತೆ ನೀಳದೊಳಮ್ ನೆಱೆದು, ಕಕುಭ ಅಶೋಕ ಕದಂಬ ಲುಂಗ ಲವಲೀಭೂಜ ಅರ್ಜುನಾನೋಕಹ ಪ್ರಕರಮ್ ಪುಷ್ಪಿತ ಹೇಮಪಂಕಜ ರಜಸ್ಸಂಸಕ್ತ ಭೃಂಗಾಂಗನಾನಿಕರಮ್ ಸಾರಸ ಹಂಸ ಕೋಕಿಳ ಕುಳ ಧ್ವಾನೋತ್ಕರಮ್ ಆನಂದನಮ್ ನಂದನಮ್ ಕರಮ್ ಸಕ್ತನಿಳಿಂಪ ದಂಪತಿಗಳಿಂದೆ ಚೆಲ್ವನಾಯ್ತು ಎನೆ ಸೊಗಸುವ ಖಾಂಡವವನಮನ್ ವನರುಹನಾಭನ್ ವಿಕ್ರಮಾರ್ಜುನಂಗೆ ತೊಳಲ್ದು ತೋಱಿ...)

**ಕೃಷ್ಣ:** ಅಳಿಗಳ್ ಅಲರನ್ ನೋಯಿಸದೆ ಒಯ್ಯನೊಯ್ಯನೆ ಬಂಡುಣ್ಬುವು. ಗಾಳಿ ಆಟಂದು ಬಂದು ಅಲೆಯಲ್ಕೆ ಅಣ್ಮದು. ಸೂರ್ಯಕಿರಣ ಆನೀಕಕ್ಕಮ್ ಎಂದಪ್ಪೊಡಮ್ ಸಲವಿಲ್ಲ. ಉದ್ಧತಸಿದ್ಧಖೇಚರರೆ ತಾಮ್ ಆಳ್ವೇಲಿಯಾಗಿ ಇಂತು ನಿಚ್ಚಲುಮ್ ಓರಂತೆ ಇರೆ ಕಾವರ್. ನಂದನಕ್ಕೆ ಇಂದ್ರನಾ ಕಾಪು ಈ ದೊರೆತು.

ಮಘವನ್ ಒರ್ಮೆ ಬನಮನ್ ತೊಳಲ್ದು ನೋಡಿ, ಪೂತ ಚೂತಮನ್ ನೆರ್ಮಿದ ಅಶೋಕವಲ್ಲರಿಯ ಪಲ್ಲವಮೊಂದನೆ ಶಚಿ ಕೊಯ್ದು ರಾಗದಿನ್ ಸೋರ್ಮುಡಿಯೊಳ್ ತಗುಳ್ಚಿದೊಡೆ, ಸೌಳನೆ ಬಾರಿಸಿದನ್ ದಲ್ ಎಂದೊಡೆ, ಇನ್ ಕೂರ್ಮೆಯ ಮಾತು ಮೆಚ್ಚುವನಿತರ್ಕೆ ಬಳಾರಿ ಮುರಾಸುರಾರಿಯೇನ್. ಇಂತಪ್ಪ ಬನಮನ್ ಇದನ್ ಅನಲನನ್ ಊಡಲೆಂದು ಎಂತು ಪೂಣ್ದಯ್. ಮುನ್ ಪೂಣ್ದಂತೆ ಊಡು. ಶಿತಶರ ಸಂತತಿಯನ್ ಬಿಲ್ಲೊಳ್ ಪೂಡು. ಏಕೆ ನೀನ್ ತಡೆದಿರ್ಪಯ್. ಬನದೊಳ್ ಪರಮಾಣುವನಿತು ಚರಾಚರಮ್ ಪೋಗೆ ಅನಲನ್ ತಣಿಯನ್. ಅದರ್ಕೆ ಆನ್ ನೆರಮಪ್ಪೆನ್. ಉಗ್ರ ಕಿನ್ನರ ಸುರ ದನುಜ ಉರಗರ ಇವರ ಕದನಮೇನ್ ನಿನಗೆ ಅರಿದೇ...

(ಎಂಬುದುಮ್)

**ಅರ್ಜುನ:** ಅಂತೆ ಗೆಯ್ವೆನ್ ಎನ್ನ ಸಾಹಸಮನ್ ನೋಡಿಮ್.

(ಎಂದು ವಿಕ್ರಾಂತತುಂಗನ್ ಉತ್ತುಂಗ ಭುಜಪರಿಘದ ಎರಡು ದೆಸೆಯೊಳಮ್ ತವದೊಣೆಗಳನ್ ಬಿಗಿದು, ಗಾಂಡೀವಮನ್ ಏಱಿಸಿ ನೀವಿ ಜೇವೊಡೆದು, ದಿವ್ಯಾಸ್ತ್ರಂಗಳನ್ ಪಿಡಿದು ಕೆಯ್ ತೀವಿಕೊಂಡು ಅಗ್ನಿದೇವನನ್ ನೋಡಿ...)

**ಅರ್ಜುನ:** ಓಡುಗೆ ನಿಮ್ಮ ಮೆಯ್ಯ ಪಸಿವು. ಆಂತ ವಿರೋಧಿಗಳ್ ಎನ್ನ ಕೆಯ್ಯೊಳ್ ಅಳ್ಕಾಡುಗೆ. ಕೊಳ್ಳಿಮ್ ಉಣ್ಣಿಮ್.

(ಎನೆ ಅನಲನ್ ಕೇಳ್ದು ಪರಸುತ್ತುಮ್, ಆ ಲಯಕ್ರೀಡೆಯೊಳ್ ಚರಾಚರಮುಮನ್ ಸುಡುವ ಅಂದಿನ ಮೆಯ್ಗಮ್ ಅಗ್ಗಳಮ್ ಮಾಡಿ, ತಗುಳ್ದು ನೀಳ್ದು ಬಳೆದು, ಅರ್ವಿಸೆ ಆ ವನಾಂತಮನ್ ಪರ್ವಿದನ್. ಫಳ ಕರ್ಪೂರ ಲವಂಗ ಲುಂಗ ಲವಳೀ ಹಿಂತಾಳ

ತಾಳೀ ತಮಾಳಳತಾ ಸುಂದರ ನಂದನಕ್ಕೆ ಮುನ್ ತನ್ನ ಅರ್ಚಿಗಳ್ ಅಳುರೆ, ಬಂದು ಮೊಕ್ಕಳಮ್ ಎತ್ತಮ್ ಸುರಿಯುತ್ತುಮಿರ್ಪ ರಸಮನ್ ಮನಂಗೊಳೆ, ಸಪ್ತಾರ್ಚಿ ಪೊದಳ್ದು ನೀಳ್ದು ಒಸಗೆಯಿಂದ ಆಪೋಶನಂಗೊಳ್ವವೊಲ್ ಪೀರ್ದುಕೊಂಡನ್.

ನನೆಕೊನೆಯ ತಳಿರ ಪೂವಿನ ಬನಮನಿತುಮ್ ಶಿಖೆಗಳ್ ಅಳುರೆ, ಬೆಂಕೆಯ ಪೊಯ್ದುರ್ವಿನೊಳೆ ಕೊರಗಿರ್ದ ಲತೆಗಳ ಕೊನೆಗೊನೆಯನೆ ದಹನನ್ ಅಳುರ್ದು ಕೊನೆಕೊನೆಗೊಂಡನ್. ಆಗಳ್ ಆ ಬನಮನ್ ಇಂದ್ರನ ಬೆಸದೊಳ್ ಕಾವ ಕಿನ್ನರ ಕಿಂಪುರುಷ ಗರುಡ ಗಂಧರ್ವ ಸಿದ್ಧ ವಿದ್ಯಾಧರ ಬಲಮ್ ಅನಿತುಮ್ ಒಂದಾಗಿ ವಿಕ್ರಮಾರ್ಜುನನೊಳ್ ತಾಗೆ, ಉರಿ ಬನಮನ್ ಕೊಂಡಪುದು. ಅದನ್ ಕಂಡು ಎಂತು ಇರಲಕ್ಕುಮ್ ಎಂದು ತಾಗಿದ ನೆಗಳ್ದ ಒಳ್ಗಂಡರ ಗಂಡೋಡುವಿನಮ್, ಗಾಂಡೀವಮುಕ್ತ ಬಾಣಗಣಂಗಳ್ ಕೊಂಡುವು.

ಅಂತು ಕಾದೆ ವಿದ್ವಿಷ್ಟವಿದ್ರಾವಣನ ಮೊನೆಯಂಬಿನ ಅಂಬೇಱಿಂಗೆ ಅಳ್ಕಿ, ಹತವಿಹತ ಕೋಳಾಹಳರಾಗಿ ಸಿದ್ಧರ್ ಅಸಿದ್ಧರಾಗೆಯುಮ್, ಕಿನ್ನರರ್ ಇನ್ನಾರ ಮರೆಯಮ್ ಪುಗುವಮ್ ಎನೆಯುಮ್, ಕಿಂಪುರುಷರ್ ಕಾಪುರುಷರಂತೆ ಬಾಯನ್ ಬಿಡೆಯುಮ್, ಗಂಧರ್ವರ್ ಗರ್ವಮನ್ ಉಳಿದು ಒಂದೊರ್ವರಮ್ ಮಿಗೆ ಓಡೆಯುಮ್, ವಿದ್ಯಾಧರರ್ ಅಧರರಾಗೆಯುಮ್, ಪನ್ನಗರ್ ಪನ್ನತಿಕೆಯಿಮ್ ಬಂದು ಆಂತೊಡೆ, ನಾಗರ ಖಂಡಗಳನ್ ಆ ನಾಗರ ಖಂಡದೊಳೆ ತೊಡರೆ ನರನ್ ಇಸುವುದುಮ್, ಆ ನಾಗರ ಖಂಡಂಗಳುಮನ್ ನಾಗರ ಖಂಡಮುಮನ್ ದಹನನ್ ಅಳುರ್ದು ಕೊಂಡನ್. ಉನ್ಮದ ಪರಭೃತ ಷಟ್ಚರಣ ರಾಜಕೀರ ಕುಲಂಗಳ್ ವಿರಹಿಗಳ ಸುಯ್ಯ ಬೆಂಕೆಯೊಳ್ ಇರದೆ ಒಣಗಿದುವಕ್ಕುಮ್.

ಈಗಳ್ ಎನಲ್ ಉರಿವುರಿಯಿಮ್ ಕರಿಮುರಿಕನ್ ಆದುವು. ಉರಿಕೊಳೆ ದೆಸೆಕಾಣದೆ ದೆಸೆವರಿವರಿದು ಕುಜಂಗಳನ್ ಪಡಲ್ವಡಿಸಿ ಭಯಂಬೆರಸು ಒಳಱೆ, ಆ ವನಕರಿಶರಭ ಕಿಶೋರ ಕಂಠಗರ್ಜನೆ ಆ ಬನದೊಳ್ ನೆಗದುವು. ಸಂಗತ ಧೂಮಾವಳಿಯನ್

ಇಭಂಗಳೆ ಗೆತ್ತು ಸಿಂಗಗಳ್ ಒಳಱಿ ಪಾಯ್ದು, ಕಣ್ಣಮ್ ಪೊಗೆ ಪುಗೆ, ಅಳುರೆ ಗರ್ಜಿಸಿ ಲಂಗಿಸಿ ಪುಡಪುಡನೆ ಪುಳ್ಗಿ ಪಲವುಮ್ ಸತ್ತುವು. ಮತ್ತಮ್ ಅಲ್ಲಿ ಕೆಲವು ಲತಾಗೃಹಂಗಳೊಳಮ್ ಧಾರಾಗೃಹಂಗಳೊಳಮ್ ಕಿರ್ಚು ಒಡನೆ ಅಳುರೆ ಆ ಪ್ರಾಣವಲ್ಲಭರ್ ತೋಳನ್ ಸಡಿಲಿಸದೆ ಪ್ರಾಣಮನ್ ಅಂದು ಒಡಗಳೆದರ್. ಓಪರ್ ಓಪರೊಳ್ ಒಡಸಾಯಲ್ ಪಡೆದರ್ ಇನ್ನವುಮ್ ಸೈಪು ಒಳವೇ.

ಅಂತು ಖಾಂಡವವನಮ್ ಎಲ್ಲಮನ್ ಅನಲನ್ ಪ್ರಳಯ ಕಾಳಾನಳನಂತೆ ಅಳುರ್ದುಕೊಳೆ, ಬಳಸಿ ಬಂದು ಕಾವ ನಾರಾಯಣನ ಸುದರ್ಶನಮ್ ಎಂಬ ಚಕ್ರದ ಕೋಳುಮನ್, ವಿಕ್ರಮಾರ್ಜುನನ ದಿವ್ಯಾಸ್ತ್ರಂಗಳ ಕೋಳುಮನ್, ಅಗ್ನಿದೇವನ ಶಿಖಾಕಳಾಪದ ಕೋಳುಮನ್ ಎಂತಾನುಮ್ ಬಂಚಿಸಿ ಬಲೆ ಪಱಿದ ಕೋಕನಂತೆ ಒರ್ವ ವನಪಾಲಕನ್ ಪೋಗಿ ದೇವೇಂದ್ರನನ್ ಕಂಡು...)

**ವನಪಾಲಕ:** ದೇವ ಬಿನ್ನಪಮ್, ಇಂದು ಕೃಶಾನು ಖಾಂಡವಮನ್ ತಗುಳ್ದು ನಾನಾ ವಿಧಮ್ ಸುಡೆ, ನೋಡಲಾಱದೆ ತಳ್ತ ದೇವರ ಕಾಪಿನಾಳ್ ದೇವ ಕಿನ್ನರ ಪನ್ನಗಾವಳಿ ಮೊಟ್ಟನಪ್ಪಿನಮ್ ಎಚ್ಚು ಕೊಂದು, ದೇವರನ್ ಏವರ್ ಎಂದು ಉಱದೆ ಇರ್ದನ್. ಒರ್ವನ್ ಅಗುರ್ವು ಪರ್ವಿರೆ ದೇವರನ್... ನೋಟಕ್ಕೆ ಎರಡು ರಥಮ್ ಒಳವು. ಎರಡಱೊಳ್ ಅವನ ಒಂದು ರಥಮೆ ತೋಟಿಗೆ ಪಲವಾಗಿರೆ ಪರಿದು ಕಣ್ಣೊಳ್ ಇನ್ನುಮ್ ತಿರಿದಪುದು. ನಮ್ಮ ಬನಮ್ ಎನಿತು ಅನಿತುಮ್ ಉರಿದಪುದು.

(ಎಂಬುದುಮ್ ಪೌಲೋಮೀಪತಿ ತನ್ನ ದಿವ್ಯಜ್ಞಾನದೊಳ್ ನೋಡಿ, ಚಕ್ರಿಯುಮ್ ವಿಕ್ರಮಾರ್ಜುನನುಮ್ ಅಪ್ಪುದನ್ ಅಱಿದು, ಗಜಱಿ ಗರ್ಜಿಸಿ ವಿಳಯಕಾಳಾಂಬುದದಂತೆ ಮೊಳಗುಮನ್, ಸಿಡಿಲ ಬಳಗಮನ್ ಒಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳನ್ ಬೆಸಸಿದಾಗಳ್, ಅವು ವಿಂಧ್ಯಾಚಳಕೂಟ ಕೋಟಿಗಳೆ ಕಿಳ್ತೆಳ್ದು ಬರ್ಪಂತೆ ಬಂದು,

ದೆಸೆಗಳ್ ಎಲ್ಲಮನ್ ಮುಸುಱಿ ಕಳ್ತಲಿಸಿ ಕವಿದು, ಲೋಕಮನ್ ಈಗಳ್ ಸಪ್ತಸಾಗರ ಜಲಂಗಳೆ ಕವಿದುವು ಎಂಬಿನಮ್ ಮುಗಿಲ್ಗಳ್ ಅಲ್ಲಿ ಕವಿದು ಕಱೆಯುತ್ತಿರೆ, ಪಾವಕನ್ ಉರ್ಕುಗೆಟ್ಟು...)

**ಅಗ್ನಿದೇವ:** ಇದು ಎಂತುವೊ ದಾನಮ್ ತೊದಲಾಯ್ತು.

(ಎನೆ, ಗುಣಾರ್ಣವನ್ ಮಾರುತ ಬಾಣದೆ ಮೇಘ ಮಾಲಿಕಾ ನಿವಹಮನ್ ಎಚ್ಚು ಕೂಡೆ ಶರಪಂಜರಮನ್ ಪಡೆದನ್. ಅಂತು ಪುಂಖಾನುಪುಂಖಮಾಗೆ ಪಾಯ್ವ ಶರಸಂಧಾನದೊಳ್ ಎಡೆವಱಿಯದಂತೆ ಎರಡುಮ್ ಕೆಯ್ಯೊಳ್ ತೋಡುಮ್ ಬೀಡುಮ್ ಕಾಣಲಾಗದಂತೆ ಇಸೆ, ತುಱುಗಿ ಕವಿವ ಅಂಬಿನ ಮಳೆಯೆ ಮಳೆಯನ್ ಮಾಣಿಸೆ, ದಿವ್ಯಾಸ್ತ್ರಂಗಳಿನ್ ನೂಱು ಯೋಜನದ ಅಳವಿಯ ಖಾಂಡವವನಮ್ ಎಲ್ಲಮನ್ ತಟ್ಟಿ ಮೆಡಱಿ ಮಶಕಮಾತ್ರಮಪ್ಪೊಡಮ್ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿ ಮುಸುಕಿದಾಗಳ್, ಅಭಿನವ ಜೀಮೂತವಾಹನನ ದಿವ್ಯಾಸ್ತ್ರದ ಕೋಳ್ಗೆ ಇರಲಾಱದೆ ಜೀಮೂತಂಗಳೆಲ್ಲಮ್ ತೆರಳ್ದು ಓಡಿದೊಡೆ, ಅಗ್ನಿದೇವನ್ ಆವಗೆಯ ಕಿರ್ಚಿನಂತೆ ಒಳಗೊಳಗೆ ಅಳುರ್ದು, ವನಖಗ ವನಮೃಗ ವನತರು ವನಚರ ವನವನಜ ನಿವಹಮ್ ಉಳ್ಳನಿತುಮ್ ಸೀರನಿತುಮ್ ಅಣಮ್ ಉಳಿದುದಿಲ್ಲ ಎಂಬಿನಮ್ ದಹನನ್ ಅಳುರ್ದು, ಖಾಂಡವ ವನಮನ್ ಉಂಡನ್.

ಅಂತು ಆ ವನಗಹನಮೆಲ್ಲಮ್ ದಹನಮಯವಾದ ಪ್ರಸ್ತಾವದೊಳ್ ವಿಸ್ಮಯಮಾಗೆ ಮಯನೆಂಬ ದಾನವ ವಿಶ್ವಕರ್ಮನ್ ನೆಗೆದು ಉರಿವುರಿಮಾಲೆಗಳನ್ ಗದೆಯೊಳ್ ಬೀಸುತ್ತುಮ್ ಪೊಱಮಡೆ ಪೊಱಮಡಲ್ ಈಯದೆ, ಒಂದು ದೆಸೆಯೊಳ್ ತಗುಳ್ವ ಮುಕುಂದನ ಕರಚಕ್ರಮ್, ಒಂದು ದೆಸೆಯೊಳ್ ನರನ್ ಎಚ್ಚ ಒಂದು ಶರಮ್ ಒಂದು ದೆಸೆಯೊಳ್ ದಹನಾರ್ಚಿ ಕುಂದದೆ ಸುತ್ತಿಮುತ್ತುವ ಪದದೊಳ್...)

**ಮಯ:** ಅರಿಕೇಸರಿಯೆರಡು ಪದಾಂಬುಜಮುಮ್ ಈಗಳ್ ಎನಗೆ ಶರಣಕ್ಕೆ.

(ಎಂಬುದುಮ್, ಆಗಳ್ ಹರಿಚಕ್ರಮ್ ಕೊಳ್ಳದೆ, ನರಶರಮ್

ಉರ್ಚದೆ, ಅವನನ್ ದಹನಶಿಖೆಗಳ್ ಅಳುರದೆ, ಆಗಳ್ ಮಯನ್ ವಿಸ್ಮಯಂಬಟ್ಟು ಪೊಡೆವಟ್ಟು ಪೋದನ್. ಆಗಳ್ ಆ ವನಾಂತರಾಳದೊಳಿರ್ಪ ತಕ್ಷಕನ ಮಗನಪ್ಪ ಅಶ್ವಸೇನನ್ ಎಂಬ ಪನ್ನಗನ್ ತನ್ನ ತಾಯನ್ ತನ್ನ ಬಾಲಮನ್ ಕರ್ಚಲ್ ಪೇಳ್ದು, ದಹನಾರ್ಚಿಗಳಿನ್ ಬರ್ದುಂಕಿ ನೆಗೆದು ಪಾಱುವಾಗಳ್, ಅದನ್ ಎರಳ್ಖಂಡಮಪ್ಪಿನಮ್ ಆಖಂಡಳ ತನಯನ್ ಇಸುವುದುಮ್, ತನ್ನ ಬಾಲಂಬೆರಸು ಉರಿಯೊಳ್ ಬಿಳ್ದು ಮಿಡುಮಿಡುಮಿಡು ಕುತಿರ್ದ ಜನನಿಯನ್ ಕಂಡು, **'ಪಾವುಗಳ್ ಉಳ್ಳ ಪಗೆಯನ್ ಮಱೆಯವು'** ಎಂಬುದನ್ ನನ್ನಿ ಮಾಡಿ ಪಗೆ ಸಾಱುವುದುಮ್.)

**ಅರ್ಜುನ:** ಪಗೆ ಸಾಱಿದ ನಿನ್ನನ್ ಕೊಲ್ಲೆನ್. ಆರ ಮಱೆಯನ್ ಪೊಕ್ಕುಮ್ ಪಗೆಯನ್ ನೆಱಪು.

(ಎನೆ, ನೆಱಪುವ ಬಗೆಯೊಳೆ ಕರ್ಣನ ದೊಣೆಯನ್ ಕಡಂಗಿ ಪೊಕ್ಕನ್. ಅಂತು ಅಶ್ವಸೇನನ್ ಅರ್ಧಾವಲಿಕಮ್ ಎಂಬ ಅಮೋಘಾಸ್ತ್ರಮಾಗಿ ಕರ್ಣನ ದೊಣೆಯೊಳ್ ಇರ್ದನ್. ಇತ್ತ ಖಾಂಡವವನದೊಳಗೆ ಮಂದಪಾಲನೆಂಬ ಮುನಿಗಮ್, ಒಂದು ಲಾವಗೆಗಮ್ ಪುಟ್ಟಿದ ನಾಲ್ಕುಮ್ ಲಾವಗೆಗಳ್ ಅಗ್ನಿಸೂಕ್ತಂಗಳನ್ ಓದುತ್ತುಮ್ ಅದಿರದೆ ಇದಿರಮ್ ಬರೆ, ಮೆಚ್ಚಿ ಬರವನ್ ಅಗ್ನಿದೇವನ್...)

**ಅಗ್ನಿದೇವ:** ಬೇಡಿಕೊಳ್ಳಿಮ್.

(ಎಂದೊಡೆ..)

**ಲಾವಗೆ:** ಎಮ್ಮ ಅನ್ವಯಕ್ಕೆ ನೀನ್ ತಣ್ಣಿದೆಯಾಗು.

(ಎಂದು ಬೇಡುವುದುಮ್)

**ಅಗ್ನಿದೇವ:** ತದಸ್ತು.

(ಎಂದನ್. ಇತ್ತಲ್ ಇಂದ್ರನ್ ತನ್ನ ಬಲಮೆಲ್ಲಮ್ ಅಳ್ಕಿಮೆಳ್ಕಿದಂತಾದುದು ಎಂಬುದನ್ ಕೇಳ್ದು.)

**ಇಂದ್ರ:** ಪೇಳ್, ಎನಗೆ ಮಗನೆಂದು ಪಾರ್ಥನನ್ ಪಿಡಿದು ಕಟ್ಟದೆ ಮಾಣ್ಬೆನೆ...
ಚಕ್ರಿಯನ್ ಧರಿತ್ರಿಗೆ ಗುರುವೆಂದು ವಜ್ರದೊಳ್ ಉರುಳ್ಚದೆ ಮಾಣ್ಬೆನೆ...
ಬಗೆಯದೆ ಕರಮ್ ಗೊಡ್ಡಮಾಡಿದರ್ಗೆ ಈಗಳೆ ತಕ್ಕುದನ್ ಮಾಳ್ಪೆನ್.

(ಎಂದು ಸುರಾಧಿಪನ್ ನಿಜವಾಹನಮನ್ ಏಱಿ ದಿವದಿನ್ ತೊಟ್ಟಗೆ ಪೊಱಮಟ್ಟನ್. ಅಂತು ದೇವನಿಕಾಯಮ್ ಬೆರಸು ಯುದ್ಧಸನ್ನದ್ಧನಾಗಿ ಪರಸೈನ್ಯ ಭೈರವನೊಳ್ ಇಱಿವೆನ್ ಎಂಬ ಪಳುವಗೆಯೊಳ್ ಭೈರವನ್ ಪಾಯ್ವಂತೆ ಬಂದು ನಿಂದ ಪುರಂದರನಲ್ಲಿಗೆ ಸರಸಿಜಸಂಭವನ್ ಬಂದು ಮಾರ್ಕೊಂಡು...)

ಬ್ರಹ್ಮ: ಬನಮನೆ ಕಾಯಲೆಂದು ಇಱುವೆಯಪ್ಪೊಡೆ ಮುನ್ನಮೆ ಪೋದುದು. ಅಂದು ಪಾರ್ಥನೊಳ್ ಎನಗೆ ಏವಮ್ ಎಂಬ ಬಗೆಯುಳ್ಳೊಡೆ ನಿನ್ನಯ ಪುತ್ರನ್. ಅಚ್ಯುತಂಗೆ ಇನಿಸು ಎರ್ದೆನೋವೆಯಪ್ಪೊಡೆ ಅದು ಕೂಡದು, ಮೂವರೊಳ್ ಒರ್ವನ್. ಎಮ್ಮ ಮಾತಿನಿತೆ. ಗುಣಾರ್ಣವಂಗೆ ಗೆಲ್ಲಮನ್ ಕುಡು. ಇಂತಿದೆ ಕಜ್ಜದ ಉಜ್ಜುಗಮ್.

(ಎಂದು ಕಮಲಾಸನನ್ ಆಸೆದೋಱಿ ನುಡಿದು, ಉಳ್ಳುದನೆ ನುಡಿದೊಡೆ...)

ಇಂದ್ರ: ಅಂತೆ ಗೆಯ್ವೆನ್.

(ಎಂದು ಆತ್ಮತನೂಭವನ ಉತ್ತಮಾಂಗದೊಳ್ ಸುರಿವರಳ ಒಂದು ಬೆಳ್ಸರಿಯದು ದೊರೆಕೊಳೆ, ಅಲ್ಲಿ ನಿಲ್ಲದೆ ಕುಸುಮಮ್ ಕೆಲವು ಅಲ್ಲುಗೆ, ತಾನೆ ತನ್ನ ರತ್ನವಿಸ್ಫುರಿತ ಕಿರೀಟಮನ್ ಕವಿದು, ನರಂಗೆ ಕಿರೀಟಿನಾಮಮನ್ ಆಗಳ್ ಸರಸದಿನ್ ಉಚ್ಚರಿಸಿ, ಸುರಾಧಿಪನ್ ಸಾಹಸಮಮ್ ಪೊಗಳ್ದನ್.)



# ೨೯. ನಾರದನ ಆಗಮನ

(೮ ನೆಯ ಪದ್ಯದಿಂದ ೨೦ ನೆಯ ಗದ್ಯ)

## ಪಾತ್ರಗಳು

ನಾರದ: ಒಬ್ಬ ದೇವತೆ.

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

# ನಾರದನ ಆಗಮನ

ಸರಿಗೆಯೊಳ್ ಸಮೆದ ಅಕ್ಷಮಾಲಿಕೆ, ಪೊನ್ನ ಮುಂಜಿ, ತೊಳಪ್ಪ ಕಪ್ಪುರದ ಭಸ್ಮರಜಸ್ತ್ರಿಪುಂಡ್ರಕಮ್ ಒಪ್ಪೆ, ಪಿಂಗ ಜಟಾಳಿ, ತಾವರೆಯ ಸೂತ್ರದೊಳಾದ ಜನ್ನವಿರಮ್, ದುಕೂಲದ ಕೋವಣಮ್ ಕರಮ್ ಒಡಂಬಡೆ ಆ ತಪಸ್ವಿ ನೋಟಕರ್ಕಳಮ್ ಮರುಳ್ಚಿದನ್. ಬಟ್ಟಗೊಡೆ ಚಂದ್ರಕಾಂತಿಯನ್ ಅಟ್ಟುಂಬರಿಗೊಳೆ, ಪೊದಳ್ದ ಕೃಷ್ಣಾಜಿನಮ್ ಒಂದು ಇಟ್ಟಳಮ್ ಎಸೆಯೆ, ಗಾಡಿಗಳೊಳ್ ಎಸೆವ ವೀಣಾಕ್ವಣಿತಮ್ ಬೆಡಂಗಮ್ ಪುಟ್ಟಿಸೆ, ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಡೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ, ಚೆನ್ನತಪಸಿಯ ಕಯ್ಯೊಳ್ ಮುತ್ತು ಪವಳಮ್ ಬೆರಸಿದವೊಲಾಯ್ತು. ಅಂತು ಸಾಕ್ಷಾತ್ ಬ್ರಹ್ಮನ್ ಬರ್ಪಂತೆ ಬಂದು, ಇವನ್ ಎಳೆಯೊಳ್ ಅಡಿಯಿಟ್ಟನ್ ಎಂಬ ಎಡೆಯೊಳ್ ಅರಸನ್ ಪರಿಜನಸಮೇತಮ್ ಇದಿರೆಳ್ದು ಪೊಡೆವಡೆ, ತಪಸ್ವಿ ಕೆಯ್ಯನ್ ಪಿಡಿದು ಎತ್ತಿ ಪಲರ್ಮೆ ಪರಕೆಗಳಿನ್ ಪರಸಿದನ್.

ಅಂತು ಧರ್ಮಪುತ್ರನ್ ಅಬ್ಜಜಪುತ್ರನನ್ ಮುಂದಿಟ್ಟು ಒಡಗೊಂಡು ಬಂದು, ಮಣಿಕನಕರಚನವಿಚಿತ್ರ ವೇತ್ರಾಸನದೊಳ್ ಇರಿಸಿ, ಮಹಾರ್ಘ್ಯಗುಣಮಣಿ ವಿಭೂಷಣಂಗೆ ಕನಕಪಾತ್ರದೊಳ್ ಅರ್ಘ್ಯಮೆತ್ತಿ, ಕನಕ ಕಳಸ ಸಂಭೃತ ಶುಚಿಜಲಂಗಳಿಂದಮ್ ಆ ಮುನೀಶ್ವರನ ಪಾದ ಪದ್ಮಮನ್ ಕರ್ಚಿ, ತತ್ ಪಾದಪವಿತ್ರೋದಕಗಳಿನ್ ಮಹಾಋಷಿಯ ತಳಿದ ಕನಕ ಕಮಂಡಲುವಿನ ತೀರ್ಥೋದಕಂಗಳಿಂದೆ ಅಯ್ವರುಮ್ ಪವಿತ್ರೀಕೃತ ಮಸ್ತಕರಾಗಿರ್ದು ಯುಧಿಷ್ಠಿರನ್ ನಾರದ ಮಹಾಮುನಿಯ ಮೊಗಮನ್ ನೋಡಿ...

**ಧರ್ಮರಾಯ:** ಬ್ರಹ್ಮನ್ ಜಗಮನ್ ಪಡೆದನ್. ತಾನ್ ಪೆಂಪನ್ ಪಡೆಯಲ್ ಆರ್ತನಿಲ್ಲ. ನಿಮ್ಮನ್ ಪಡೆದಲ್ತೆ ಪಡೆದನ್ ಎನಿಸಿದ ಕಡುಪೆಂಪಿನ ಪೊಜೆಗೆ ನೀವ್ ಮೊದಲಿಗರಾದಿರ್. ಬಾದೇನ್ ಮುನಿನಾಥಾ

ಭವತ್ಪಾದಪ್ರಕ್ಷಾಳನೋದಕಮ್, ಆ ಮದೀಯ ಕರ್ಮಫಲೋದಿತ ಸಂತಾಪರೂಪ ಪಾಪಕಳಾಪ ವಿಚ್ಛೇದನಕರಮ್ ಆಯ್ತು. ಬೆಸನ್ ಎನಗೆ ಆವುದೋ... ಬೆಸನಮ್ ಬೆಸಸಿಮ್. ಪಿರಿದಕ್ಕೆ ಅದನ್ ಗೆಯ್ಯೆ ಸಾರ್ದಿರ್ದೆನ್. ನಿಮ್ಮಯ ಬರವನ್ ಬೆಸಸಿಮ್. ಪೊಸತಾಗಿರೆ ಬಂದಿರ್. ಈಗಳ್ ಎಲ್ಲಿಮ್ ಬಂದಿರ್.

(ಎಂಬುದುಮ್ ಆ ಮುನೀಂದ್ರನ್...)

**ನಾರದ:** ಇಂದ್ರಲೋಕದಿನ್ ಬಂದೆನ್.

**ಧರ್ಮರಾಯ:** ಅಲ್ಲಿಯ ಪಡೆಮಾತು ಆವುದು... ದಿವಿಜೇಂದ್ರನ್ ಸುಖಮಿರ್ದನೇ... ದಿತಿಸುತವ್ಯಾಬಾಧೆಗಳ್ ದೇವರ್ಗಿಲ್ಲವಲಾ. ಷೋಡಶರಾಜರಿರ್ಪ ತೆಱನೇನ್. ಎಮ್ಮ ಅನ್ವಯ ಕ್ಷ್ಮಾಪರ್ ಆವ ವಿಳಾಸಂಗಳೊಳ್ ಇರ್ಪರ್. ಎಮ್ಮಯನ ಐಶ್ವರ್ಯಮ್ ತಾನ್ ಏನ್ ದೊರತು. ಇಂತು ಇವನೆಲ್ಲಮ್ ತಿಳಿವಂತುಟಾಗಿ ಪಂಕೇಜಗರ್ಭಾತ್ಮಜಾ ಬೆಸಸಿಮ್.

(ಎಂಬುದುಮ್, ಆ ಮುನೀಶ್ವರನ್ ಇಳಾಧರೇಶ್ವರನ್ ಬೆಸಗೊಂಡ ಅಂದದೊಳೆ ದೇವಲೋಕದ ಪಡೆಮಾತೆಲ್ಲಮನ್ ಪೇಳ್ದು, ಪಾಂಡುರಾಜನ ಮಾತನ್ ಇಂತು ಎಂದನ್...)

**ನಾರದ:** ನೀಡಿರದೆ ಇಂದ್ರನೋಲಗಕೆ ಪೋಪುದುಮ್ ಆಗಳುಮ್, ಅಂತೆ ಪೋಗಿಯುಮ್ ಷೋಡಶರಾಜರಿನ್ ಕಡೆಯೊಳ್ ಇರ್ಪುದು; ಜೀಯ ಪಸಾದಮ್ ಎಂಬುದುಮ್; ನೋಡಿದ ದೃಷ್ಟಿಗೆ ಅಳ್ಕಿ ಸುಗಿದಿರ್ಪುದುಮ್; ಆದಮೆ ಮಾನಭಂಗಮನ್ ಮಾಡೆ, ಪಾಂಡುರಾಜನಾ ಮನಃಕ್ಷತಕ್ಕೆ ಅಳವಿ ಕಾಣೆವು ನೋಡಿರೇ.

ಪರಚಕ್ರಗಳನ್ ಒತ್ತಿಕೊಂಡು, ಅದಟರನ್ ಕೊಂದಿಕ್ಕಿ, ದಾಯಾದರೆಲ್ಲರುಮ್ ಅಳ್ಕುತ್ತಿರೆ ಸಂದ ಸಾಹಸದ ನಿಮ್ಮ ಈ ಅಯ್ವರುಮ್ ಮಕ್ಕಳಾಗಿರೆಯುಮ್, ನಿಚ್ಚಲುಮ್ ಇಂದ್ರನೋಲಗದೊಳ್ ಆ ಪಾಂಡುರಾಜಂಗೆ ಅಂತು ನಿರ್ನೆರಮಪ್ಪ ಒಂದು ಅಪಮಾನದಿಂದಮ್ ಇನಿತೊಂದು ಊನತ್ವಮುಪ್ಪಂತುಟೇ.

ಆಮುಮ್ ಅದನ್ ನೋಡಲಾಱದೆಯುಮ್, ಪಾಂಡುರಾಜನ್

**'ಎನ್ನ ಇದಿರ್ವನ್ ಎನ್ನ ಮಕ್ಕಳ್ಗೆ ಅರಿಪಿ, ರಾಜಸೂಯಮ್ ಎಂಬ ಯಾಗಮನ್ ಬೇಳ್ವಂತೆ ಮಾಡಿ ಬನ್ನಿಮ್'** ಎನೆಯುಮ್, ಅದನ್ ಅರಿಪಲೆಂದೆ ಬಂದೆನ್.

ಆ ಮಖದ ಮಾಹಾತ್ಮ್ಯಮನ್ ಪೇಳ್ವೊಡೆ ಮುನ್ನಮ್ ಕೃತಯುಗದೊಳ್ ಹರಿಶ್ಚಂದ್ರನ್ ಎಂಬ ಚಕ್ರವರ್ತಿ ಶತಕ್ರತುವನ್ ನಿರ್ವರ್ತಿಸಿ, ಚತುರ್ ಅರ್ಣವಪರೀತ ಮಹೀತಳಮ್ ಎಲ್ಲಮನ್ ಧರಾಮರರ್ಕಳ್ಗೆ ದಕ್ಷಿಣೆಗೊಟ್ಟನ್ ಅಪ್ಪುದರಿಂದಮ್, ಅದಱ ಫಲದೊಳ್ ಈಗಳ್ ಆತನಲ್ಲಿಗೆ ಇಂದ್ರನ್ ನಿಚ್ಚಮ್ ಒಂದು ಪೊಳ್ತು ಪೋಗಿ ಪೂಜಿಸಿ ಬರ್ಪನ್. ನಿಮ್ಮಯ್ಯಂಗೆ ನೀಮುಮ್ ಅನಿತು ಮಹಿಮೆಯನ್ ಮಾಳ್ಪಿರಪ್ಪೊಡೆ ಬಿರುದರನ್ ಒತ್ತಿ, ಬೀರರನ್ ಅಡಂಗಿಸಿ, ಕೊಂಕಿಗರನ್ ಕಳಲ್ಚಿ, ಚೆನ್ನರನ್ ಅಡಿಗೊತ್ತಿ, ಮಂಡಳಿಕರನ್ ಬೆಸಕೆಯ್ಸಿ, ಕಱುಂಬರನ್ ನಿರಾಕರಿಸಿ, ಸಮಸ್ತವಾರಿಧಿ ಪರೀತ ಮಹೀತಳದ ಅರ್ಥಮೆಲ್ಲಮನ್ ತರಿಸಿ, ನೆಗಳ್ತೆಯನ್ ನಿಱಿಸಲಾರ್ಪೊಡೆ ರಾಜಸೂಯಮನ್ ಮಾಡಿರೆ.

(ಎಂದು ರಾಜಸೂಯಾಂತಮ್ ಕಳಹಮ್ ಎಂಬುದನ್ ಬಗೆದು, ತಾನುಮ್ ಕಲಹಪ್ರಿಯನ್ ಅಪ್ಪುದರಿಂದಮ್ ಅನಿತನೆ ನುಡಿದು ಮಾಣ್ದ ಮುನೀಂದ್ರನನ್ ನರೇಂದ್ರನ್ ಇಂತು ಎಂದನ್.)

**ಧರ್ಮರಾಯ:** ಅಯ್ಯನ ಮಾತು ಇಂದ್ರಲೋಕದೊಳಗೆ ಒಯ್ಯನೆ ಬೆಳಗುವುದು ಎನಲ್ ಈ ಧರಾವಲಯದೊಳ್ ಎಮ್ಮ ಸಾಹಸಮ್ ಬೆಳಗುವುದು. ದ್ವಿಜಮುಖ್ಯರ್ ತಣಿವರ್. ಅಗ್ಗಳಿಕೆ ಅಪ್ಪುದು. ಕೀರ್ತಿ ಪೊದಳ್ದು ಪರ್ವುವುದು, ಪುರಾಕೃತ ಪುಣ್ಯದಿಂದೆ ಸಂಗಳಿಸುವುದು ಎಂದೊಡೆ ಈ ಮಖದೊಳ್ ಮುನೀಂದ್ರ ನಾಯಕಾ ಏನ್ ತೊದಲುಂಟೆ.

(ಎಂಬುದುಮ್ ಆ ಮಾತನ್ ನಿಲೆ ನುಡಿದುದರ್ಕೆ ಮೆಚ್ಚಿ....)

**ನಾರದ:** ನಿನಗೆ ಅದು ಏನ್ ಪಿರಿದು. ಮರುಳನ್ ಪರಪಿನ ನೀಳದ ಕಡೆಯನ್ ತವೆ ನೋಡಲಾಱದೆ ಅಂಬರತಳಮನ್ ಕರಿದು ಎಂಬಂತಿರೆ, ನಿನ್ನನ್ ನರನೆಂಬುದೆ. ನಿನ್ನ ಸಾಹಸಕ್ಕೆ ಅದು ಪಿರಿದೇ..

(ಎಂದು ನುಡಿದು..)

**ನಾರದ:** ನಾಡೆಯುಮ್ ಪೊಳ್ತಿರ್ದುರ್ಮ್ ಇನ್ ಪೋಪೆನ್.

(ಎಂದ ಮುನಿನಾಥನನ್ ನರನಾಥನ್...)

**ಧರ್ಮರಾಯ:** ಬಿಜಯಂಗೆಯ್ಯಿಮ್.

(ಎನೆ ನಾರದನ್ ಇರದೆ ಗಗನತಳಕ್ಕೆ ಒಗೆದು ಮುಗಿಲ ಪೊರೆಯೊಳ್ ಅಡಂಗಿದನ್.)



# ೩೦. ರಾಜಸೂಯ ಯಾಗದ ಸಿದ್ಧತೆ

(೨೦ ನೆಯ ಗದ್ಯದಿಂದ ೨೮ ನೆಯ ಗದ್ಯ)

**ಪಾತ್ರಗಳು:**

| | |
|---|---|
| **ಧರ್ಮರಾಯ:** | ಪಾಂಡುರಾಜ ಮತ್ತು ಕುಂತಿಯ ಮಗ |
| **ಕೃಷ್ಣ:** | ದ್ವಾರಾವತಿ ಪಟ್ಟಣದ ಒಡೆಯ |
| **ಅರ್ಜುನ:** | ಪಾಂಡುರಾಜ ಮತ್ತು ಕುಂತಿಯ ಮಗ |
| **ಭೀಮಸೇನ:** | ಪಾಂಡುರಾಜ ಮತ್ತು ಕುಂತಿಯ ಮಗ |
| **ನಕುಲ:** | ಪಾಂಡುರಾಜ ಮತ್ತು ಮಾದ್ರಿಯ ಮಗ |
| **ಸಹದೇವ:** | ಪಾಂಡುರಾಜ ಮತ್ತು ಮಾದ್ರಿಯ ಮಗ |

## ರಾಜಸೂಯ ಯಾಗದ ಸಿದ್ಧತೆ

ಇತ್ತ ಧರ್ಮರಾಜನ್ ನಿಜಾನುಜರೊಡನೆ ರಾಜಸೂಯ ಪ್ರಪಂಚಮನ್ ಆಳೋಚಿಸಿ...

**ಧರ್ಮರಾಯ:** ಪುರುಷೋತ್ತಮನನ್ ಈ ಪದದೊಳ್ ಬರಿಸುವುದು ನಮಗೆ ಉತ್ತಮ ಪಕ್ಷಮ್.

(ಎಂದು ದ್ವಾರವತೀಪುರಕ್ಕೆ ತಡವಿಲ್ಲದೆ ಚರರನ್ ಬೇಗಮ್ ಅಟ್ಟಿ, ಪಂಕೇರುಹನಾಭನನ್ ಬರಿಸಿ, ಮಜ್ಜನ ಭೋಜನ ಭೂಷಣಾದಿ ಸತ್ಕಾರದೊಳ್ ಅಳ್ಕರನ್ ನೆಱೆಯೆ ಮಾಡಿ...)

**ಧರ್ಮರಾಯ:** ಮುರಾಂತಕ, ಪಾಂಡುಭೂಭುಜನ್ ಕಾರಣಮಾಗೆ ನಾರದನ ಪೇಳ್ದ ನೆಗಳ್ತೆಯ ರಾಜಸೂಯಮನ್ ಬೇಳಲ್ ಬಗೆವೊಡೆ, ಹರಿಯೊಡನೆ ಆಳೋಚಿಪಮ್ ಎಂದು ಬಳಿಯನ್ ಅಟ್ಟಿದೆನ್. ನೀನ್ ಎಮ್ಮನ್ ಪಾಳಿಸುವೈ. ನಿಮ್ಮೊಡನೆ ಆಳೋಚಿಸದೆ ನೆಗಳಲ್ ನೆರವುಂಟೇ ಏನ್.

(ಎಂಬುದುಮ್ ಅದೆಲ್ಲಮನ್ ನೆಱೆಯೆ ಕೇಳ್ದು, ಮುಂದಣ ಕಜ್ಜದ ಬಿಣ್ಪುಮನ್ ಅರಿದು, ಅಂಭೋರುಹನಾಭನ್ ಶುಂಭದಂಭೋಧರಧ್ವನಿಯಿನ್ ಇಂತು ಎಂದನ್.)

**ಕೃಷ್ಣ:** ಎಂತು ಬಿಗುರ್ತು ಧೀರರನೆ ಕೊಂದಪಿರ್; ಎಂತು ಸಮಸ್ತ ವಾರ್ಧಿ ಪರ್ಯಂತ ಧರಿತ್ರಿಯನ್ ವಶಕೆ ತಂದಪಿರ್; ಎಂತು ಧನಂಗಳನ್ ಪ್ರಯೋಗಾಂತರದಿನ್ ತೆರಳ್ಚಿದಪಿರ್, ಆಗದು. ಇದು ಆದೊಡಮ್ ರಾಜಸೂಯಾಂತಮ್ ಎಂತು; ಅಪಾಯ ಶತಮ್ ಬರೆ ರಾಜಸೂಯಮನ್ ಎಂತು ಬೇಳ್ದಪಿರ್. ಗಾಳುಗೊರವನ್ ಪಳಾಳಮನ್ ಏನೊಂದನಪ್ಪೊಡಮ್ ತಗುಳ್ಚಿ

ಗಳಿಪಿದೊಡೆ, ಆ ಬೇಳು ನುಡಿಗೇಳ್ದು ಕೆಮ್ಮನೆ ಬೇಳಲ್ ನಿಮಗೆ ಅಂತು ರಾಜಸೂಯಮ್ ಮೊಗ್ಗೇ. ಮುನ್ನಮ್ ಕೃತಯುಗದೊಳ್ ಸೋಮನ ವರುಣನ ರಾಜಸೂಯದ ಕಡೆಯೊಳ್ ದೇವಾಸುರ ಯುದ್ಧಮ್ ನೆಗಳೆ, ಹಿರಣ್ಯ ಕಾಳನೇಮಿಗಳ್ ಮೊದಲಾಗಿ ನೆಗಳ್ತೆಯ ದೈತ್ಯರೆಲ್ಲಮ್ ಎನ್ನ ಚಕ್ರಘಾತದೊಳ್ ಅಳ್ಗಿಮಳ್ಗಿದಂತಾದರ್. ಅದೊಂದು ಧರಾವನಿತೆಯ ಭಾರಾವತಾರದೊಳ್ ಎನಿತಾನುಮ್ ಘಸಣಿ ಪೋದುದು. ಅದು ಕಾರಣದಿನ್ ರಾಜಸೂಯದ ಮಾತನ್ ಕೇಳ್ದಲ್ಲಿಯೆ ಮಱೆವುದು, ನುಡಿಯಲ್ವೇಡ.

(ಎನೆ, ಮರುಮಾತುಗುಡಲ್ ಅಱಿಯದೆ ಧರ್ಮಪುತ್ರನ್ ಮೌನಗೊಂಡು ಉಸಿರದಿರೆ, ಪರಾಕ್ರಮಧವಳನ್ ಇಂತು ಎಂದನ್.)

**ಅರ್ಜುನ:** ಪಯೋನಿಧಿಪರೀತ ಮಹೀತಳಮ್ ಎಂಬುದು ಎನಿತು ಗಡಮ್. ಆಂಪ ಬೀರನ ಪೆಸರಾವುದು. ಈ ನುಡಿಯನ್ ಈ ಪದದೊಳ್ ಪೆಱಗಿಕ್ಕೆ, ನಾರದನ್ ಮನದೊಳೆ ಪೇಸುಗುಮ್. ಸುರಪನುಮ್ ನಗುಗುಮ್. ಅಯ್ಯನ ಮುಖಮ್ ಕಡುವಿನ್ನನಕ್ಕುಮ್. ಸರಸೀರುಹೋದರಾ, ಈ ಮಖಮನ್ ಎಂತು ಉಪೇಕ್ಷಿಸುವುದು.

(ಎಂದೊಡೆ ಭೀಮಸೇನನ್ ಇಂತು ಎಂದನ್.)

**ಭೀಮಸೇನ:** ಪನ್ನತರ ನಡುವನ್ ಉಡಿಯಲ್ಕೆ ಎನ್ನ ಭುಜಾರ್ಗಳಮೆ ಸಾಲ್ಗುಗುಮ್. ಒಸೆ ಮೇಣ್ ಮುನಿ ಮೇಣ್ ಎನ್ನ ನುಡಿ ಟಾತಡಾಢಣಮ್. ರಾಜಸೂಯಮ್ ಬೇಳಲ್ ಎನ್ನನ್ ಬೆಸಸುವುದು. (ಎಂದು ಗಜಱಿ ಗರ್ಜಿಸುವುದುಮ್ ಅಮಳರುಮ್...)

**ನಕುಲ/ಸಹದೇವ:** ಈ ಬೇಳ್ವೆಯ ಮಾತನ್ ತೆಮಳೆ ನುಡಿದೊಡೆ ಎಮ್ಮ ಗಂಡವಾತುಮ್ ಅಳುಂಬಮ್ ಭೃತಮಕ್ಕುಮೆಂದು ಮೆಯ್ ಮೆಯ್ಗೆ ಬೆಸಸು.

(ಎಂಬುದುಮ್...)

**ಕೃಷ್ಣ:** ರಾಜಸೂಯಮನ್ ಬೇಳ್ದಲ್ಲದೆ ಇರಿರಪ್ಪೊಡೆ, ಗಂಗಾನದಿಯ

ಬಡಗಣ ತಡಿಯ ಮಘಮಘಿಸುವ ವಾರಣಾಸಿ ಪುರಮನ್ ಆಳ್ವ ಬೃಹದ್ಬಳನ್ ಪುತ್ರೋತ್ಪತ್ತಿ ನಿಮಿತ್ತಮಪ್ಪೊಂದು ದಿವ್ಯಪಿಂಡಮನ್ ತನ್ನಿರ್ವರ್ ಅರಸಿಯರ್ಗೆ ಪಚ್ಚುಕೊಟ್ಟೊಡೆ, ಪುಟ್ಟಿದ ಎರಡು ಪೋಳುಮನ್ 'ಇವು ಏವುವು' ಎಂದು ಬಿಸುಡೆ, ಜರೆಯೆಂಬ ರಕ್ಕಸಿ ಕಂಡು ತಿನಲೆಂದು ಎರಡು ಪೋಳುಮನ್ ಒಂದು ಕೆಯ್ಯೊಳೆ ಪಿಡಿದೊಡೆ, ಒಂದೊಂದಱೊಳ್ ಸಂದಿಸಿ ಮಾನಸರೂಪುಗೊಂಡೊಡೆ, ಚೋದ್ಯಂಬಟ್ಟು ಜರಾಸಂಧನೆಂದು ಪೆಸರನಿಟ್ಟು ಬೃಹದ್ಬಳಂಗೆ ಕೊಟ್ಟೊಡೆ, ಜರಾಸಂಧನುಮ್ ಸಾಲ್ವಲನುಮ್ ಎಂಬ ದೈತ್ಯನುಮ್ ಒಂದಾಗಿ, ಮೂವತ್ತೆರಡು ಅಕ್ಷೋಹಿಣಿ ಬಲಮ್ ಬೆರಸು, ಮಧುರಾಪುರಕ್ಕೆ ವಂದು ಎನ್ನನ್ ಮುತ್ತಿಕೊಂಡಡೆ, ಉಪಾಯ ಬಲದೊಳೆ ಸಾಲ್ವನನ್ ಕೊಂದು, ಜರಾಸಂಧಂಗೆ ಅಳ್ಕಿ, ಮಧುರಾಪುರಮನ್ ಬಿಸುಟ್ಟು ಪೋಗಿ, ದ್ವಾರಾವತಿಯನ್ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದೆನ್. ಇನ್ನುಮ್ ಯಾದವರ ಸೆಱೆಗಳೆಲ್ಲ ಆತನಲ್ಲಿ ಇರ್ದರ್. ಆತನುಮ್ ಭೀಮನ ಕೆಯ್ಯೊಳಲ್ಲದೆ ಸಾಯನ್ ಎಂಬುದು ಆದೇಶಮ್. ಅದಱಿನ್ ಎಮ್ಮ ಇಚ್ಛೆಯುಮ್ ಸಮಸ್ತ ಬಲಮ್ ಬೆರಸು ಭೀಮಾರ್ಜುನರನ್ ಪೇಳ್ವುದು.

(ಎಂದು ಧರ್ಮಪುತ್ರನನ್ ಒಡಂಬಡಿಸಿ ನುಡಿದು, ಮಧುರಾ ಪುರಮನ್ ಎಯ್ದಿ, ಬೃಹದ್ಬಳತನೂಜನಲ್ಲಿಗೆ ಧರ್ಮ ಯುದ್ಧಮನ್ ಬೇಡಿ ಅಟ್ಟಿದೊಡೆ, ಕಲಿ ಮಾರ್ಕೊಳ್ಳದೆ ಕೊಟ್ಟು, ಮೆಯ್ಯೊಳೆ ಸಿಡಿಲ್ ತಾಪಂತೆವೋಲ್ ತಾಗೆ, ಮೆಯ್ಗಲಿ ಭೀಮನ್ ಪೆಱಪಿಂಗದೆ ಆಂತು, ಪಲವುಮ್ ಬಂಧಂಗಳಿಮ್ ತಳ್ತು, ತತ್ಕುಲಶೈಲಮ್ ಕುಲಶೈಲದೊಳ್ ಕಲುಷದಿನ್ ಪೋರ್ವಂತೆವೋಲ್ ಪೋರ್ದು, ನೆಯ್ದಿಲ ಕಾವನ್ ತುದಿಗೆಯ್ದೆ ಸೀಳ್ವ ತೆಱದಿನ್ ಜರಾಸಂಧನನ್ ಸೀಳ್ದನ್. ಅಂತು ದೃಢ ಕಠಿನ ಹೃದಯಬಂಧನನ್ ಜರಾಸಂಧನನ್ ಕೊಂದುಮ್, ಆತನ ಮಗನ್ ಕ್ಷೇಮಧೂರ್ತಿಯನ್ ರಾಜ್ಯದೊಳ್ ನಿಱಿಸಿ, ಜರಾಸಂಧನ್ ಏಱುವ ರಥಮನ್ ತರಿಸಿ, ಸಮಸ್ತ ವಸ್ತುಗಳನ್ ಕೊಂಡು, ಗರುತ್ಮನನ್ ನೆನೆದು ಬರಿಸಿ ರಥಮನ್ ಚೋದಿಸಲ್ ಪೇಳ್ದು, ಯಾದವರ ಸೆಱೆಗಳುಮನ್ ಮುಂದಿಟ್ಟು

ನಾರಾಯಣನ್ ಭೀಮಾರ್ಜುನರ್ ಬೆರಸು ಸುಖ ಪ್ರಯಾಣಮ್‌ಗಳಿಂದ ಇಂದ್ರಪ್ರಸ್ಥಕ್ಕೆ ಬಂದು ಧರ್ಮಪುತ್ರನನ್ ಕಂಡು..)

**ಕೃಷ್ಣ:** ಜರಾಸಂಧನ್ ಮುನ್ನಮ್ ಮಡಿದೊಡೆ ಇಳೆ ನಿಷ್ಕಂಟಕಮ್. ಅದರ್ಕೆ ಇನ್ ಇರಲ್ವೇಡ. ನಾಲ್ಕುಮ್ ದೆಸೆಗೆ ನಿಮ್ಮನುಜರನ್ ಬೆಸಸಿಮ್. ಭರಂಗೆಯ್ವಾಗಳ್ ನೀನ್ ಪೆಸರ್ವೆಸರೊಳ್ ನಾಲ್ವರುಮನ್ ಆದರಂಗೊಂಡು ಆ ನಾಲ್ಕುಮ್ ದೆಸೆಗೆ ಬೆಳ್ಕುಱುವಿನಮ್ ಬೆಸಸಿಮ್.

(ಅಂತು ಭೀಮಸೇನನ್ ಇಂದ್ರನ ಮೇಲೆ ವೇಳ್ವಂತೆ ಪೂರ್ವ ದಿಗ್ಭಾಗಕ್ಕೆ ವೇಳ್ದು; ನಕುಳನನ್ ಯಮನನ್ ಅದಿರ್ಪಲ್ವೇಳ್ವಂತೆ ದಕ್ಷಿಣ ದಿಶಾಭಾಗಕ್ಕೆ ಬೆಸಸಿ; ಸಹದೇವನನ್ ವರುಣನನ್ ಅದಿರ್ಪಲ್ ನಿಯಮಿಸುವಂತೆ ಪಶ್ಚಿಮ ದಿಗ್ಭಾಗಕ್ಕೆ ವೇಳ್ದು; ವಿಕ್ರಮಾರ್ಜುನನನ್ ಕುಬೇರನಿನ್ ಕಪ್ಪಂಗೊಳಲ್ ಸಮರ್ಪಿಸುವಂತೆ ಉತ್ತರೋತ್ತರಮಾಗಲ್ ಉತ್ತರದಿಶಾಭಾಗಕ್ಕೆ ಪೇಳ್ದಾಗಳ್...)



# ೩೧. ಶಿಶುಪಾಲನ ಕೊಲೆ

(೪೦ ನೆಯ ಗದ್ಯದಿಂದ ೬೬ ನೆಯ ಗದ್ಯ)

## ಪಾತ್ರಗಳು

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಗಾಂಗೇಯ:** ಶಂತನು ಮತ್ತು ಗಂಗಾದೇವಿಯ ಮಗ.

**ಶಿಶುಪಾಲ:** ಸಾತ್ವತಿಯ ಮಗ. ಚೇದಿ ದೇಶದ ರಾಜ.

**ಕೃಷ್ಣ:** ದ್ವಾರಾವವತಿ ಪಟ್ಟಣದ ಒಡೆಯ, ಪಾಂಡವರ ಹಿತ ಚಿಂತಕ.

## ಶಿಶುಪಾಲನ ಕೊಲೆ

ಅಂತು ನಿಜ ಧವಳಚ್ಛತ್ರ ಚಾಮರ ಸಿಂಹಾಸನಾದಿ ರಾಜ ಚಿಹ್ನೆಗಳ್ ಉಳಿಯೆ ಸರ್ವಸ್ವಮೆಲ್ಲಮನ್ ದಕ್ಷಿಣೆಗೊಟ್ಟು, ವ್ಯಾಸ ಗಾಂಗೇಯ ವಿದುರ ಬಾಹ್ಲೀಕ ಸೋಮದತ್ತ ಭಗದತ್ತ ಧೃತರಾಷ್ಟ್ರ ದ್ರೋಣ ಅಶ್ವತ್ಥಾಮ ಕೃಪ ಕುಲವೃದ್ಧರುಮನ್, ದುರ್ಯೋಧನ ದುಶ್ಶಾಸನ ಕರ್ಣ ಶಲ್ಯ ಶಕುನಿಗಳುಮನ್ ಅವರವರ ದಾನ ಸನ್ಮಾನಾದಿಗಳೊಳಮ್ ಸಂತಸಂಬಡಿಸಿ...

**ಧರ್ಮರಾಯ:** ಪೇಳಿಮ್ ಈ ಸಭೆಯೊಳ್ ಅಗ್ರಪೂಜೆಗೆ ಆರ್ ತಕ್ಕರ್.

(ಎನೆ, ಗಾಂಗೇಯನ್ ಇಂತು ಎಂದನ್.)

**ಗಾಂಗೇಯ:** ಬಲಿಯನ್ ಕಟ್ಟಿದನ್ ಆವನ್; ಈ ಧರಣಿಯನ್ ವಿಕ್ರಾಂತದಿಂದಮ್ ರಸಾತಲದಿಂದ ಎತ್ತಿದನ್ ಆವನ್; ಅಂದು ನರಸಿಂಹಾಕಾರದಿನ್ ದೈತ್ಯನನ್ ಚಲದಿನ್ ಸೀಳ್ದವನ್ ಆವನ್; ಅಬ್ಧಿಮಥನ ಪ್ರಾರಂಭದೊಳ್ ಮಂದರಾಚಲಮನ್ ತಂದವನ್ ಆವನ್; ಆತನೆ ವಲಮ್ ತಕ್ಕನ್ ಪೆಱರ್ ತಕ್ಕರೇ.

(ಎಂದು ತನ್ನ ಮನದೊಳ್ ಅಚ್ಯುತ್ತಿದಂತೆ ನುಡಿದ ಗಾಂಗೇಯನ ಮಾತನ್ ಮನದೆಗೊಂಡು ಯಮನಂದನನ್ ಆನಂದಮ್ ಬೆರಸಿ...)

**ಧರ್ಮರಾಯ:** ಅಂತೆ ಗೆಯ್ವೆನ್.

(ಎಂದು ಪುರುಷೋತ್ತಮಂಗೆ ಅರ್ಘ್ಯಮ್ ಎತ್ತಿದಾಗಳ್, ಶಿಶುಪಾಲನ್ ಮುಳಿದು ಆ ಸಭೆಯೊಳಗೆ ಮಹಾಪ್ರಳಯ ಜಳಧಿ ನಾದದಿನ್ ಇರದೆ ಉಚ್ಚಳಿಸಿ...)

**ಶಿಶುಪಾಲ:** ಧರ್ಮಸುತಾ, ಹರಿಗೆತ್ತಿದ ಅನರ್ಘ್ಯದ ಅರ್ಘ್ಯಮನ್...ತೆ...ಕಳೆ ಕಳೆ.

(ಎಂದು ನುಡಿದನ್. ಮತ್ತೆ ತನ್ನ ಆಕ್ರೋಶವನ್ನು ಕಾರುತ್ತಾ...)

ತೀವಿದ ನರೆಯುಮ್, ಡೊಳ್ಳುಮ್, ದೇವವ್ರತನ್ ಎನಿಸಿ ನೆಗಳ್ದ ಯಶಮುಮ್ ಬೆರಸು, ಇನ್ ಹರಿಗೆ ಅರ್ಘ್ಯಮನ್ ಈವುದು ಎಂದು ಆವನುಮ್ ಈ ಭೀಷ್ಮರಂತು ನುಡಿದರುಮ್ ಒಳರೇ. ಕುರುವೃದ್ಧನ್, ಕುಲವೃದ್ಧನ್, ಸರಿತ್ಸುತನ್ ತಕ್ಕನ್ ಎಂದು ನಂಬಿದ ಸಭೆಯೊಳ್ ದೊರೆಗೆಡಿಸಿ ನುಡಿದೊಡೆ, ಏನ್ ಒಲವರಮ್ ಎನ್ನದೆ, ನೀನುಮ್ ಅದನೆ ಕೊಂಡು ಎಸಗುವುದೇ. ಮನದೆ ಒಲವರಮ್ ಉಳ್ಳೊಡೆ, ಹರಿಗೆ ಅಗ್ರಪೂಜೆಯನ್ ಮನೆಯೊಳ್ ಕುಡು. ಯಜ್ಞದೊಳ್, ಈ ಮನುಜಾಧೀಶ್ವರ ಸಭೆಯೊಳ್ ದುರಾತ್ಮನನ್ ನೆನೆಯಲುಮ್ ಆಗದು. ಬೆಸಗೊಳ್ವಾ... ಎಗ್ಗು ಅಳವರಿಯದೆ ಬಳವಳ ಬಳೆವಿನೆಗಮ್, ಪಚ್ಚಪಸಿಯ ತುಱುಕಾರಂಗೆ ಅಗ್ಗಳಿಕೆಯನೆ ಮಾಡಿ, ನೀನುಮ್ ಭೂಪರ್ ಇನಿಬರ ಕೊರಲೊಳ್ ಪಳಿಯನ್ ಕಟ್ಟಿದೆಯೊ.

ದೇವರನ್ ಅಡಿಗೆಱಗಿಸಿ ಸಕಲ ಅವನಿತಳದ ಅದಟರನ್ ಪಡಲ್ವಡಿಸಿದ ಶೌರ್ಯ ಅವಷ್ಟಂಭದೊಳ್ ಆನ್ ಇರೆ, ಗೋವಳಿಗಂಗೆ ಅಗ್ರಪೂಜೆಯನ್ ನೀನ್ ಕುಡುವಾ. ಸಮಕಟ್ಟುಱಿಯದೆ ಹರಿಗೆ ಅರ್ಘ್ಯಮ್ ಎತ್ತಿ ನಿಂದಿರ್ದ ಯಜ್ಞಮದು, ಮೊದಲೊಳ್ ತಾನ್ ಅಮರ್ದುಮ್ ಅಮರ್ದನ್ ತಣಿಯುಂಡು ಗೋಮೂತ್ರದಿಂದೆ ಬಾಯ್ಪೂಸಿದವೊಲ್ ಅಮರ್ದಿರದೆ. ಕುಡವೇಳ್ವನ... ಕುಡುವನ... ಕುಡೆ ಪಡೆವನ ಪೆಂಪು ಏನ್ ನೆಗಳ್ತೆವಡೆಗುಮೊ. ಪೇಳ್ವನ್ ಕುಡವೇಳ್ಗೆಮ... ಕುಡುವ ಅಣ್ಣನ್ ಕುಡುಗೆಮ... ಕುಡೆ ಕೊಳ್ವ ಕಲಿಯನ್ ಅರಿಯಲಕ್ಕುಮ್.

(ಎಂದು ಅನಿತರೊಳ್ ಮಾಣದೆ ಗೀರ್ವಾಣಾರಿ ಅಸುರಾರಿಯನ್ ಇಂತು ಎಂದನ್.)

**ಶಿಶುಪಾಲ:** ಯುಧಿಷ್ಠರನ್ ಅರ್ಘ್ಯಮನ್ ಎತ್ತೆ ನಿನಗೆ ದೊರೆಯಕ್ಕುಮೆ.

ಶಂಖದೊಳ್ ಪಾಲೆಱೆದಂತಿರೆ ಮಲಿನಮಿಲ್ಲದ ಒಳ್ಗುಲದ ಅರಸುಗಳಿರೆ, ನೀನುಮ್ ಅಗ್ರಪೂಜೆಯನ್ ಆಂಪಾ ನಂದಗೋಪಾಲಸುತಾ, ಮನದ ಒಲವರದಿಂದೆ ಈ ಯಮತನಯನ ಕುಡುವ ಅಗ್ರಪೂಜೆ, ಮತ್ ಸನ್ನಿಧಿಯೊಳ್ ನಿನಗೆ ಅಶನಿಯ ಮಿಳ್ತುವ ನಂಜಿನ ದೊರೆಯೆಂದು ಒಣರ.

ನಿನಗೆ ಮನೆ ನಂದ ಗೋಪಾಲನ ಮನೆ. ನಿನಗೆ ಮನೆವೆಂಡತಿ ತುಱುಗಾರ್ತಿ. ಪಚ್ಚನೆ ಪಸಿಯ ಗೋವನಯ್. ಕರಮ್ ಅನಯದೆ ನಿನ್ನಳವಿಗೆ ಅಳವನಱಿಯದೆ ನೆಗಳ್ದೈ. ಮುರನ್ ಅಡಸಿ ಪಿಡಿದು ಕಟ್ಟಿದ ಪರಿಭವಮನ್ ಮಱೆದ. ನಿನ್ನ ಪೆಡಗಯ್ ಕಟ್ಟನ್ ಸರಿತ್ಸುತನ್ ಶರದಿನ್ ಬಿಡಿಸಿದನಲ್ಲನೆ. ಇನ್ನವು ಬನ್ನಮ್ ಎಂಬುದು ಒಳವೇ. ಎಲವೊ, ದನುಜಾಂತಕನೆಂಬ ಈ ನಿನ್ನ ನಚ್ಚುವೋದ ಅಂಕಮ್ ಎನ್ನನ್ನಮ್ ಮುನ್ನ ಪುಟ್ಟದೆ ನಿನಗೆ ಸಂದುದು. ಈ ಪೆಸರ್ ಎನ್ನ ಮುಂದೆಯುಮ್ ಸಂದಪುದೇ. ಆನ್ ಇರ್ದ ಸಭೆಯೊಳ್ ಅರ್ಘ್ಯಮನ್ ಆನಲ್ಕೆ ಆಟಿಸಿದ ನಿನ್ನ ಬಿಸುನೆತ್ತರನ್, ಇಂತು ಈ ನೆರವಿ ನೋಡೆ ಕುಡಿಯದೊಡೆ ಏನೋ... ಶಿಶುಪಾಲನ್ ಎಂಬ ಪೆಸರ್ ಎಸೆದಪುದೇ.

ಅಂದು ಮುಚುಕುಂದನೆಂಬನ ಮಱೆವೊಕ್ಕುದನ್ ಮಱೆದ ನೀನ್, ಜರಾಸಂಧಗಮ್ ಬಿಱುತು ಓಡಿದುದನ್ ಭೂತಳಮ್ ಅಱಿಯದೆ. ಎಲವೊ, ನೆನೆ ಗೋವುಗಾದುದು ಪುಸಿಯೇ. ಮೀನ್ ಆವೆ ಪಂದಿ ಎಂದು ಎನಿತಾನುಮ್ ತೆಱನಾಗಿ ಡೊಂಬ ವಿದ್ದೆಯನ್ ಆಡಲ್ ನೀನ್ ಅಱಿವೆ. ಉಱದೆ ಇದಿರ್ಚಿದೊಡೆ, ನಿನ್ನನ್ ಇಲ್ಲಿ ದೆಸೆವಲಿಗೆಯ್ಯಲ್ ಆನ್ ಅಱಿವೆನ್. ಅಱಿಯದೆ ಇದನ್ ಮಾಡಿದೆನ್, ಎನ್ನ ಅಱಿಯಮಿಕೆಗೆ ಸೈರಿಸು ಎಂದು ನೀನ್ ಸಭೆಯೊಳ್ ಕಾಲ್ಗೆ ಎಱಗೆಱಗು ಕೊಲ್ಲೆನ್.

(ಎಂದು ಎರ್ದೆ ತೆಱೆವಿನೆಗಮ್ ಹರಿಯ ನೆಱನನ್ ಅಸುರನ್ ನುಡಿದನ್. ಅಂತು ನುಡಿದು, ಕಾಯ್ಪಿನೊಳ್ ಪಿಡುಗಿ ನಡನಡ ನಡುಗಿ, ಪೊಳೆದು ಉಳ್ಕುವ ಕುಡುದಾಡೆಯ ಪೊಳಪು, ನೊಸಲ್ಗೆ ಅಡರ್ದು ಪೊಡರ್ವ ಪುರ್ವು ಎಸೆವಿನಮ್, ಅವ್ವಳಿಸುವ ಮುಳಿಸಿನ ದಳ್ಳುರಿಗಳನ್ ಉಗುಳ್ವವೊಲ್ ಅಸುರನ್ ಉರಿವ

ಪಳಿಗಳನ್ ಉಗುಳ್ದನ್. ಆಗಳ್ ಸಭಾಸದರ್ ಎಲ್ಲಮ್ ಎಲೆ ಮಿಡುಕದೆ ಪಂದೆಯನ್ ಪಾವ್ ಅಡರ್ದವೊಲ್ ಉಸಿರದಿರೆ, ನಾರಾಯಣನ್ ಶಿಶುಪಾಲನನ್ ಇಂತು ಎಂದನ್.)

**ಕೃಷ್ಣ:** ನಿನ್ನಯ ತಾಯ್ ಸಾತ್ವತಿಯುಮ್ ನಿನ್ನನ್ ತಂದು ಎನ್ನ ತೊಡೆಯ ಮೇಲೆ ಇಳಿಪುವುದುಮ್, ನಿನ್ನ ಲಲಾಟದ ಕಣ್ಣದು ಮುನ್ನಮೆ ಕಿಡೆ, ನಿನ್ನ ಮೃತ್ಯು ಎನ್ನಯ ಕೆಯ್ಯೊಳ್ ನೆಱೆದುದನ್ ಅಱಿದು, **"ಈ ಕಿಱಿಯವನ್ ಅಱಿಯದೆ ಕೆಡೆನುಡಿದನಪ್ಪೊಡಮ್, ನೂಱುವರಮ್ ನೆಱೆ ಸಲಿಸುವುದು"** ಎಂದುದನ್ ಆನ್ ಮಱೆವೆನೆ. ಬಯ್ ಬಯ್ಯೆ ನೂಱುವರಮ್ ಸಲಿಸುವೆನ್. ಮುನಿಯಲ್ ಎನಗೆ, ಆಗ ಗಾಂಗೇಯನ್ ಇರ್ದನ್. ಘಟೋದ್ಭವನ್ ನೆಗಳ್ದ ಪೃಥಾತನಯರುಮ್ ಇರ್ದರ್. ದುರ್ಯೋಧನನ್ ಇರ್ದನ್. ಆ ಬಲ್ಲವರುಮ್ ಕೇಳೆ ಪೇಳ್ವರ್.

(ಎನೆಯೆನೆ ಬಾಯ್ಗಮ್ ಬಂದನಿತುಮನ್ ಅಮರಾರಿ ಬಯ್ಯೆ, ನೂಱೆಂಬನಿತುವರಮ್ ಸೈರಿಸಿ ಮನ್ನಿಸಿ ನಸು ಕಿನಿಸದೆ, ಮಿಗೆ ಕಿನಿಸಿ ದಿತಿಜಕುಳದವದಹನನ್ ಮುಳಿದು, ತನಗೆ ಅರ್ಘ್ಯಮೆತ್ತಿದ ತಳಿಗೆಯೊಳ್ ಇಡೆ, ತಿಱಿದ ತೆಱದೆ ತಲೆ ಪಱಿದು, ಆಗಳ್ ತಳಿಗೆಯ ಮೇಲೆ ಕಳಕಳಸಿ ನಗುತುಮ್ ಇರ್ದುದು. ಅಸುರನ ಅದಟು ಇದೇನ್ ಅಚ್ಚರಿಯೋ.

ಅಂತು ಜವನ್ ಅರ್ಘ್ಯಮ್ ಎತ್ತಿದಂತೆ ಇರ್ದ ಶಿಶುಪಾಲನ ಶಿರೋಂಬುಜಮನ್ ಕಂಡು ಅಳಲ್ದು, ಆತನ ನಂಟರಪ್ಪ ಅಶ್ವಗ್ರೀವ ವಿದ್ಯುನ್ಮಾಲಿ ನೀಲಾದಿಗಳಪ್ಪ ಪ್ರಭೃತಿಗಳ್ ಎನಿಬರಾನುಮ್ ಮುರಾಂತಕನನ್ ಬಂದು ತಾಗಿದೊಡೆ, ಅಸುರವೈರಿ ಕರಚಕ್ರಮನ್ ತಿರಿಪಿ ದನುಜರ ತಲೆಗಳನ್ ಇಡೆ, ಪಱಿದು ಅಂಬರ ತಳಮನ್ ಎಯ್ದಿ, ಮೇಘದ ಪೊರೆವೊರೆಯೊಳ್ ತೊಡರ್ದು ತಲೆಗಳ್ ನೆಲಕ್ಕೆ ಬೀಳವೆ. ಅನಿತೊಂದು ಮಹಾಪ್ರಘಟ್ಟದೊಳ್ ಅಗ್ರಪೂಜೆಯನ್ ನಾರಾಯಣಂಗೆ ಕೊಟ್ಟು, ಅವಭೃಥ ಸ್ನಾನದೊಳ್ ಪಿರಿದುಮ್ ಒಸಗೆಯನ್ ಮಾಡಿ, ಯಾಗವಿಧಿಯನ್ ನಿರ್ವರ್ತಿಸಿ, ನೆರೆದ ರಾಜಕುಲಮ್ ಎಲ್ಲಮನ್ ಪೂಜಿಸಿ ವಿಸರ್ಜಿಸಿದಾಗಳ್, ಮುರಾಂತಕನ್ ಅಂತಕನಂದನನ್ ಇಂತು ಎಂದನ್.)

**ಕೃಷ್ಣ:** ಹಿಮಸೇತು ಪ್ರತಿಬದ್ಧ ಭೂವಳಯಮನ್ ನಿಷ್ಕಂಟಕಮ್ ಮಾಡಿ, ವಿಕ್ರಮಮ್ ತೋಱಿ, ನಿಜಾನುಜರ್ ನೆರಪಿದ ಒಂದೈಶ್ವರ್ಯದಿನ್, ರಾಜಸೂಯಮನ್ ಇಂದು ಅಗ್ಗಳದ ಅಗ್ಗಳಿಕ್ಕೆಯ ಮುಖಮ್ ತಾನ್ ಎಂಬಿನಮ್, ನಿನ್ನ ಕೀರ್ತಿ ಮುಖಮ್ ದಿಗ್ದಂತಿ ದಂತಂಗಳೊಳ್ ಕೀರ್ತಿಮುಖಂಬೊಲ್ ಏನ್ ಎಸೆದುದೋ.

(ಎಂದು ನುಡಿದ ಮಂದರಧರನನ್...)

**ಧರ್ಮರಾಯ:** ನಿನ್ನ ಅನುಗ್ರಹದೊಳ್ ಅದೇನ್ ಪಿರಿದು.

(ಎಂದು ವಸ್ತು ವಾಹನಂಗಳನ್ ಇತ್ತು, ದ್ವಾರಾವತಿಗೆ ಕಳಿಪಿ ಸುಖಸಂಕಥಾ ವಿನೋದಂಗಳೊಳ್ ರಾಜ್ಯಲಕ್ಷ್ಮಿಯನ್ ಅನುಭವಿಸುತ್ತ ಇರ್ಪಿನೆಗಮ್...)



# ೩೨. ಶಕುನಿಯ ಒಳಸಂಚು

(೬೭ ನೆಯ ಪದ್ಯದಿಂದ ೬೯ ನೆಯ ಗದ್ಯ)

## ಪಾತ್ರಗಳು

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಶಕುನಿ:** ಗಾಂಧಾರಿಯ ಸೋದರ. ಗಾಂಧಾರ ರಾಜ ಸುಬಲನ ಮಗ. ದುರ್ಯೋಧನನ ಸೋದರ ಮಾವ.

**ಪಾಂಡವರು:** ಧರ್ಮರಾಯ–ಭೀಮ–ಅರ್ಜುನ–ನಕುಲ–ಸಹದೇವ.

## ಶಕುನಿಯ ಒಳಸಂಚು

ಮೇಗಿಲ್ಲದ ಬಲ್ಲಾಳ್ತನದ ಆಗರಮ್ ಎನೆ, ನೆಗಳ್ದ ತತ್ ಪೃಥಾನಂದನರ ಉದ್ಯೋಗದ ಚಾಗದ ಯಾಗದ ಭೋಗದ ಮೈಮೆಗೆ ಸುಯೋಧನನ್ ಬೆಱಗಾದನ್. ಆಗಿ ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಳ್ ಮಂತಣಮ್ ಇರ್ದು...

**ದುರ್ಯೋಧನ:** ದಾಯಿಗರಪ್ಪೊಡೆ ಕರಮ್ ಪೆರ್ಚಿದರ್. ಅವರ ಪೆರ್ಚಿಂಗೆ ಏನ್ ಗೆಯ್ವಮ್. ಬಸನಗಳಮ್ ಸಮಕಟ್ಟುವಮ್ ಅಪ್ಪೊಡೆ, ಸಪ್ತವ್ಯಸನಂಗಳ್ ಅಯ್ವರುಮನ್ ಒಂದುಮ್ ಗೆಲ್ಲುವಲ್ಲವು; ರಾಷ್ಟ್ರವ್ಯಸನಮನ್ ಬಳವ್ಯಸನಮನ್ ಪಾರ್ವಮ್ ಅಪ್ಪೊಡೆ, ಅವು ಮುನ್ನಮ್ ಇಲ್ಲ; ಪರಮಂಡಳ ವ್ಯಸನಮನ್ ಆರಯ್ವಮ್ ಅಪ್ಪೊಡೆ, ಇತ್ತುಮ್ ತೆತ್ತುಮ್ ಬಾಳ್ವ ಮಂಡಳಮಲ್ಲದೆ ಕೀಱಿಯುಮ್ ಮೀಱಿಯುಮ್ ನೆಗಳ್ವ ಮಂಡಳಮ್ ಇಲ್ಲ; ಪೌರುಷಮನ್ ಸಮಕಟ್ಟುವಮ್ ಅಪ್ಪೊಡೆ, ಪೊಕ್ಕಿಱಿಯಲ್ ಅಣ್ಮುವರಿಲ್ಲ; ರಸದಾನಾದಿಗಳೊಳ್ ಛಿದ್ರಿಸುವಮಪ್ಪೊಡೆ, ಅವರ್ ಆಪ್ತವಂತರುಮ್ ಬುದ್ಧಿವಂತರುಮಾಗಿ ನೆಗಳ್ದರ್. ಇನ್ನಾವ ಮಾಳ್ಕೆಯೊಳ್ ಪಗೆಯನ್ ಕೆಯ್ಗೆ ಮಾಡುವಮ್ ಪೇಳಿಮ್.

(ಎನೆ, ಶಕುನಿ ಇಂತು ಎಂದನ್.)

**ಶಕುನಿ:** ಬೆಸಸಿದ ನಿನ್ನ ಮಾತಿನಿತುಮ್ ಅಂತುಟೆ ಪಾಂಡುಪುತ್ರರನ್ ಗೆಲ್ಲವು. ಬಸನದ ಒಡಂಬಡಮ್ ಮಱೆದುಮ್ ಆ ಯಮನಂದನನಲ್ತೆ ನೆತ್ತದೊಳ್ ಬಸನಿಗನ್. ಆತನನ್ ಬರಿಸಿ ನೆತ್ತಮನಾಡಿಸಿ ಈ ವಸುಮತಿಯನ್ ಗೆಲ್ದುಕೊಳ್ವಮ್. ಮನಂಬಸದೆ ಫಣೀಂದ್ರಕೇತನಾ ನೀನ್ ಬಳಿಯಟ್ಟು.

(ಎಂದು ನಾಳವಾಸಗೆಗಳನ್ ಮುನ್ನಮೆ ಸಮಕಟ್ಟಿ, **"ತಾಮುಮ್ ಆಮುಮ್ ಕೆಲವು ದೆವಸಮ್ ಗೋಷ್ಠಿಯೊಳಿರ್ಪಮ್ ಬರ್ಕೆ"** ಎಂದು ಬಳಿಯನ್ ಅಟ್ಟಿದೊಡೆ, ಅವರ ಮನದ ಪುಲ್ವಗೆಯನ್ ಪೊಲ್ಲಮೆಯುಮನ್ ಅಱಿಯದೆ, ಸಮಸ್ತಬಳೋದ್ಯುಕ್ತನಾಗಿ, ಶಕುನಂಗಳ ಕ್ರಮಮನ್ ಬಗೆಯದೆ **'ನಿಯತಿಃ ಕೇನ ಲಂಘ್ಯತೇ'** ಎಂಬ ನುಡಿಯನ್ ನನ್ನಿ ಮಾಡಿ, ಮದಗಜೇಂದ್ರಪುರಮನ್ ಎಯ್ದೆ ಬರೆ,

ಧೃತರಾಷ್ಟ್ರಾದಿ ಕುಲವೃದ್ಧರೊಡನೆ ದುರ್ಯೋಧನನ್ ಇದಿರ್ ಪೋಗಿ ಧರ್ಮಪುತ್ರಂಗೆ ಪೊಡೆವಟ್ಟು, ಭೀಮನನ್ ಸಮಾನ ಪ್ರತಿಪತ್ತಿಯೊಳ್ ಕಂಡು, ತನಗೆ ಪೊಡೆವಟ್ಟ ಮತ್ತಿನ ಮೂವರುಮನ್ ತೆಗೆದು ತಳ್ಕೈಸಿ ಪರಸಿ, ತನ್ನ ತಮ್ಮಂದಿರ್ ಎಲ್ಲರುಮನ್ ಅಯ್ವರ್ಗಮ್ ಪೊಡೆವಡಿಸಿ, ಪೊಳಲೊಳಗಣ್ಗೆ ವಂದು ರಾಜಮಂದಿರಮನ್ ಪೊಕ್ಕು ಪೃಥಾತನೂಜರ ಸಭಾಗೃಹದ ಅಂದಮನ್ ನೋಡಿ ಅಂತುಟಪ್ಪುದನ್ ಮಾಡಿಪೆನೆಂದು ಸಭಾಲಯಮನ್ ನಿಜರಾಜ ಲೀಲೆಯೊಳ್ ಕೂಡಿ, ಯುಧಿಷ್ಠಿರ ಪ್ರಭುಗೆ ಸುಯೋಧನನ್ ತಾನೆ ಉಯ್ದು ತೋಱಿದನ್.

ನೋಡಿರೆ, ಸಿಂಹ ಮಾಡುವರ ಬಾಲಮನ್ ಆಡಿದರ್ ಎಂಬ ಮಾಳ್ಕೆಯಿನ್, ಅಂತು ಸುಯೋಧನನ್ ತನ್ನ ವಿಭವಮುಮನ್ ವಿಳಾಸಮುಮನ್ ಪಾಂಡವರ್ಗೆ ಮೆಱೆದು, ಕಂದುಕ ಕ್ರೀಡಾದಿ ನಾನಾ ವಿಧ ವಿನೋದಂಗಳಿಮ್ ಕೆಲವು ದಿವಸಮನ್ ಇರ್ದು ಒಂದು ದಿವಸಮ್...)



# ೩೩. ದ್ಯೂತ ಪ್ರಸಂಗ–ಮೊದಲನೆಯ ಹಂತ

(೬೯ ನೆಯ ಗದ್ಯದಿಂದ ೭೪ ನೆಯ ಪದ್ಯ)

## ಪಾತ್ರಗಳು

**ಶಕುನಿ:** ಗಾಂಧಾರಿಯ ಸೋದರ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಭೀಮ:** ಪಾಂಡುರಾಜ ಮತ್ತು ಕುಂತಿಯ ಮಗ.

**ಗಾಂಗೇಯ:** ಶಂತನು ಮತ್ತು ಗಂಗಾದೇವಿಯ ಮಗ.

# ದ್ಯೂತ ಪ್ರಸಂಗ–ಮೊದಲನೆಯ ಹಂತ

ಒಂದು ದಿವಸಮ್ ತನಗೆ ಸಾವನ್ ಸಮಕಟ್ಟುವಂತೆ ಪಿಂಗಾಕ್ಷನ್ ಅಕ್ಷಕ್ರೀಡೆಯನ್ ಶಕುನಿಯೊಳ್ ಸಮಕಟ್ಟಿ ಪೂಡಲ್ ಪೇಳ್ದು, ಪುಸಿಯನೆ ಪೆಱರನ್ ಮುನ್ನಮ್ ಆಡಲ್ ಪೇಳ್ದು, ತಾನುಮ್ ಧರ್ಮಪುತ್ರನುಮ್ ಕೆಲದೊಳ್ ಇರ್ದು ನೋಡುತ್ತಿರೆ, ಶಕುನಿ ಇಂತು ಎಂದನ್.

**ಶಕುನಿ:** ನೋಡುವುದಱೊಳೇನ್ ತಮ್ಮುತಿರ್ವರುಮ್ ಅಳ್ತಿಯೊಳ್ ಆಡುತ್ತಿರಲಾಗ..

(ಎನೆ..)

**ದುರ್ಯೋಧನ:** (ಧರ್ಮರಾಯನನ್ನು ಕುರಿತು)

ನಾಮ್ ಆಡುವಮೆ ಬನ್ನಿಮ್.

(ಎಂಬುದುಮ್ ನೆತ್ತಮನ್ ಆಡುವ ಬಗೆ ಬಂದು ಧರ್ಮಸುತನ್...)

**ಧರ್ಮರಾಯ:** (ತನ್ನ ಮನದಲ್ಲಿಯೇ)

**“ಕರೆದೊಡೆ ಜೂದಿಂಗಮ್, ಧುರಭರಕೆ, ಆಖೇಟಕ್ಕೆ ಭೂಭುಜಂಗೆ ಮೆಯ್ಗರೆದಿರಲ್ ಆಗದು”** ಎಂಬ ಪುರಾತನ ಗುರು ವಚನಮ್ ತನಗೆ ನಿಟ್ಟೆ ಪಟ್ಟುದಱಿಂದಮ್ ಅಂತು ಪೂಡಿಕೊಂಡು...

(ನಾಳವಾಸಗೆಯನ್ ಇಕ್ಕಲ್ ಪೇಳ್ವುದುಮ್, ಶಕುನಿ ಮುನ್ನೆ ತನ್ನ ಮಾಡಿದ ನಾಳವಾಸಗೆಗಳನ್ ಅರಸಾಳಂತೆ ಕಣ್ಣಱಿದು ಮೆಟ್ಟಿ, ಮಟ್ಟಮ್ ಅಱಿದು ಇಕ್ಕುವಾಗಳ್...)

**ಶಕುನಿ:** ಒಡ್ಡಮನ್ ಪೇಳಿಮ್.

**ದುರ್ಯೋಧನ:** ಪೊಳ್ತು ಪೋಗಿಂಗಮ್, ಅಳ್ತಿಗಮ್ ಆಡುವ ತಮ್ಮುತಿರ್ವರುಮ್

ಪಲಗೆಗೆ ಸಾಯಿರ ಗದ್ಯಾಣದ ಪೊನ್ನೆ ಸಾಲ್ಗುಮ್. ಅಗ್ಗಳಮ್ ಬೇಡ...

(ಎಂದು ಒಕ್ಕಲನ್ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯನ್ ಪೊರಳ್ಚಿ, ಮುನ್ನಮ್ ನೆತ್ತಮನ್ ಅರಿಯದನಂತೆ ಅವರ ದಾಯಮನ್ ಆಡೆ, ಮಡಿಮಡಿಗುಱುವುದುಮ್ ಒಂದು ಪತ್ತೆಂಟು ಪಲಗೆಯನ್ ಮೆಳ್ಪಡಿಸಲೆಂದು ಸೋಲ್ತು ಸೋಲದೊಳ್ ಏವಯಿಸಿ...)

**ದುರ್ಯೋಧನ:** ಇನ್ನೊಡ್ಡಮ್ ಕೊಳ್ಳಿಮ್ ಪಲಗೆಗೆ ಪತ್ತು ಸಾಯಿರಮೆ ಗದ್ಯಾಣಮ್.

(ಎಂದು ಇರದೆ ಒಡ್ಡಿ, ತಾಮ್ ಎರಳ್ವಲಗೆಯನ್ ಆಡಿ ಸೋಲ್ತೊಡೆ, ಸುಯೋಧನನ್ ಓವದೆ ಧರ್ಮಪುತ್ರನುಮ್ ಕುಲಧನ ಸಂಕುಲಂಗಳನೆ ತಂದಿಡೆ, ಇಟ್ಟು... ಅವನ್ ಮುಂದೆ ಭಾರತದೊಳ್ ಒಡ್ಡುವುದನ್ ಕಡುನನ್ನಿ ಮಾಳ್ಪವೋಲ್ ಆಕುಲಮತಿ ಆಡಿ ಸೋಲ್ತನ್

ಅಂತು ಕಾಳಿಂಗ ಅಂಗ ವನಸಂಭವಂಗಳಪ್ಪ ಮಧಾಂಧಗಂಧ ಸಿಂಧುರಂಗಳುಮನ್, ಆಜಾನೇಯ ಕಾಂಭೋಜ ಭೂಮಿಜಂಗಳಪ್ಪ ಜಾತ್ಯಶ್ವಂಗಳುಮನ್ ಒಡ್ಡಿದಾಗಳ್, ದುರ್ಯೋಧನನ್ ಬಂದಿಕಾರನಂತೆ ಸೆಱೆಗೆಯ್ದುಮ್, ವ್ರಣವೈದ್ಯನಂತೆ ಕೊಡಸಾರಿಯನ್ ಪಿಡಿದುಮ್, ಸೂಳೆಯಂತೆ ಕಳಿವುಳಿವನ್ ಅಱಿದುಮ್, ರಸವಾದಿಯಂತೆ ಕಟ್ಟಿಯುಮ್, ಪೆರ್ಜೋಡೆಯಂತೆ ನುಣ್ಣಿತಮ್ ವೇಳ್ದು, ಅಣುಗಾಳಂತೆ ದಾಯಂಬಡೆದುಮ್, ಮೇಳದ ಅಂಕದಂತೆ ಸುಳಿಯಱಿದುಮ್, ಡೊಂಬರ ಕೋಡಗದಂತೆ ಆಡಿ ಗೆಲ್ವಾಗಳ್, ತಮ್ಮಣ್ಣನ ಸೋಲಮನ್ ಕಂಡು ಆಗಳ್ ಭೀಮಸೇನನ್ ಇಂತು ಎಂದನ್.)

**ಭೀಮ:** ಭಯಮ್ ಅಱಿಯದ ಕಲಿಯುಮ್ ಚಾಗಿಯುಮ್ ಎನಿಸದೆ, ನಾಡೆ ಲೋಭಿಯುಮ್ ಪಂದೆಯುಮ್ ಆಗಿಯೆ ಬಾಳ್ವಂಗಲ್ಲದೆ, ಸೂಳೆಯ ಕಣ್ ಪಾಸಗೆಯ ಕಣ್ಣುಮ್ ಏನ್ ಉಱುಗುಗುಮೇ...

(ಎಂದು ಕಯ್ಪು ಸರಮ್ ಬೆರಸು ನುಡಿದ ಭೀಮಸೇನನ ನುಡಿಗಳ್ ಕಿಡಿಗಳಂತೆ ತನ್ನ ಮನಮನ್ ಒನಲಿಸೆಯುಮ್, ಎರ್ದೆಯನ್ ಕನಲಿಸೆಯುಮ್, ಏನುಮ್ ಎನ್ನದೆ ಮುಂತಣ ಕಜ್ಜಮನೆ ಬಗೆದು ಉಸಿರದೆ ಇರ್ದ ದುರ್ಯೋಧನಲ್ಲಿಗೆ ಗಾಂಗೇಯನುಮ್ ವಿದುರನುಮ್ ಬಂದು...)

**ಗಾಂಗೇಯ:** ಸಾಲದೆ ಜೂದು. ನಿಮ್ಮೊಳಗೆ ಇದೇನ್ ಗಳ... ಮಾಣಿಸಿಮ್.

(ಎಂದೊಡೆ ಅನ್ಯ ಭೂಪಾಲ ಕಿರೀಟ ತಾಟಿತಪದನ್ ಯಮನಂದನನ್...)

**ಧರ್ಮರಾಯ:** ಅಜ್ಜ, ಸೋಲದೊಳ್ ಆದಮ್ ಏವಯಿಸಿದೆನ್. ನುಡಿಗೆ ಇನ್ ಎಡೆಯಿಲ್ಲ. ಪೋಗಿಮ್ ಆತ್ಮಾಲಯಕೆ..

(ಎಂದೊಡೆ ಏನುಮ್ ಎನಲ್ ಅಣ್ಮದೆ, ಬಾರಿಸಲ್ ಅಣ್ಮದೆ ಇರ್ವರುಮ್ ಧೃತರಾಷ್ಟ್ರನಲ್ಲಿಗೆ ಪೋಗಿ...)



# ೩೪. ಗಾಂಗೇಯ ಮತ್ತು ವಿದುರರ ಪ್ರಯತ್ನ

(ಷಷ್ಠಾಶ್ವಾಸದ ೭೫, ೭೬, ೭೭ ನೆಯ ಪದ್ಯಗಳು
ಮತ್ತು ಸಪ್ತಮಾಶ್ವಾಸದ ಪದ್ಯ ೧, ೨ನೆಯ ಗದ್ಯ)

## ಪಾತ್ರಗಳು

ವಿದುರ: ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ

ಗಾಂಗೇಯ: ಶಂತನು ಮತ್ತು ಗಂಗಾದೇವಿಯ ಮಗ

ಧೃತರಾಷ್ಟ್ರ: ಹಸ್ತಿನಾವತಿಯ ರಾಜ. ದುರ್ಯೋಧನನ ತಂದೆ

# ಗಾಂಗೇಯ ಮತ್ತು ವಿದುರರ ಪ್ರಯತ್ನ

ಇರ್ವರುಮ್ ಧೃತರಾಷ್ಟ್ರನಲ್ಲಿಗೆ ಪೋಗಿ

**ವಿದುರ:** ನಿನಗೆ ಮಗನ್ ಪುರಾಕೃತದ ಕರ್ಮಮೆ ಪುಟ್ಟುವವೋಲೆ ಪುಟ್ಟಿ, ನಿಮ್ಮಿನಿಬರುಮನ್ ರಸಾತಳದೊಳ್ ಅಳ್ದಿದಪನ್. ಪಾಂಡುನಂದನರೊಳ್ ಪಗೆ ಪೊಲ್ಲ. ಅಹೀಂದ್ರಕೇತನನ ಜೂದಿನ ಗೆಲ್ಲಮ್ ಅದು ಎಂತುಟೆನ್ನ... ನಂಜಿನ ಸವಿಯಂತುಟು ಎಂದೊಡೆ ಇನಿಸು ಅಂತದೊಳ್ ಅಂತಕನಲ್ಲಿಗೆ ಅಟ್ಟುಗುಮ್. ಪುರುಡಿಸಿ ಕೊಂಡೀಗಳ್ ನೀನ್ ಅರಸಿನ ಗರ್ವದೊಳೆ ಬೀಗಿ ಬೆಸೆಯದೆ, ಮಗನನ್ ಕರೆದು ಮುನ್ ಗೆಲ್ದ ವಸ್ತು ವಾಹನ ಚಯಮನ್ ಯುಧಿಷ್ಠರಂಗೆ ಒಪ್ಪಿಸವೇಳ.

**ಗಾಂಗೇಯ:** ಕದನ ಪ್ರಾರಂಭ ಶೌಂಡನ್, ರಿಪುನೃಪಬಲ ದಾವಾನಲನ್, ವೈರಿಭೂಭೃತ್ ಮದವತ್ ಮಾತಂಗ ಕುಂಭಸ್ಥಳ ದಳನ್, ಖರ ಉಗ್ರ ಅಸಿ ಪಂಚಾಸ್ಯಧೈರ್ಯನ್, ವಿದಿತ ಪ್ರತ್ಯಕ್ಷನ್, ಆಶಾಕರಿ ನಿಕಟತಟಶ್ರಾಂತ ದಾನನ್, ವಿಕ್ರಾಂತತುಂಗನ್ ಹರಿಗನಿರೆ ಭರಂಗೆಯ್ದು ಇದಿರೊಳ್ ಬಿಗುರ್ತು ಆಂಪ ಗಂಡನ್ ಆವನ್. ಶ್ರೀರಮಣೀ ರಮಣಂಗೆ, ಅರಿನಾರೀ ವೈಧವ್ಯ ದಿವ್ಯ ದೀಕ್ಷಾ ದಕ್ಷಂಗೆ, ಹರಿಗಂಗೆ ಆರ್ ಎಣೆ. ಅಂಧ ನರೇಂದ್ರಾ, ಈಗಡೆ ನೀನ್ ನಿನ್ನ ಮಗನನನ್ ಬಾರಿಸು. ತೋಳ್ವಲಮ್ ಶರಣ್ಗೆ ವಂದರನ್ ಕಾದುದು. ಬಲವವತ್ ಅರಿನೃಪತಿಗೆ ಕಾಲಾಗ್ನಿ ಆದುದು. ನೆಲಕ್ಕೆ ಕಾಪಾದುದು. ತೋಳ್ವಲಮ್ ಈ ದೊರೆತೆನೆ, ಮರುಳೆ ಹರಿಗನೊಳ್ ಪಗೆಗೊಳ್ವಾ.

(ಎಂದು ಎನಿತಾನುಮ್ ತೆಱದೊಳೆ ಸಾಱಿಯುಮ್ ಕೀಱಿಯುಮ್ ನುಡಿದೊಡೆ, ಧೃತರಾಷ್ಟ್ರನ್ ಮಗನಲ್ಲಿಗೆ ವಂದು ಜಡಿದು ನುಡಿದುಮ್ ಏಗೆಯ್ದುಮ್ ಒಡಂಬಡಿಸಲಾಱದಿರೆ...) ❖

# ೩೫. ದ್ಯೂತ ಪ್ರಸಂಗ–ಎರಡನೆಯ ಹಂತ

(೨ ನೆಯ ಗದ್ಯದಿಂದ ೧೬ ನೆಯ ಗದ್ಯ)

## ಪಾತ್ರಗಳು

| | |
|---|---|
| **ಧೃತರಾಷ್ಟ್ರ:** | ಹಸ್ತಿನಾವತಿಯ ರಾಜ. |
| **ದುರ್ಯೋಧನ:** | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. |
| **ಧರ್ಮರಾಯ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ದ್ರೌಪದಿ:** | ಅರ್ಜುನನ ಹೆಂಡತಿ. |
| **ದುಶ್ಯಾಸನ:** | ದುರ್ಯೋಧನನ ತಮ್ಮ. |
| **ಗಾಂಗೇಯ:** | ಶಂತನು ಮತ್ತು ಗಂಗಾ ದೇವಿಯ ಮಗ. |
| **ದ್ರೋಣ:** | ಕೌರವರು ಮತ್ತು ಪಾಂಡವರ ವಿದ್ಯಾಗುರು. |
| **ಕೃಪ:** | ಕೌರವರು ಮತ್ತು ಪಾಂಡವರ ವಿದ್ಯಾಗುರು. |
| **ಭೀಮ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ವಿದುರ:** | ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ. |
| **ಪ್ರತಿಕಾಮಿ:** | ಕರ್ಣನ ಸೇವಕ |

# ದ್ಯೂತ ಪ್ರಸಂಗ–ಎರಡನೆಯ ಹಂತ

ಧೃತರಾಷ್ಟ್ರನ್ ಮಗನಲ್ಲಿಗೆ ವಂದು, ಜಡಿದು ನುಡಿದುಮ್, ಏಗೆಯ್ದುಮ್ ಒಡಂಬಡಿಸಲಾಱದಿರೆ... ಯುಧಿಷ್ಠರನ್ ತಲೆಗವಿವನಲ್ಲದೆಯುಮ್, ಏವದೊಳ್ ತಲೆಗವಿದು, ಸಿಗ್ಗನ್ ಕೊಂಡಾಡಿ ನೆತ್ತಮನ್ ಆಡಿ ವ್ಯಾಳ ಗಜಂಗಳನ್, ಅಗ್ಗದ ಸೂಳೆಯರ ಒಕ್ಕಲನ್, ಅನರ್ಘ್ಯ ವಸ್ತುಗಳನ್ ಇಳಾಪಾಳನ್ ಸೋಲ್ತೊಡೆ, ಜೂದಿನ ಕೇಳಿಯನ್ ಆ ಕೇಳಿಯನ್ ಅನಿತಱೊಳ್ ಮಾಣಿಸಿದರ್. ಮಾಣಿಸಿದೊಡೆ ಮಾಣದೆ...

**ದುರ್ಯೋಧನ:** ರಪಣಮನ್ ತೋಱಿಯುಮ್, ಒತ್ತೆಯನ್ ಉಗ್ಗಡಿಸಿಯುಮ್ ಆಡಿಮೆ ಎನೆ.

(ಪೆಱತೇನುಮ್ ಉಪಾಯಮಿಲ್ಲದೆ...)

**ಧರ್ಮರಾಯ:** ಎಮ್ಮಾಳ್ವ ನೆಲನ್ ಒತ್ತೆ.

(ಎಂದೊಡೆ ಬಗೆದು ನೋಡಿ...)

**ದುರ್ಯೋಧನ:** (ತನ್ನ ಮನದಲ್ಲಿಯೇ...)

ಗೆಲ್ದಿಮ್ ಬಳಿಯಮ್ ಮುದುಗಣ್ಗಳ್ ಮಗುಳೆ ಕುಡಿಸುವರ್.

ಎಂಬ ಬಗೆಯೊಳಮ್...

ವಿಕ್ರಮಾರ್ಜುನನುಮ್ ಭೀಮನುಮ್ ಯಮಳರುಮ್ ಎಳೆದುಕೊಳ್ವರ್ ಎಂಬ ಸಂಕೆಯೊಳಮ್...

(ಧರ್ಮರಾಯನನ್ನು ಕುರಿತು...)

ಅಂತಲ್ತು, ನಿನ್ನ ನನ್ನಿಯೊಳಮ್ ವರ್ಷಾವಧಿಯೊಳಲ್ಲದೆ ನೆಲನನ್ ಒತ್ತೆವಿಡಿಯೆನ್.

(ಎಂದೊಡೆ...)

**ಧರ್ಮರಾಯ:** ಪನ್ನೆರಡು ವರುಷಂಬರಮ್ ನಾಡನ್ ಪುಗದೆ ಅರಣ್ಯದೊಳ್ ಇರ್ಪಂತುಮ್... ಅಜ್ಞಾತವಾಸಮ್ ಎಂದು ಒಂದು ವರುಷದೊಳ್ ಆರಾನುಮ್ ಅಱಿದರಪ್ಪೊಡೆ, ಮತ್ತಮ್. ದ್ವಾದಶಾಬ್ದಂಬರಮ್ ನಾಡ ದೆಸೆಯನ್ ನೋಡದಂತಾಗೆ ಒಂದೆ ಪಲಗೆಯೊಳೆ ಗೆಲ್ಲ ಸೋಲಮ್.

(ಅಪ್ಪಂತು ನನ್ನಿ ನುಡಿದು ನೆಲನನ್ ಒತ್ತೆಯಿಟ್ಟು ಆಡಿ, ಆ ಪಲಗೆಯುಮನ್ ಸೋಲ್ತು, ಮಹೀಪತಿ ಚಲದಿನ್ ಬಳಿಕ್ಕೆ ಆ ದ್ರೌಪದಿಯುಮನ್ ಸೋಲ್ತನ್ ಗಡಮ್. ಪಾಪದ ಫಳಮ್ ಎಯ್ದೆವಂದ ದೆವಸದೊಳ್ ಆರ್ಗಮ್ ಏನೇನಾಗದೊ..ಅಂತು ದುರ್ಯೋಧನನ್ ಅಜಾತಶತ್ರುವಿನ ಸರ್ವಸ್ವಮೆಲ್ಲಮನ್ ಗೆಲ್ದು...)

**ದುರ್ಯೋಧನ:** ಗೆಲ್ದ ಕಸವರಮೆಲ್ಲಮ್ ಬಂದುದು. ಪಾಂಚಾಳರಾಜ ತನುಜೆಯೊರ್ವಳ್ ಬಂದಳಿಲ್ಲ. ಆಕೆಯನ್ ತನ್ನಿಮ್.

(ಎಂದು ಯುಧಿಷ್ಠಿರನ್ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲದುದನ್ ಅಱಿದು, ಮೇಗಿಲ್ಲದ ಗೊಡ್ಡಾಟಮ್ ಆಡಲ್ ಬಗೆದು, ಕರ್ಣನ ಲೆಂಕನ್ ಪ್ರತಿಕಾಮಿ ಎಂಬನುಮನ್ ತನ್ನ ತಮ್ಮನ್ ದುಶ್ಶಾಸನನುಮನ್ ಪೇಳ್ದೊಡೆ, ಅವಂದಿರ್ ಆಗಳೆ ಬೀಡಿಂಗೆವರಿದು...)

**ದ್ರೌಪದಿ:** ರಜಸ್ವಲೆಯಾಗಿರ್ದೆನ್ ಮುಟ್ಟಲಾಗದು.

(ಎನೆಯುಮ್, ಒತ್ತಂಬದಿಂದ ಒಳಗಮ್ ಪೊಕ್ಕು, ಪಾಂಚಾಳಿಯನ್ ಕಣ್ಗಿಡೆ ಜಡಿದು, ಮುಡಿಯನ್ ಪಿಡಿದು ತನ್ಮಧ್ಯದಿನ್ ಸುಯೋಧನನ ಸಭಾ ಮಧ್ಯಕ್ಕೆ ತಂದು, ಅಮರಾಪಗಾಸುತ ಕೃಪ ದ್ರೋಣಾದಿಗಳ್ ಮನದೊಳ್ ನೊಂದು...)

**ಗಾಂಗೇಯ/ಕೃಪ/ದ್ರೋಣ:** ಬೇಡ ಬೇಡ..

(ಎನೆಯುಮ್ ಮಾಣದೆ...)

**ದುಶ್ಶಾಸನ:** ತೊಳ್ತೆ... ತೊಳ್ತುವೆಸಕೆಯ್. ನೀನ್ ಪೋ ಪೋಗು.

(ಎಂದು ಎನಿತಾನು ತೆಱದಿಂದೆ ಬಯ್ದು, ಉಟ್ಟುದುವರಮ್ ಕೆಯ್ದಂದು, ದುಶ್ಶಾಸನನ್ ತನಗಮ್ ಮೆಲ್ಲನೆ ಮೃತ್ಯು ಸಾರೆ ಕೃಷ್ಣೆಯಾ ಧಮ್ಮಿಲ್ಲಮನ್ ತೆಗೆದನ್. ಅಂತು ಕೃಷ್ಣೆಯ ಕೃಷ್ಣಕಬರೀಭಾರಮನ್ ಮೇಗಿಲ್ಲದೆ ಪಿಡಿದು ತೆಗೆದು, ಕೃಷ್ಣೋರಗನನ್ ಪಿಡಿದ ಬೆಳ್ಳಾಳಂತೆ ಉಮ್ಮನೆ ಬೆಮರುತ್ತುಮಿರ್ದ ದುಶ್ಶಾಸನನುಮನ್, ಕಣ್ಸೆತ್ತಿ ಕಿಱುನಗೆ ನಗುವ ಕೂರದರ ಮೊಗಮುಮನ್, ತಮ್ಮಣ್ಣನ ಬಿನ್ನನಾದ ಮೊಗಮುಮನ್ ಕಂಡು, ಕಣ್ಗಳಿನ್ ನೆತ್ತರ್ ತುಳುಂಕೆ, ಕೋಪದ ಪೆರ್ಚಿನೊಳ್ ನಡುಗುವ ಊರುಯುಗಮ್, ಕಡುಪಿಂದೆ ಅರಲ್ವ ನಾಸಾಪುಟಮ್, ಎಕ್ಕೆಯಿಮ್ ಪೊಡರ್ವ ಪುರ್ವು, ಪೊದಳ್ದ ಲಯಾಂತಕ ತ್ರಿಶೂಲೋಪಮ ಭೀಷಣ ಭ್ರುಕುಟಿ, ಮುನ್ನಮೆ ರೌದ್ರಗದಾಯುಧಂಬರಮ್ ಪೋಪ ಭೀಮಸೇನನಾ ಭುಜಾರ್ಗಳಮ್ ರಿಪುಗಳ ಗ್ರಹಮಾದುದು.

ನೆಲನನ್ ನುಂಗುವ, ಮೇರುವನ್ ಪಿಡಿದು ಕೀಳ್ವ, ಆಶಾಗಜೇಂದ್ರಗಳನ್ ಚಲದಿನ್ ಕಟ್ಟುವ, ಸಪ್ತ ಸಪ್ತಿಯನ್ ಇಳಾಭಾಗಕ್ಕೆ ತರ್ಪ ಒಂದು ತೋಳ್ವಲಮುಮ್ ಗರ್ವಮುಮ್ ಉಣ್ಮಿ ಪೊಣ್ಮೆ, ಮನದೊಳ್ ಕೋಪಾಗ್ನಿ ಕೆಯ್ಗಣ್ಮಿ ಕಣ್ಮಲರೊಳ್ ಬಂದಿರೆ, ಕಲುಷದಿನ್ ಗಾಂಡೀವಿ ಗಾಂಡೀವಮನ್ ನೋಡಿದನ್. ಪ್ರಕುಪಿತ ಮೃಗಪತಿ ಶಿಶು ಸನ್ನಿಕಾಶರ್, ಅತಿ ವಿಕಟ ಭೀಷಣ ಭ್ರೂಭಂಗರ್ ನಕುಲ ಸಹದೇವರ್ ಇರ್ವರುಮ್ ಅಕಾಲ ಕಾಲಾಗ್ನಿರೂಪಮನ್ ಕೆಯ್ಕೊಂಡರ್.

ಅಂತು ಪ್ರಳಯಕಾಲ ಜಳನಿಧಿಗಳಂತೆ ಮೇರೆದಪ್ಪಲ್ ಬಗೆದ ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮನ್ ಕಂಡು, ತನ್ನ ನುಡಿದ ನನ್ನಿಯ ಕೇಡನ್ ಬಗೆದರೆಂದು ಕಟಾಕ್ಷ ವಿಕ್ಷೇಪದಿನ್ ಬಾರಿಸೆ, ಅನಿತೊಂದು ಉರ್ಕಿನೊಳ್ ಉರ್ಕಿ ಕೌರವ ಖಳರ್ ಪಾಂಚಾಳರಾಜಾತ್ಮಜಾನನ ಪದ್ಮಗ್ಲಪನೈಕ ಕಾರಣಪರರ್ ತಾಮಾಗೆಯುಮ್, ಮತ್ತಮ್ ಅಣ್ಣನ ಕಣ್ಸನ್ನೆಗೆ ಮೀರಲ್ ಅಣ್ಮದೆ ಪೃಥಾಪುತ್ರರ್ ಸಮಂತು ಇರ್ದರ್.

ಇನಿತೊಂದು ಆದೊಡಮ್ ಏನ್ ಮಹಾಪುರುಷರ್ ಆಜ್ಞಾಲಂಘನಮ್ ಗೆಯ್ವರೇ. ಆಗಳ್ ದ್ರೌಪದಿ ತನ್ನ ಕೇಶಪಾಶಮನ್ ದುಶ್ಶಾಸನನ್ ಪಿಡಿದು ತೆಗೆದನ್ ಎಂಬ ಸಿಗ್ಗು ಅಗ್ಗಳಮ್ ಪೆರ್ಚೆ ಸಭೆಯೊಳ್ ಇಂತು ಎಂದಳ್.)

**ದ್ರೌಪದಿ:** ಮುಡಿಯನ್ ಪಿಡಿದು ಎಳೆದವನನ್ ಮಡಿಯಿಸಿ, ಮತ್ತೆ ಅವನ ಕರುಳ ಪಿಣಿಲಿಂದೆ ಎನ್ನನ್ ಮುಡಿಯಿಸುವಿನೆಗಮ್, ಮುಡಿಯನ್ ಮುಡಿಯೆನ್ ಗಡ. ಕೇಳಿಮ್, ಈಗಳ್ ಆನ್ ನುಡಿ ನುಡಿದೆನ್.

(ಎಂಬುದುಮ್, ಆ ಮಾತನ್ ಭೀಮಸೇನನ್ ಕೇಳ್ದು ಸೈರಿಸಲಾಱದೆ, **"ಆಱದ ಕೋಪ ಪಾವಕನಿನ್ ಅಣ್ಣನ ನನ್ನಿಯನ್ ಇಲ್ಲಿ ಮೀಱುವೆನ್ ಮೀರೆನ್"** ಎನುತ್ತುಮಿರ್ಪ ಪದದಲ್ಲಿಯೆ, ನೋಡ... ದ್ರುಪದರಾಜಸುತಾ ವಚನಂಗಳ್ ಮರುಳ್ಗೆ ಧೂಪಮನ್ ತೋಱಿದ ಮಾಳ್ಕೆಯಿನ್ ಅಲ್ಲಿ ಮೆಯ್ದೋಱಿ, ಮರುತ್ಸುತನ್ ಆ ಸಭೆಯೊಳ್ ನವ ಮೇಘನಾದದಿನ್ ನುಡಿದನ್.)

**ಭೀಮ:** ಪಂಕೇಜ ಪತ್ರೇಕ್ಷಣೇ, ಮುಳಿಸಿಂದಮ್ ನುಡಿದೊಂದು ನಿನ್ನ ನುಡಿ ಸಲ್ಗೆ. ಆರ್ ಆಗದೆಂಬರ್. ಮಹಾಪ್ರಳಯ ಉಲ್ಕೋಪಮ ಮದ್ಗದಾಹತಿಯಿನ್ ಅತ್ಯುಗ್ರಾಜಿಯೊಳ್ ಮುನ್ನ ಈ ಖಳ ದುಶ್ಶಾಸನನನ್ ಪೊರಳ್ಚಿ, ಬಸಿಱಮ್ ಪೋಳ್ದಿಕ್ಕಿ, ಬಂಬಲ್ಗರುಳ್ಗಳಿನ್ ಆನಲ್ತೆ ವಿಳಾಸದಿನ್ ಮುಡಿಯಿಪೆನ್. ದುಶ್ಶಾಸನೋರಸ್ಥಲಮನ್ ಅಗಲೆ ಪೋಳ್ದು ಆರ್ದು ಕೆನ್ನೆತ್ತರನ್ ಕುಡಿವೆನ್. ಪೊಕ್ಕು ಉಡಿವೆನ್ ಪಿಂಗಾಕ್ಷನ ಊರುದ್ವಯಮನ್ ಉರು ಗದಾಘಾತದಿನ್. ನುಚ್ಚುನೂಱಾಗೊಡೆವೆನ್ ತದ್ರತ್ನ ರಶ್ಮಿ ಪ್ರಕಟ ಮಕುಟಮನ್. ಪಂಕೇಜವಕ್ತ್ರೇ, ನಂಬುನಂಬು... ಅಹಿತರನ್ ನೋಡಿ ಎನ್ನ ಕಣ್ಣಿಮ್ ಕಿಡಿಯುಮ್ ಕೆಂಡಂಗಳುಮ್ ಸೂಸಿದಪುವು. ಮುಳಿಸನ್ ಮಾಡಿಯುಮ್ ಏವಮನ್ ಪಡೆದುಮ್ ಇನ್ನು ಈ ಪಂದೆಗಳ್ ಪ್ರಾಣದಿಂದೊಳರ್. ಇನ್ನುಮ್ ತಲೆ ಮತ್ತಮ್ ಅಟ್ಟೆಗಳ ಮೇಲಿರ್ದಪ್ಪುವು ಎಂದಂದೆ ದಲ್ ಮುಳಿಸಿಲ್ಲ. ಅಣ್ಣನ ನನ್ನಿಯೆಂಬುದನೆ ಪೇಳ್, ಏನ್ ಪೇಳ್ದುಮ್ ಈ ಕೌರವರ್ಕಳನ್ ಉಂತೆ ಇನ್ನೆಗಮ್ ಉರ್ಚಿ

ಮುಕ್ಕದೆ ಸಡಿಲ್ದ ಈ ಭೀಮನೇನ್ ಮಾಣ್ಬುಮೇ.

(ಎಂದು ಪಾಂಚಾಳರಾಜತನೂಜೆಯ ಮನಮನ್ ಆಱೆ ನುಡಿದು, ಮತ್ತಮ್ ಇಂತು ಎಂದನ್.)

**ಭೀಮ:** ಸುರಸಿಂಧು ಪ್ರಿಯಪುತ್ರ ಕೇಳ್... ಕಳಶಜಾ ನೀನ್ ಕೇಳ್... ಕೃಪಾ ಕೇಳ... ಮಂದರದಿಂದೆ ಅಂಬುಧಿಯನ್ ಕಲಂಕಿದ ಅಸುರ ಪ್ರಧ್ವಂಸಿವೋಲ್ ಬಾಹು ಮಂದರದಿನ್ ವೈರಿಬಲಾಬ್ಧಿ ಘೂರ್ಣಿಸೆ ಬಿಗುರ್ತೆ ಈ ಕೌರವರ್ ಕೂಡೆ ನೂರ್ವರುಮನ್ ಕೊಲ್ವೆನ್. ಇದು ಎನ್ನ ಪೂಣ್ಕೆ... ನಿಮ್ಮ ಈ ಸಭಾಮಧ್ಯದೊಳ್ ನುಡಿದೆನ್.

(ಎಂದು ವಿಳಯಕಾಳಜಳಧರನಿನಾದದಿನ್ ಗಿರಿ ತಾಟಿಸಿದಂತಾನುಮ್, ನೆಲನ್ ಮೊಳಗಿದಂತಾನುಮ್ ಗಜಱಿ ಗರ್ಜಿಸಿ ನುಡಿದು ಮಹಾಪ್ರತಿಜ್ಞಾರೂಢನಾದ ಭೀಮಸೇನನ ನುಡಿಯನ್ ಕೇಳ್ದು, ಕೌರವರ್ ಕಡಲ ನಡುವಣ ಪರ್ವತದಂತೆ ಅಳ್ಳಾಡೆ, ಕುರುವೃದ್ಧನುಮ್ ಬುದ್ಧಿವೃದ್ಧನುಮಪ್ಪ ಗಾಂಗೇಯ ಧೃತರಾಷ್ಟ್ರಂಗೆ ಇಂತು ಎಂದನ್.)

**ಗಾಂಗೇಯ:** ಭರತ ಯಯಾತಿ ಕುತ್ಸ ಪುರುಕುತ್ಸ ಪುರೂರವರಿಂದಮ್ ಇನ್ನೆಗಮ್ ಪರಿವಿಡಿಯಿಂದೆ ಬಂದ ಶಶಿವಂಶಮ್, ಅದು ಈಗಳ್ ಇವಂದಿರಿಂದೆ ನಿತ್ತರಿಸುವುದಕ್ಕುಮ್ ಎಂದೆ ಬಗೆದಿರ್ದೊಡೆ, ಕೀಲೊಳೆ ಕಿಚ್ಚು ಪುಟ್ಟಿ ಭೋರ್ಗರೆದು ಉರಿದಂತೆ ನಿನ್ನ ಮಗನಿಂದೆ ಉರಿದತ್ತು. ಇದನ್ ಆರೊ ಬಾರಿಪರ್.

(ಎಂದು ಅಳಲ್ದು ಧೃತರಾಷ್ಟ್ರನೊಳ್ ನುಡಿಯೆ...)

**ವಿದುರ:** ನೀಮ್ ಎನಿತು ನುಡಿದೊಡಮ್ **"ಆನೆಯ ಕೋಡು ಭಾಗದು"** ಎಂಬಂತೆ ದುರ್ಯೋಧನನ ಉದ್ವೃತ್ತತೆಯುಮನ್, ಭೀಮಸೇನನ ಮಹಾಪ್ರತಿಜ್ಞೆಯುಮನ್ ಆರ್ಗಮ್ ಬಾರಿಸಲ್ಬಾರದು. ಕೆಯ್ಗಳಿದ ಮನೆವಾಳ್ತೆಗೆ ಬುದ್ಧಿ ಪೇಳಲ್ ಎಡೆಯಿಲ್ಲ ತಾಮುಮ್ ತಾಮುಮ್ ಅಱಿವರ್ ಬನ್ನಿಮ್.

(ಎಂದು ಕುಂಭಸಂಭವ, ಅಶ್ವತ್ಥಾಮ ಕೃಪ ವಿದುರಾದಿಗಳ್ ನಿಜನಿವಾಸಂಗಳ್ಗೆ ಆಗಳ್ ಪೋದರ್.) ❖

# ೩೬. ಕಾಡಿನತ್ತ ಪಾಂಡವರ ಪಯಣ

(೧೬ ನೆಯ ಗದ್ಯದಿಂದ ೨೧ ನೆಯ ಗದ್ಯ)

## ಪಾತ್ರಗಳು

| | |
|---|---|
| **ಭೀಮ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ಧೃತರಾಷ್ಟ್ರ:** | ಹಸ್ತಿನಾವತಿಯ ರಾಜ. |
| **ಪ್ರಜೆಗಳು:** | ಹಸ್ತಿನಾವತಿಯ ಪುರಜನರು. |
| **ಧರ್ಮರಾಯ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ಗಾಂಗೇಯ:** | ಶಂತನು ಮತ್ತು ಗಂಗಾದೇವಿಯ ಮಗ. |

# ಕಾಡಿನತ್ತ ಪಾಂಡವರ ಪಯಣ

ಆಗಳ್ ಭೀಮಸೇನನ್ ಧರ್ಮಪುತ್ರಂಗೆ ಎಂದನ್.

**ಭೀಮ:** ಉಪ್ಪಿಕ್ಕಿದೊಡೆ ತುಪ್ಪದ ಮೆಳ್ಪಡಿತು ಎಂಬಂತೆ ನಮ್ಮ ಕೆಮ್ಮನಿರ್ಪ ಇರವು. ಇದೇ ಕಾರಣಮ್ ಬನ್ನಿ ಪೋಪಮ್.

(ಎಂದು ಅರಮನೆಯನ್ ಪೊಱಮಟ್ಟು ಬರೆ, ಧೃತರಾಷ್ಟ್ರನ್ ದುರ್ಯೋಧನನ್ ಏಗೆಯ್ದುಮ್ ಒಡಂಬಡಿಸಲಾಱದೆ ಇರೆಯುಮ್...)

**ಧೃತರಾಷ್ಟ್ರ:** ದ್ರೌಪದಿ ಪರಸ್ತ್ರೀಯನ್ ನಮ್ಮ ಮನೆಯೊಳ್ ಇರಿಸುವುದು ಉಚಿತಮಲ್ಲ.

(ಎಂದು ಕಳಿಪಿದೊಡೆ, ಪಾಂಚಾಲರಾಜತನೂಜೆವೆರಸು ಬಿನ್ನ ಬಿನ್ನನೆ ಪೊಳಲಮ್ ಪೊಱಮಡೆ, ಪುರಜನಂಗಳೆಲ್ಲಮ್ ನೆರೆದು ಅವರ ಪೋಗಿಂಗೆ ಸೈರಿಸಲಾಱದೆ ತಮ್ಮೊಳ್ ಇಂತು ಎಂದರ್.)

**ಪ್ರಜೆ–೧:** ಏ ದೊರೆಯನ್ ಯಮನಂದನನ್... ಏ ದೊರೆಯನ್ ಭೀಮಸೇನನ್... ಕಂಜೋದರನ ಮೈದುನಮ್ ತಾನ್ ಏ ದೊರೆಯನ್... ಅಮಳ್ಗಳ್ ತಾಮ್ ಏ ದೊರೆಯರ್. ಅವರ್ಗಮ್ ಈ ಇರವಾಯ್ತೇ.

**ಪ್ರಜೆ–೨:** ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯನ್ ಕೊಟ್ಟು ಪಾಂಡುನಂದನರ್ ಈಗಳ್ ಪೋದಡಮ್ ಏನ್... ನಮ್ಮ ನೃಪತಿಗೆ ಅವು ತವುದಲೆಯೊಳ್ ತಿಱುಕಾಗದೆ ಪೋದಪುದೇ.

**ಪ್ರಜೆ–೩:** ಜೂದಿನ ಗೆಲ್ಲದೊಳ್ ಆದ ಈ ಮೇದಿನಿಯನ್ ಕಂಡು ಕಜ್ಜಮನ್ ಕಾಣದೆ ದುಜ್ಜೋದನನ್ ಅದೇನದೇನ್ ಮರುಳಾದನೊ. ಬಡಿಗಂಡನಿಲ್ಲ ಪಾಲನೆ ಕಂಡನ್.

**ಪ್ರಜೆ–೪:** ಎನಿತಾನುಮ್ ಅಂದದಿನ್ ಜೂದನಿಕ್ಕೆಯುಮ್, ದ್ರುಪದ ಸುತೆಯನ್ ಎಳೆದು ಉಯ್ಯೆಯುಮ್, ದುಶ್ಶಾಸನನಿಂದಮ್ ಶಕುನಿಯೆಂಬ ಬೆಳ್ವೊಜಿಸಿಂದಮ್ ಇಂತು ಇನಿತೊಂದು ಆದುದು.

(ಎಂದಿರ್ದಿರ್, ಇರ್ದಲ್ಲಿಯೆ ತಂತಮ್ಮ ಕಂಡುದನೆ ನುಡಿಯೆಯುಮ್, ಕೆಲರ್ ಅವರ ಪೋಗಿಂಗೆ ಅಳಲ್ದು ಕಣ್ಣನೀರನ್ ಇಕ್ಕೆಯುಮ್, ಕೆಲರ್ ಪರಸಿ ಸೇಸೆಯನ್ ಇಕ್ಕೆಯುಮ್, ಪೊಳಲನ್ ಪೊಜಿಮಟ್ಟು ಪುರದ ಬಾಹಿಗೆಯನ್ ಎಯ್ದುವಾಗಳ್, ಗಾಂಗೇಯ ದ್ರೋಣ ಕೃಪ ವಿದುರಾದಿಗಳು ಕೊಂತಿವೆರಸು ಎಯ್ದೆವಂದು ಕಿಱಿದಂತರಮನ್ ಕಳಿಪುತ್ತುಮ್ ಬರೆ.

**ಧರ್ಮರಾಯ:** ಎಮಗೆ ತಕ್ಕ ಬುದ್ಧಿಯನ್ ಪೇಳ್ದು ಮಗುಳಿಮ್.

(ಎಂದೊಡೆ, ಅನಿಬರುಮ್ ಮನಮ್ ಬಂಧಿಸಿದ ಮೋಹದಿನ್ ಗಳಗಳನೆ ಕಣ್ಣ ನೀರ್ಗಳಮ್ ಸುರಿದು...)

**ಗಾಂಗೇಯ:** ಪುಗುವುದು ಅರಣ್ಯಮ್. ಇರ್ಪ ಇರವು ಪನ್ನೆರಡು ಅಬ್ದಮ್. ಅದಲ್ಲದೆ ಅಲ್ಲಿ ಕೋಳ್ಮಿಗದ ವನೇಚರಾಧಿಪರ ದಾಯಿದರ ಅತ್ತಣಿಮ್ ಅಪ್ಪ ಅಪಾಯಕೋಟಿಗೆ ಪವಣಿಲ್ಲ. ಕಲ್ಪಿಗೆಡೆಯಾವುದೊ, ಪಾಳಿಯ ಬಟ್ಟೆದಪ್ಪಿ ಮುನ್ ನೆಗಳ್ದೆಡೆಯಿಲ್ಲ. ಪೋಗು ಜಯಮಕ್ಕೆ... ಶುಭಮ್ ಮಂಗಳಮ್ ನಿಮಗಕ್ಕೆ.

(ಎಂದೊಡೆ...)

**ಧರ್ಮರಾಯ:** ಅಲ್ಲಿ ಇರ್ದು ನಿಮ್ಮ ಮನಕ್ಕೆ ಕೊಕ್ಕರಿಕ್ಕೆಯಾಗಿಯುಮ್, ಪಾಳಿಗೆ ಗೆಂಟಾಗಿಯುಮ್ ನೆಗಳ್ವಮಲ್ಲ.

(ಎಂದು ಪೊಡವಟ್ಟು, ಕೊಂತಿಯನ್ ವಿದುರನ ಮನೆಯೊಳ್ ಇರಲ್ವೇಳ್ದು, ಸುಭದ್ರೆಯನ್ ಅಭಿಮನ್ಯುವೆರಸು ನಾರಾಯಣನಲ್ಲಿಗೆ ದ್ವಾರಾವತಿಗೆ ಕಳಿಪಿ, ನಿಜ ಪರಿಜನಂಬೆರಸು ಗಂಗೆಯಮ್ ಪಾಯ್ದು, ಅದಱ ಪಡುವಣ ದೆಸೆಯ ಕಾಮ್ಯಕವನದ ಬಟ್ಟೆಯನ್ ತಗುಳ್ದು, ಪೋಗೆ ವೋಗೆ....)



# ೩೭. ಸೈಂಧವ ಪ್ರಸಂಗ

(೨೯ ನೆಯ ಗದ್ಯದಿಂದ ೩೨ ನೆಯ ಗದ್ಯ)

### ಪಾತ್ರಗಳು

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

**ಭೀಮ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಸೈಂಧವ:** ದುರ್ಯೋಧನನ ತಂಗಿ ದುಶ್ಶಲೆಯ ಗಂಡ. ಇವನಿಗೆ ಜಯದ್ರಥ ಎಂಬ ಮತ್ತೊಂದು ಹೆಸರಿತ್ತು.

## ಸೈಂಧವ ಪ್ರಸಂಗ

ಅಂತು ಕಾಮ್ಯಕವನದೊಳ್ ಅಯ್ದು ವರುಷಮ್ ಇರ್ದು, ಆಱನೆಯ ವರುಷದೊಳ್ ಅದಱ ಕೆಲದೊಳ್ ಒಂದಿ ಸಂದಿಸಿ ಗಗನತಳಮನ್ ತಱುಂಬುವಂತೆ ಇರ್ದ ಶಿಖರಿಶಿಖರಂಗಳಿಂದಮ್, ದೆಸೆಗಳನ್ ತಡವರಿಸಿಕೊಳ್ವಂತೆ ಬಳ್ವಳ ಬಳೆದು ಸೊಗಯಿಸುವ ಪೆರ್ಮರಂಗಳಿಂದಮ್, ವನಲಕ್ಷ್ಮಿಯ ಗೋಮಂಡಲದಂತಿರ್ದ ಕಡವಿನ ಕಾಡೆರ್ಮೆಯ ಪಿಂಡುಗಳಿಂದಮ್, ದೆಸೆಗಳ್ಗೆ ಬೆರ್ಚಿ ಮೂಂಕಿಱಿವ ವನಮಹಿಷಿಗಳಿಮ್, ಮದಹಸ್ತಿಯಂತೆ ಮರವಾಯ್ವ ಪುಲಿಗಳಿನ್ ಅತಿ ಭಯಂಕರ ಆಕಾರಮಪ್ಪ ದ್ವೈತವನಕ್ಕೆ ಬಂದು, ತತ್ ವನೋಪಕಂಠವರ್ತಿಗಳಪ್ಪ ತಾಪಸಾಶ್ರಮಂಗಳೊಳ್ ವಿಶ್ರಮಿಸಲ್ ಬಗೆದು...

**ಪಾಂಡವರು:** ಈ ಬನಮ್ ಆರ್ಗಮ್ ಪುಗಲಿಲ್ಲ. ನೆಲಸಲ್ ಇಂಬು ಉಡಲ್ ನಾರುಂಟು. ಮೆಲ್ಲೆ ಕೊಂಬುಗಳೊಳ್ ಪಣ್ಪಲಮುಂಟು. ಮೀಯೆ ಕುಡಿಯಲ್ ನೀರುಂಟು. ಪದ್ಮಾಕರಾಳಿಗಳೊಳ್ ತಣ್ಪುಗಳುಂಟು. ಹೇಮಲತಿಕಾ ಕುಂಜಗಳೊಳ್ ನಮ್ಮ ನನ್ನಿಗೆ ಬನ್ನಮ್ ಬರಲೀಯದೆ ಈ ಬನದೊಳ್ ಇರ್ದು ಏನ್ ಕಾಲಮನ್ ಪಾರೆವೇ.

(ಎಂದು ತಮ್ಮೊಳ್ ಅಯ್ವರುಮ್ ಏಕ ಕಾರ್ಯ ಆಲೋಚನಪರರಾಗಿ, ಅದ್ವೈತ ಸಾಹಸರ್ ದ್ವೈತವನದೊಳ್ ಇರ್಩ನ್ನೆಗಮ್, ಒಂದು ದಿವಸಮ್ ದುರ್ಯೋಧನನ ಮಯ್ದುನನ್ ಸಿಂಧುದೇಶಾಧೀಶ್ವರನ್ ಸೈಂಧವನ್ ಅವರನ್ ಛಿದ್ರಿಸಲೆಂದು ಮೆಯ್ಗರೆದು ಬಂದು, ಮೃಗಯಾಕ್ರೀಡೆಗೆ ಪಾಂಡುರಾಜ ತನಯರ್ ಪೋಪನ್ನೆಗಮ್ ಬಂದು, ತೊಟ್ಟಗೆ ಪಾಂಚಾಲಿಯನ್ ಎತ್ತಿ, ತನ್ನ ರಥದೊಳ್ ತಂದಿಟ್ಟುಕೊಂಡು

ಉಯ್ದನ್. ಅನ್ನೆಗಮ್ ಅಂತಾ ಪಡೆಮಾತು ಕೇಳ್ದು, ಅತಿಬಲರ್ ಭೀಮಾರ್ಜುನರ್ ಕಾಯ್ಪು ಕೆಯ್ಮಿಗೆ ಬೆನ್ನನ್ ಪರಿದು...)

**ಭೀಮಾರ್ಜುನರು:** ಎಲವೋ... ಎತ್ತ ಪೋಪೆ... ಪೋ ಪೋಗಲ್...

(ಎಂದು ಎಯ್ದಿದರ್ ಅಂತು ಎಯ್ದಿ ತತ್ ಗದಾಘಾತದೊಳಮ್ ಬಾಣಪಾತದೊಳಮ್ ಅವನ ರಥಮನ್ ಶತಚೂರ್ಣಮ್ ಮಾಡಿ, ಜಯದ್ರಥನನ್ ಕೋಡಗಗಟ್ಟುಕಟ್ಟಿ ಬೆನ್ನನ್ ಬಿಲ್ಲಕೊಪ್ಪಿನೊಳ್ ಇಱಿದು...)

**ಭೀಮಾರ್ಜನರು:** ನಡೆ...

(ಎಂದು ನಡೆಯಿಸಿ, ಪಾಂಚಾಲಿಯನ್ ಲೀಲೆಯಿಂದ ಒಡಗೊಂಡು ಬೀಡಿಂಗೆ ವಂದು, ಧರ್ಮಪುತ್ರಂಗೆ ತೋಱಿದೊಡೆ...)

**ಧರ್ಮರಾಯ:** ಲಾಕ್ಷಾಗೃಹಮನ್ ಪುಗಿಸಲುಮ್, ಅಕ್ಷಕ್ರೀಡೆಯೊಳೆ ಧರಣಿಯನ್ ಕೊಳಲುಮ್ ಪಿಂಗಾಕ್ಷಂಗೆ ಪೇಳ್ದು ಸೈರಿಸದೆ, ಆಕ್ಷೇಪದಿನ್ ಎಮ್ಮನ್ ಇಲ್ಲಿ ಛಿದ್ರಿಸ ಬಂದಯ್. ನಿನ್ನಮ್ ಪರಿಭವಕ್ಕೆ ತಂದು, ನಿನ್ನ ಯಶಮನ್ ಕಿಡಿಸಿದೆವು. ಇನ್ ಕೊಂದೊಡೆ ಏನ್ ವಂದಪುದು. ದುರ್ಯೋಧನನಲ್ಲಿಗೆ ಪೋಗು.

(ಎಂದು ಕಟ್ಟಿದ ಕಟ್ಟುಗಳನ್ ಬಿಟ್ಟು ಕಳೆದೊಡೆ, ಜಯದ್ರಥನ್ ಸಿಗ್ಗಾಗಿ ಕೈಲಾಸದೊಳ್ ಈಶ್ವರಂಗೆ ತಪಮ್ ಗೆಯ್ದು ಮೆಚ್ಚಿಸಿ...)

**ಜಯದ್ರಥ:** ಪಾಂಡವರನ್ ಒಂದು ದೆವಸದ ಅನುವರದೊಳ್ ಗೆಲ್ವೆನಕ್ಕೆ.

(ಎಂದು ಬರಮ್ ಪಡೆದು ಪೋದನ್.)



# ೩೮. ದುರ್ಯೋಧನನ ಮುಖಭಂಗ

(೩೨ ನೆಯ ಗದ್ಯದಿಂದ ೩೯ ನೆಯ ಗದ್ಯ)

**ಪಾತ್ರಗಳು:**

**ದುರ್ಯೋಧನ:** ಧೃತರಾಷ್ಟ್ರನ ಮಗ. ಹಸ್ತಿನಾವತಿಯ ರಾಜ.

**ಚಿತ್ರಾಂಗದ:** ಗಂಧರ್ವ.

**ಭಾನುಮತಿ:** ದುರ್ಯೋಧನನ ಹೆಂಡತಿ.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ದ್ರೌಪದಿ:** ಅರ್ಜುನನ ಹೆಂಡತಿ.

## ದುರ್ಯೋಧನನ ಮುಖಭಂಗ

ದುರ್ಯೋಧನನ್ ಸಮಸ್ತಸಾಧನಸಹಿತನಾಗಿ

**ದುರ್ಯೋಧನ:** (ತನ್ನ ಮನದಲ್ಲಿ)

ಕಾಡೊಳ್ ಬೇಡರಂತೆ ತೊಳಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳನ್ ನೋಡುವುದುಮ್, ಎನ್ನನ್ ಅವರಿಮ್ ನೋಡಿಸುವುದುಮ್ ಈ ಎರಡೆ ಸಂಸಾರಫಲಮ್.

(ಎಂದು ನಾಗಪುರದಿನ್ ಪೊಱಮಟ್ಟು ದುಶ್ಶಾಸನಾದಿಗಳಪ್ಪ ನೂರ್ವರ್ ತಮ್ಮಂದಿರುಮ್, ಭಾನುಮತಿಯುಮ್ ಚಂದ್ರಮತಿಯುಮ್ ಎಂಬ ಬೇಟದ ಅರಸಿಯರುಮ್, ಲಕ್ಕಣಮ್ ಮೊದಲಾಗೆ ನೂರ್ವರ್ ಮಕ್ಕಳುಮ್, ಗಾಂಗೇಯ ದ್ರೋಣ ಕೃಪ ವಿದುರ ಪ್ರಭೃತಿಗಳುಮ್, ಅಶ್ವತ್ಥಾಮ ಕರ್ಣ ಶಲ್ಯ ಶಕುನಿ ಸೈಂಧವ ಪ್ರಮುಖ ನಾಯಕರುಮ್ ಬೆರಸು ಬೇಂಟೆಯ ನೆವದಿನ್ ಬಂದು, ದ್ವೈತವನದ ಕೆಲದ ನಂದನವನದೊಳ್ ಪಾಂಡವರ್ಗೆ ಸಮೀಪಮಾಗೆ ಬೀಡನ್ ಬಿಟ್ಟು ಪಾಡಿಸುತ್ತುಮ್ ಪೊಗಳಿಸುತ್ತಮ್ ಇರ್ದನ್. ಅನ್ನೆಗಮ್ **"ಪಗೆಯಿಱಿಯ ಬಂದರ ಮೂಗನ್ ಅರಿದರ್"** ಎಂಬಂತೆ ಅನಿಬರುಮ್ ಬಾಯನ್ ಬಿಟ್ಟು ನೋಡೆ ನೋಡೆ, ಪೂರ್ವಜನ್ಮದ ಚಿತ್ರಾಂಗದನೆಂಬ ಗಂಧರ್ವನ್ ಅಱುವತ್ತು ಕೋಟಿ ಗಾಂಧರ್ವ ಬಲಮ್ ಬೆರಸು ಬಂದು, ದುರ್ಯೋಧನ ದುಶ್ಶಾಸನರ್ ಇರ್ವರುಮನ್ ಕೋಡಗಗಟ್ಟು ಕಟ್ಟಿ....)

**ಚಿತ್ರಾಂಗದ:** ಭೀಷ್ಮ, ಮಿಡುಕದೆ ನೋಡುತಿರು... ಕುಂಭಜ, ಸುರ್ಕಿರು... ಕರ್ಣ, ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು...

ಗುರುಪ್ರಿಯ ನಂದನ, ಕೂಗಡಂಗದಿರ್ದೊಡೆ ಬರ್ದುಕಾವುದು ಇರ್. ಪೊಡದರ್ದೊಡೆ ಈಗಡೆ ಕೊಂದಪೆನ್...

(ಎಂದು ಕೂಡೆ ಕಣ್ಗಿಡೆ ಜಡಿದು, ಆ ಖಚರನ್ ಪರಮಾಣು ಮಾರ್ಗದಿನ್ ಇರ್ವರುಮನ್ ಉಯ್ದನ್. ಅಂತು ಉಯ್ವುದುಮ್ ನೆಗಳ್ತೆಯ ಬೀರರೆಲ್ಲಮ್ ಬಡವರ ಪಿತರರಂತೆ ಮಿಳ್ಮಿಳ ನೋಡುತ್ತಿರೆ, ಮಿಕ್ಕುದ ಉಂಡರಂತೆ ತಲೆಯನ್ ಬಾಗಿ, ಬಿಲ್ಗಳನ್ ಮುಂದಿಟ್ಟು, ಬಿಲ್ಲುಮ್ ಬೆಜಿಗುಮ್ ಆಗಿರೆ, ಸುಯೋಧನನ ಮಹಾದೇವಿ ಭಾನುಮತಿ ಬಾಯಳಿದು ಪುಯ್ಯಲಿಡುತುಮ್ ಬಂದು, ಧರ್ಮನಂದನನ ಕಾಲ ಮೇಲೆ ಕವಿದುಪಟ್ಟು ....)

**ಭಾನುಮತಿ:** ನೋಂತರ ಪಗೆವರನ್ ಎಳ್ತು ಇಱಿದಂತಾಯ್ತು ಎಂದಿರದೆ, ಪುರುಷಾಕಾರದ ಪೆಂಪನ್ ಚಿಂತಿಸಿ, ಮಹೀಶನನ್ ಎಡಂಬಡುಮ್ ತರಿಸಿ, ಎನಗೆ ಪುರುಷ ಭಿಕ್ಷಮನ್ ಇಕ್ಕಿಮ್...

(ಎಂದು ಪುಯ್ಯಲಿಡುವ ಭಾನುಮತಿಯ ಪುಯ್ಯಲನ್ ಕೇಳ್ದು, ಸುಯೋಧನನ್ ಬಂದ ವೃತ್ತಾಂತಮನ್ ಅಱಿದು...)

**ಧರ್ಮರಾಯ:** (ತನ್ನಲ್ಲಿಯೇ)

ಪಿರಿದುಮ್ ಕಾಯ್ಪಿನೊಳ್ ಎಯ್ದೆ ಕಾಯ್ವ ಸಮಕಟ್ಟು ಇನ್ ದೋಷಮಲ್ತೆ. ಅಕ್ಕ, ಮಚ್ಚರಮುಮ್ ಮೋಘಮ್ ಎಡಬಂಡುಮ್ ಕಲುಷಮುಮ್ ಮುನ್ನುಳ್ಳದು ಅಂತೆ ಎತ್ತಿಯುಮ್ ಪೊರೆಯುಮ್ ಪಂತಮುಮ್ ಇಲ್ಲದಂತೆ ಮನದೊಳ್ ನಿಷ್ಕಾರಣಮ್ ಕಾಯ್ವರೇನ್. ಪರಚಿಂತಾಕರ ಏಹಿ ಎಂಬ ನುಡಿಯನ್ ಮುನ್ ಕೇಳ್ದೆನಿಲ್ಲಾಗದೇ...

(ಎಂದು ತನ್ನೊಳೆ ಬಗೆದು ಭಾನುಮತಿಯನ್ ಇಂತು ಎಂದನ್...)

**ಧರ್ಮರಾಯ:** ಅದರ್ಕೆ ಬಾಷ್ಪಜಲಮನ್ ಸುರಿಯಲ್ಬೇಡ. ನಿನ್ನಾಣ್ಮನನ್ ನಿನ್ನೊಳ್ ಇಂದಿರದೆ ಆಮ್ ಕೂಡುವೆವು. ಎಮ್ಮೊಳಾದ ಕಲಹಕ್ಕೆ ನೂರ್ವರೆ ದಲ್ ಕೌರವರ್... ಆಮುಮ್ ಅಯ್ವರೆ ವಲಮ್. ಎಂತಾದೊಡಮ್ ಕೇಳ, ಮತ್ತೊರ್ವರೊಳ್ ತೊಟ್ಟ

ಸಂಗರರಂಗಕ್ಕೆ ಜಸಕ್ಕೆ ಕೂಡುವ ಎಡೆಯೊಳ್ ನೂಱಿಯ್ವರ್ ಆವಲ್ಲವೇ.

(ಎಂದು ಯುಧಿಷ್ಠಿರನ್ ಪಾಳಿಯ ಪಸುಗೆಯನ್ ಅಱಿದು ನುಡಿದೊಡೆ, ಆ ಪೂಣ್ದ ಬೆಸನನ್ ಕರಮ್ ಆಸೆವಟ್ಟು ತನ್ನ ಕೆಲದೊಳ್ ಇರ್ದ ಸಾಹಸಾಭರಣನ ಮೊಗಮನ್ ನೋಡಿ...)

**ಧರ್ಮರಾಯ:** ನಿಮ್ಮಣ್ಣನನ್ ಸುಯೋಧನನ್ ಗಂಧರ್ವರ ಪಡೆ ಪಿಡಿದುಯ್ದುದು ಗಡ. ನಮಗೆ ಇದನ್ ಕಡೆಗಣಿಸಲಾಗ. ಆತನ ಸೆಱೆಯನ್ ಬೇಗಮ್ ಬಿಡಿಸಿ ತರ್ಪುದು.

(ಎಂಬುದುಮ್...)

**ಅರ್ಜುನ:** ಮಹಾಪ್ರಸಾದಮ್ ಅಂತೆ ಗೆಯ್ವೆನ್. ಎಲ್ಲಿ ಪೊಕ್ಕೊಡಮ್ ಕೊಂಡು ಬಂದೆಪೆನ್. ಬಗೆಯದೆ ಇದಿರನ್ ನೋಡುತ್ತಿರಿಮ್..

(ಎಂದು ತವದೊಣೆಗಳನ್ ಬಿಗಿದು, ಗಾಂಡೀವಮನ್ ಏಱಿಸಿ ನೀವಿ ಜೇವೊಡೆದು, ಗಂಧರ್ವರ ಪೋಪ ಬಳಿಯನ್ ಬೆಸಗೊಂಡು, ಹಿಮವಂತದಲ್ಲಿ ರಾಕ್ಷಸಿ ಕೊಟ್ಟ ಚಕ್ಷುಸಿಯೆಂಬ ವಿದ್ಯೆಯಿನ್ ತನ್ ಕಣ್ಣನ್ ಅಭಿಮಂತ್ರಿಸಿಕೊಂಡು ಪಾಱುವ ಗಂಧರ್ವಬಲಮನ್ ಜಲಕ್ಕನೆ ಕಂಡು...)

**ಅರ್ಜುನ:** ಕೊಳ್... ಕೊಳ್...

(ಎಂದು ಎಚ್ಚೊಡೆ, ವಿಳಯೋಳ್ಕದ ತೆಱದಿಂದೆ ಮುಸುಱಿ ದಿವ್ಯಾಸ್ತ್ರಚಯಂಗಳ್ ಕೊಳೆ, ಗಾಂಧರ್ವ ಬಲಂಗಳ್ ಮಿಟ್ಟೆಗೊಂಡ ಚಿಟ್ಟೆಯ ತೆಱದಿನ್ ಕೆಡೆದುವು. ಅಂತು ಅಲ್ಲಿ ಪದಿನಾಲ್ಸಾಸಿರ್ವರ್ ಗಂಧರ್ವರನ್ ಕೊಂದೊಡೆ ಚಿತ್ರಾಂಗದನ್ ಬೆರ್ಚಿ...)

**ಚಿತ್ರಾಂಗದ:** ಕೊಳ್ ನಿನ್ನ ನಚ್ಚಿನ ಸೆರೆಯನ್.

(ಎಂದು ಬಿಸುಟ್ಟೊಡೆ, ನೋಯಲ್ ಈಯದೆ, ನೆಲದ ಆಕಾಶದ ಎಡೆಯೊಳ್ ಅಂಬುಗಳನ್ ತರತರದಿಂದ ಎಚ್ಚು ಸೋಪಾನಮ್ ಮಾಡಿ, ದುರ್ಯೋಧನ ದುಶ್ಯಾಸನರನ್ ಇಳಿಪಿ, ಕಟ್ಟುಗಳನ್ ಬಿಡದೆ ಒಡಗೊಂಡು ಬಂದು, ಧರ್ಮಪುತ್ರಂಗೆ ತೋಱಿದೊಡೆ,

ಸಾಹಸಾಭರಣನ ಸಾಹಸಮನ್ ಅಳವಲ್ಲದೆ ಪೊಗಳ್ದು, ತೊಡೆಯನ್ ಏಱಿಸಿಕೊಂಡು ಬಾಯೊಳ್ ತಂಬುಲಮ್ ಕೊಟ್ಟನ್. ಪಾಂಚಾಲರಾಜ ತನುಜೆ ಪಗೆವರ ಕಟ್ಟುವಟ್ಟಿರ್ದ ಏಳಿದಿಕ್ಕೆಗೆ ಸಂತಸಂಬಟ್ಟು, ಸೈರಿಸಲಾಱದೆ ಇಂತು ಎಂದಳ್.)

**ದ್ರೌಪದಿ:** ಎಮ್ಮನ್ ಪಿಡಿದು ಎಳೆವಂದಿನ ನಿಮ್ಮ ಅದಟುಗಳ್ ಈಗಳ್ ಎತ್ತ ಪೋದುವೊ... ಪಿಡಿವಟ್ಟು ಅಮ್ಮ ಬಳಲ್ದಿರೆ... ನಿಮ್ಮ ಅಳವನ್ ಕಂಡಿರೆ... ನಿಮಗಮ್ ಈಗಳ್ ಈ ಎಡರಾಯ್ತೇ.

(ಎಂದು ಸಾಯೆ ಸರಸಮ್ ನುಡಿದು, ಕಟ್ಟಿದ ಕಟ್ಟುಗಳನ್ ತಾನೆ ಬಿಟ್ಟು ಕಳೆದು ಭಾನುಮತಿಗೆ...)

**ದ್ರೌಪದಿ:** ನಿನ್ನ ಆಣ್ಮನುಮನ್ ನಿನ್ನ ಮಯ್ದುನನುಮನ್ ನೀನ್ ಒಪ್ಪುಗೊಳ್ಳು.

(ಎಂಬುದುಮ್, ದುರ್ಯೋಧನನ್ ದಾಡೆ ಕಳೆದ ಕುಳಿಕನಂತೆಯುಮ್, ಕೋಡು ಉಡಿದ ಮದಹಸ್ತಿಯಂತೆಯುಮ್, ನಖಮ್ ಉಡಿದ ಸಿಂಹದಂತೆಯುಮ್ ಗಳಿತಗರ್ವನಾಗಿ ಪಾಂಡವರ ಮೊಗಮನ್ ನೋಡಲ್ ನಾಣ್ಚಿ, ಮದಗಜಪುರಕ್ಕೆ ಪೋಗಿ, ಜೂದಿನೊಳ್ ಗೆಲ್ದ ನೆಲನನ್ ನಯಜ್ಞನಾಗಿ ತನ್ನೊಳ್ ಪತ್ತಿಸಿ, ದುಶ್ಶಾಸನನ್ ಯುವರಾಜನನ್ ಮಾಡಿ ನಿರ್ವಾಜ್ಯಮ್ ಅರಸುಗೆಯ್ಯುತ್ತುಮ್ ಇರ್ದನ್.)



# ೩೯. ದ್ರೌಪದಿಯ ಅಳಲು... ಭೀಮನ ಆಕ್ರೋಶ

(೩೯ ನೆಯ ಗದ್ಯದಿಂದ ೫೮ ನೆಯ ಗದ್ಯ)

## ಪಾತ್ರಗಳು

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

ದೂತ: ಧರ್ಮರಾಯನ ಸೇವಕ.

ದ್ರೌಪದಿ: ಅರ್ಜುನನ ಹೆಂಡತಿ.

ಭೀಮ: ಪಾಂಡುರಾಜ ಮತ್ತು ಕುಂತಿಯ ಮಗ.

## ದ್ರೌಪದಿಯ ಅಳಲು... ಭೀಮನ ಆಕ್ರೋಶ

ಇತ್ತ ಯುಧಿಷ್ಠರನ್ ಅಟ್ಟಿದ ಕಿರಾತ ದೂತನ್ ತಾಪಸ ವ್ಯಾಜನಾಗಿ ಪೋಗಿ, ಸುಯೋಧನನ ವಾರ್ತೆಯೆಲ್ಲಮುಮನ್ ಅಱಿದು ಬಂದು ಅಜಾತಶತ್ರುಗೆ ಇಂತೆಂದು ಬಿನ್ನಪಂಗೆಯ್ದನ್...

**ದೂತ:** ಕಿವಿಗೆ ಇನಿದುಮ್ ನೃಪಂಗೆ ಹಿತಮುಮ್ ನುಡಿ ಎಲ್ಲಿಯುಮ್ ಇಲ್ಲ. ಕೇಳ, ಎನ್ನ ಕಂಡುದನೆ ಬಿನ್ನವಿಸುವೆನ್. ಜೂದಿನೊಳ್ ಉಕ್ಕೆವದಿಂದೆ ಗೆಲ್ದು, ನಿನ್ನ ಅವನಿತಳಮ್ ಕರಾತಳದವೋಲ್ ತನಗಮ್ ಬೆಸಕೆಯ್ಯೆ ಕೆಯ್ಗೆ ಮಾಡುವ ಧಾತ್ರರಾಷ್ಟ್ರನಾ ನಯಮ್ ಆ ಬೃಹಸ್ಪತಿಯುಮನ್ ಗೆಲೆವಂದುದು. ಮೊದಲೊಳ್ ತಿಣ್ಣಮ್ ಅದು ಒಪ್ಪಿ ತಪ್ಪಿದುದನ್ ಈಯೆಂದು ಅಟ್ಟಿದನ್. ದಂಡನ್ ಅಟ್ಟದೆ ಸಾಮರ್ಥ್ಯದಿನ್ ಅಟ್ಟಿದ ಓಲೆಗೆ ಮಹಾಪ್ರತ್ಯಂತ ಭೂಪಾಳರ್ ಅಟ್ಟಿದ ಕಾಳಿಂಗ ಗಜೇಂದ್ರ ದಾನಜಲ ಧಾರಾಸಾರದಿನ್ ಆ ಸುಯೋಧನ ನೃಪದ್ವಾರೋಪಕಂಠಗಳೊಳ್ ಒಳ್ಗಿಸಱಿರ್ ಕುಂದಿದುದಿಲ್ಲ ನೋಡ. **"ರಿಪು ಕುಸಿದನ್... ವಿಜಯದೆ ನಿದ್ರಿಸಿದನ್... ಎಂದಿನ ಅಂದಮನ್ ಕಂಡು ತಪ್ಪಿದನ್... ಆಳ್ವೆಸಕೆ ಅಗಿಯೆ ನುಡಿದನ್"** ಎಂಬ ಈ ಪಿಸುಣನ್ ಅವನ ಆ ಬೀಡಿನೊಳ್ ಅಣಮ್ ಕೇಳ್ದನಿಲ್ಲ. ನೆಗಳ್ದ ಅರಿಗನ ಸಾಹಸಮ್ ಒರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂಬುಗೆ, ಮಂತ್ರಪದಕ್ಕೆ ಉರಗಮ್ ಸುಗಿವಂತೆವೊಲ್ ಅಗಿದು ಸುಗಿದು ತಲೆಗರೆದು ಇರ್ಪನ್. ಅಱಿವು ಇಂತು. ರಾಜಕಾರ್ಯದ ತೆಱಿನ್ ಎನಗೆ ಅಱಿವಂತು ಮೊಗ್ಗೆ. ದೇವರ ಮುಂದೆ ಆನ್ ಪಿರಿದುಮ್ ಗಳಪಲ್ ಅಱಿಯೆನ್. ಅಹಿತನ್ ಮಱಿಸೊಂದಿನಲ್ಲನ್. ಎಚ್ಚತ್ತು ಇರ್ದನ್.

(ಎಂದು ಬಿನ್ನಪಮ್ ಗೆಯ್ದು ಕಿರಾತ ದೂತನ್ ಪೋಪುದುಮ್, ಆ

ಮಾತೆಲ್ಲಮನ್ ಕೇಳ್ದು ಯಜ್ಞಸೇನತನೂಜೆ ಯಮತನೂಜಂಗೆ ಇಂತು ಎಂದಳ್...)

**ದ್ರೌಪದಿ:** ನುಡಿವೊಡೆ ರಾಜಕಾರ್ಯ ನಯಮೆತ್ತ, ಅಬಲಾಜನದ ಬುದ್ಧಿಯೆತ್ತ; ಉಡುಪತಿ ವಂಶ, ನೋಡುವೊಡೆ ಇದೊಂದು ಅಘಟಮ್; ಬಗೆವಾಗಳ್ ಎಂತು ಕೇಳ್, ನುಡಿಯದೆ ಕೆಮ್ಮಗಿರ್ದೊಡಮ್ ಇರಲ್ಕೆ ಅಣಮ್ ಈಯದೆ, ನಿಮ್ಮೊಳ್ ಎನ್ನುಮನ್ ಕುರುಕುಳರ್ಕಳ ಗೆಯ್ದ ಅಪರಾಧ ಕೋಟಿಗಳ್ ನುಡಿಯಿಸಿದಪ್ಪುವು. ಆವ ಅಡವಿಗಳೊಳ್ ಪಣ್ಫಲಮ್ ಆವಗಮ್ ಒಳವು, ಅಲ್ಲಿಗೆ ಅಱಸಿ ಪರಿಪರಿದು ಕರಮ್ ತಾವಡಿಗೊಳ್ವ ಈ ಭೀಮನ ಬೇವಸಮಿದು ನಿನ್ನ ಮನಮನ್ ಒನಲಿಸಿತಿಲ್ಲಾ. ಪೋಗಿ ಸುಪರ್ವ ಪರ್ವತದ ಕಾಂಚನ ರೇಣುಗಳಮ್ ಪರಾಕ್ರಮೋದ್ಯೋಗದಿನ್ ಎತ್ತಿ ತಂದು ನಿನಗಿತ್ತ ಅದಟನ್, ಬಡಪಟ್ಟು ಬೆಟ್ಟದೊಳ್ ಪೋಗಿ ತೊಳಲ್ದು, ನಾರ್ಗಳಮ್ ಉಡಲ್ ತರುತಿರ್ದ ಸಂಚಿತ ಶೌರ್ಯಧನನ್ ಧನಂಜಯನ್ ಆಗಳೆ ಎಲೆ, ನಿನಗೆ ಕೋಪಮನ್ ಮಾಡಲ್ ಆರ್ತನಿಲ್ಲ. ಕಾಯಕ್ಲೇಶದಿನ್ ಅಡವಿಯ ಕಾಯನ್ ಪಣ್ಣುಮನ್ ಉದಿರ್ಪಿ ತಿಂದು, ಅಗಲದೆ ನಿಂದ ಈ ಯಮಳರ್ ಆವ ತೆಱದಿನ್ ನನ್ನಿಕಾಱನ ನಿನ್ನ ಮನಮನ್ ನೋಯಿಸರಯ್.

ಆ ದುಶ್ಶಾಸನನಿಂದೆ ಎನಗಾದ ಪರಾಭವಮನ್ ಏನುಮನ್ ಬಗೆಯದೊಡೆ, ಇಂತು ತೊವಲ್ನಾರುಮ್ ಆದರಮೆ ಅನಾದರದೇನ್ ನಿನ್ನ ಮನಕ್ಕೆ ಚಿಂತೆಯುಮಿಲ್ಲಾ. ಎಮ್ಮಯ್ವರ ಬೇವಸಮನ್ ನೀನ್ ಮನದೊಳ್ ನೆನೆಯಪ್ಪೊಡಮ್ ಮರುಳೆ, ನೀನ್ ನಿನ್ನ ಇರವನ್ ಬಗೆಯದೆ ಅಂತು ಘುಮ್ ಎಂಬ ಅಡವಿಯೊಳ್ ಅಡಂಗಿ ಚಿಂತಿಸುತಿರ್ಪಾ. ಶಮಮನೆ ಕೆಯ್ಕೊಳ್ವೊಡೆ ಬಿಲ್ಲುಮ್ ಅಂಬುಮನ್ ಬಿಸುಟು, ತಪಕೆ ನೀನ್ ಬಗೆವೊಡೆ ವಿಕ್ರಮಮನ್ ಪಗೆಯನ್ ಕಿಡಿಸುವ ಶಮದಿನ್ ಸಿದ್ಧಿ ಮುನಿಗಾಯ್ತು... ಭೂಪತಿಗಾಯ್ತೇ. ತಪ್ಪುಮನೆ ನುಡಿಯೆನ್ ಎಂಬುದಿದು ಒಪ್ಪದು. ಅಹಿತರ್ ನಿನಗೆ ಎಯ್ದೆ ತಪ್ಪಿರ್ದರ್. ಅವರ್ ತಪ್ಪಿದ ಬಳಿಕ್ಕೆ ತಪ್ಪಿದ ತಪ್ಪು ನನ್ನಿಗೆ ಒಪ್ಪಮಲ್ಲದ ತಪ್ಪೇ ಏನ್ ಗಳ.

(ಎಂದ ಪಾಂಚಾಳ ರಾಜತನೂಜೆಯ ಮಾತಿಂಗೆ ಬೆಂಬಲಮ್ ಪಾಯ್ವಂತೆ ಭೀಮಸೇನನ್ ಇಂತು ಎಂದನ್...)

ಭೀಮ: ದ್ರೌಪದಿ ಪೇಜಿತನ್ ನುಡಿಯದೆ ತಕ್ಕುದನೆ ನುಡಿದಳ್. ಕೇಳಿಮ್... ಕೇಳದಿರಿಮ್... ಇನ್ ನುಡಿಯಲ್ ಎಡೆಯಿಲ್ಲ. ಅವನಿಪತೀ, ಎನ್ನ ಮನದ ಮುಳಿಸು ನಿಮ್ಮನ್ ನುಡಿಯಿಸಿದಪುದು. ನಾಲ್ಕುಮ್ ನೃಪವಿದ್ಯೆಯನ್ ಆಡಲ್ ಕಲ್ತುಮ್ ನೃಪ, ನೆಜಿಯೆ ಕಲ್ತೆಯಿಲ್ಲಾಗದೆ. ನೆಲನನ್ ಸೋಲಲ್ಕೆ ದೊರೆಯೆ. ಮೆಯ್ಯ ವಲ್ಕಲ ವಸನಕ್ಕೆ ಆಂಪುದು ಪೆಂಪೇ. ನನ್ನಿಗೆ ದಾಯಿಗಂಗೆ ಅರಸನ್ ಒಪ್ಪಿಸಿದೆನ್ ಗಡಿಮ್ ಎಂಬ ಮಾತುಗಳ್ ನಿನ್ನವು. ಕೂರದರ್ ನೆಲನನ್ ಒಟ್ಟಜೆಯಿನ್ ಕೊಳೆ, ಕೊಟ್ಟು ಮುಟ್ಟುಗೆಟ್ಟು ಇನ್ನುಮ್ ಅರಣ್ಯದೊಳ್ ಯಮನಂದನನ್ ನಮೆದಪನ್ ಎಂಬ ಬನ್ನಮುಮ್ ಮುನ್ನಮೆ ಸೋಂಕೆ ಎಲ್ಲರ ಪೇಳ್ವ ಮಾತುಗಳ್ ಕಣ್ಮಲೆವ ಮಾತುಗಳ್ ಕೃಷ್ಣೆಯ ಮುಂದಲೆಯನ್ ಪಿಡಿದು ಎಳೆವಲ್ಲಿಯೆ ಸಲೆಸಂದ ಇರ್ಪತ್ತೊಂದು ತಲೆವರೆಗಮ್ ನಮಗೆ ಪರಿಭವಮ್. ಕೌರವರುಮ್ ನಮ್ಮ ಬೀರಮನ್ ತಲೆ ಪಿಡಿದರ್. ಮಲೆಮಲೆದು ಉರ್ಕಿ ಸೊರ್ಕಿ ಸಭೆಯೊಳ್ ಕುಲಪಾಂಸುಲನ್ ಈ ಶಿರೀಷ ಕೋಮಲೆಯ ವಿಲೋಲ ನೀಲಕಬರೀಭರಮನ್ ತೆಗೆವಾಗಳ್, ಅಲ್ಲಿ ಕೆಯ್ಯಲೆ ಸದೆದಂತೆ ಬೆರಲಚ್ಚುಗಳ್ ಪತ್ತಿ ಅಚ್ಚೆಜಿಂದಂತೆ ಕೊಂಕುಗಳ್ ತಲೆನವಿರೊಂದಿ ನಮ್ಮ ಬೀರಮನ್ ಮೂದಲಿಸುವಂತೆ ವೊಲ್ ಇರ್ದುವು. ಅಸಿತೇಂದೀವರ ಲೋಲಲೋಚನೆಯನ್ ಅಂದು ಅಂತು ಆ ಸಭಾಮಧ್ಯದೊಳ್ ಪಸುವನ್ ಮೋದುವವೋಲೆ ಮೋದೆಯುಮ್, ಅದನ್ ಕಂಡು ಅಂತೆ ಪಲ್ಗರ್ಚಿ ನಿನ್ನಯ ನನ್ನಿಗೆ ಸೈರಿಸಿದೆನ್ ಇನ್ನೆವರಮ್. ಆ ದುಶ್ಶಾಸನ ಉರಃಸ್ಥಲ ಉಷ್ಣ ಅಸೃಗ್ಜಲ ಪಾನಮನ್ ಬಯಸಿ ಬಾಯ್ ತೇರ್ರೈಸೆ ಸೈತಿರ್ಪನೇ...

(ಎಂದು ಗದಾದಂಡಮನ್ ಭುಜಾದಂಡದೊಳ್ ಅಳವಡಿಸಿಕೊಂಡು ಪಗೆವರ್ ಇರ್ದ ದೆಸೆಯನ್ ನೋಡಿ ತಳರಲ್ ಬಗೆದ ಭೀಮಸೇನನ್ ಧರ್ಮಪುತ್ರನ್ ಕೋಪತಾಪದಿನ್ ಮಸಗಿದ ಮದಗಜಮನೆ ಮಾಣಿಸುವಂತೆ ಎಂತಾನುಮ್ ಮೃದುವಚನಂಗಳಿನ್ ಮುಳಿಸನ್ ಆಜಿಂಸುತ ಇರ್ದನ್...)



# ೪೦. ವ್ಯಾಸ ಮಹರ್ಷಿಯ ಆಗಮನ

(೫೯ ನೆಯ ಪದ್ಯದಿಂದ ೬೮ ನೆಯ ಗದ್ಯ)

**ಪಾತ್ರಗಳು**

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ವ್ಯಾಸ:** ಪರಾಶರ ಮತ್ತು ಸತ್ಯವತಿಯ ಮಗ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ದ್ರೌಪದಿ:** ಅರ್ಜುನನ ಹೆಂಡತಿ.

## ವ್ಯಾಸ ಮಹರ್ಷಿಯ ಆಗಮನ

ಕನಕ ಪಿಶಿಂಗ ತುಂಗ ಜಟಿಕಾವಳಯನ್, ಕುಡುಮಿಂಚಿನ ಓಳಿಯನ್ ನೆನೆಯಿಸೆ, ನೀಲ ನೀರದ ತನುಚ್ಛವಿ ಭಸ್ಮ ರಜೋವಿಲಿಪ್ತನ್, ಅಂಜನಗಿರಿಯನ್ ಶರಜ್ಜಳಧರನ್ ಕವಿದಂತಿರೆ, ಚೆಲ್ವನಾಳ್ದು ಭೋಂಕನೆ ನಭದಿಂದಮ್ ವೃದ್ಧಪರಾಶರಾತ್ಮಜನ್ ಅಂದು ಅಲ್ಲಿಗೆ ಇಳಿದನ್. ಅಂತು ನಭೋವಿಭಾಗದಿನ್ ಧರಾವಿಭಾಗಕ್ಕೆ ಇಳಿತಂದ ಕೃಷ್ಣದ್ವೈಪಾಯನನನ್ ಕಂಡು, ಅಜಾತಶತ್ರು ತನ್ನೇಱಿದ ಸ್ಫಟಿಕ ಶಿಳಾತಲದ ಪಟ್ಟಕದಿಂದೆ ಇಳಿದು, ನಿಜಾನುಜಸಹಿತಮ್ ಇದಿರ್ ವಂದು, ಧರಾತಳನಿಷ್ಠ ಲಲಾಟಪಟ್ಟನ್ ಸಾಷ್ಟಾಂಗವೆಱಗಿ ಪೊಡೆವಟ್ಟು, ತದೀಯ ಆಶೀರ್ವಾದಮನ್ ಆಂತು, ತತ್ ಶಿಳಾತಳದೊಳ್ ಕುಳ್ಳಿರಿಸಿ, ವನಕುಸಮಂಗಳಿಂದ ಅರ್ಘ್ಯಮೆತ್ತಿ, ಸರೋವರಜಲಂಗಳನ್ ಪದ್ಮಪತ್ರ ಪುಟಂಗಳಿನ್ ತಂದು ಪದಪದ್ಮಂಗಳನ್ ಕರ್ಚಿ, ತತ್ಪಾದ ಪವಿತ್ರೋದಕಂಗಳನ್ ಅನಿಬರುಮ್ ಉತ್ತಮಾಂಗದೊಳ್ ತಳಿದುಕೊಂಡಿರ್ದಾಗಳ್ ಸತ್ಯವತೀನಂದನನ್ ತನ್ನ ಮಕ್ಕಳ ಸಾಯಸಂಗಳ್ಗೆ ಮನ್ಯುಮಿಕ್ಕು ಕಣ್ಣ ನೀರನ್ ನೆಗಪೆ, ಮಹಾಪ್ರಸಾದಮ್ ಎಂದು ಧರ್ಮನಂದನನ್ ಇಂತು ಎಂದನ್.

**ಧರ್ಮರಾಯ:** ಮುನೀಶ್ವರಾ, ಭವತ್ ಚರಣ ಪದ್ಮ ನಿರೀಕ್ಷಣದಿನ್ ಈಗಳ್ ಎಮ್ಮ ವನವಾಸ ಪರಿಶ್ರಮಮ್ ನೀಗಿದುದು. ಆ ಸಾಗರ ಮೇಖಳಾವೃತ ಧರಿತ್ರಿಯನ್ ಈಗಳ್ ಆಳ್ದೆವು. ಎಮ್ಮ ಹೃದ್ರೋಗಮ್ ಈಗಳ್ ಅಡಂಗಿತು. ಈಗಳ್ ಅನೇಕ ಮಂಗಳ ಪರಂಪರೆಗಳ್ ದೊರೆಕೊಂಡುವು. ಏನಾಗದೊ ಪೇಳ್ ಆಪತ್ಪಯೋಧಿಯೊಳಗೆ ಅತ್ಯಾಪತ್ತಿಂದೆ ಅಳ್ಕಿಮೆಳ್ಕಿ ನಮೆವ ಎಮಗೆ ಪಾಪಹರ ನೀಮೆ ಶರಣ್. ಬಗೆದು ಎಮಗೆ ಆಪತ್ ಪ್ರತೀಕಾರಮ್ ಆವುದು ಈಗಳೆ ಬೆಸಸಿಮ್.

(ಎಂಬುದುಮ್ ಆ ಮುನೀಂದ್ರನ್...)

**ವ್ಯಾಸ:** ಆಮುಮ್ ಅಂತೆಂದೆ ಬಂದೆವು. ಉಂತೆ ಸುರರ್ಗೆ ಅಮೃತಮನ್ ಕಳಾಂತರದಿಂದೆ ಇತ್ತು ಅಸಿಯನಾದ ಚಂದ್ರನವೊಲ್ ಭೂಭರಮನ್ ನನ್ನಿಗೆ ದಾಯಿಗರ್ಗೆ ಇರದೆ ಇತ್ತು, ಎಡರೊತ್ತೆ ನೀನೆ ಧನ್ಯನಯ್ ಅಲ್ತೇ. ಕೂಸುತನದೊಳ್ ಆದೊಡಮ್ ನೀನ್ ಎಮಗೆ ಬೇಱೆ, ಸುಯೋಧನನ್ ಏನ್ ಬೇಱೆಯೆ. ಇನ್ನೇನ್ ಎಂಬುದೊ. ಅಯ್ವರೊಳಮ್ ಪಂಬಲ್ ಪಿರಿದು ನಿಮ್ಮೊಳ್ ಗುಣಪಕ್ಷಪಾತಮ್ ಅಪ್ಪುದು.

(ಎಂದು ತನ್ನ ವರ್ತನಮುಮ್ ಮೋಹಮನ್ ಉಂಟುಮಾಡೆ ಮತ್ತಮ್ ಇಂತು ಎಂದನ್.)

**ವ್ಯಾಸ:** ಪನ್ನೆರಡು ವರುಷದ ಅವಧಿಯುಮ್ ಇನ್ ನೆಱೆಯಲ್ ಬಂದುದು. ಅಹಿತನ್ ಇಳೆಯನ್ ಕುಡನ್. ಕಾಳೆಗಮ್ ಆಸನ್ನಮ್. ಪನ್ನಗಕೇತನನ ಚಲದ ಕಲಿತನದ ಅಳವನ್ ಅಱಿಯಿರೆ. ಪರಶುರಾಮನನ್ ಅಂಜಿಸಿದ ಬೀರಕ್ಕೆ ಆಗರಮಾದ ನದೀಜನ್ ಏನ್ ದೊರೆಯನ್; ಕುಂಭಪ್ರೋದ್ಭವನ್ ಏನ್ ದೊರೆಯನ್ ಗಳ; ಆತನ ಪುತ್ರನ್ ಏನ್ ದೊರೆಯನ್; ಕೃಪ ಏನ್ ದೊರೆಯನ್; ಅಂತು ಆ ಪಾಳಿಯೊಳ್ ಅಂಕದ ಕರ್ಣನ್ ಏನ್ ದೊರೆಯನ್; ಇಂತಿವರ್ ಒರ್ಬರಿನ್ ಒರ್ಬರ್ ಗರ್ವಿತರ್ ಅಗ್ಗಳಮ್ ಅಲ್ಲರೇ. ಅವರ್ಗಳ ಮುಳಿಸುಗಳುಮ್ ಮುಳಿದು ತುಡುವ ದಿವ್ಯೇಷುಗಳುಮ್. ಪ್ರಳಯದುರಿ ಕಾಳಕೂಟದ ಗುಳಿಗೆ, ಪುರಾಂತಕಲಲಾಟನೇತ್ರಾನಳನ ಒಂದು ಅಳವಿಗಮ್ ಅಗ್ಗಳಮ್. ಅದು ಕಾರಣದಿಂದ ಅವರನ್ ಗೆಲ್ವಾಗಳ್ ವಿಕ್ರಮಾರ್ಜುನನಲ್ಲದೆ ಗೆಲ್ಲನ್. ಅದಱಿಂದ ಆತಂಗೆ ದಿವ್ಯಾಸ್ತ್ರಂಗಳನ್ ಪಡೆಯಲ್ವೇಳ್ಪುದು. ಅದನ್ ಪಡೆವ ಉಪಾಯಮುಮನ್ ಮಂತ್ರಮುಮನ್ ಉಪದೇಶಂಗೆಯ್ಯಲ್ ಬಂದೆವು.

(ಎಂದು ಯುಧಿಷ್ಠಿರಂಗೆ ವೇಳ್ದು, ವಿಕ್ರಮಾರ್ಜುನಂಗೆ ಮಂತ್ರಾಕ್ಷರಂಗಳನ್ ಉಪದೇಶಮ್ ಗೆಯ್ದು, ಗುಹ್ಯಕನ್

ಎಂಬನನ್ ಸ್ಮರಣಮಾತ್ರದೊಳ್ ಬರಿಸಿ...)

**ವ್ಯಾಸ:** (ಗುಹ್ಯಕನಿಗೆ)

ಸಾಹಸಾಭರಣನನ್ ಇಂದ್ರಕೀಲ ನಗೇಂದ್ರಮನ್ ಎಯ್ದಿಸಿ ಬರ್ಪುದು.

(ಎಂದು ಪೇಳ್ವುದುಮ್, ಧರ್ಮಪುತ್ರನ್ ಆ ಮುನೀಂದ್ರಂಗೆ ಸಾಷ್ಟಾಂಗವೆಱಗಿ ಪೊಡೆವಡೆ, ಪರಸಿ ಪಯೋಧರ ಪಥಕ್ಕೆ ಒಗೆದನ್. ಇತ್ತ ವಿಕ್ರಾಂತತುಂಗನುಮ್ ಧರ್ಮಪುತ್ರಂಗಮ್ ವಾಯುಸುತಂಗಮ್ ಪೊಡೆವಟ್ಟು...)

**ಅರ್ಜುನ:** ಬೆಸಕೇಳ್ವೆನ್.

(ಎಂದಾಗಳ್, ಪಾಂಚಾಲರಾಜ ತನೂಜೆ ಇಂತು ಎಂದಳ್.)

**ದ್ರೌಪದಿ:** ಮೆಯ್ ಸೊಕಮನ್ ಬಗೆಯದೆ, ಪಗೆವರ ಕಡುವೆರ್ಚ್ಚನ್ ಬಗೆ. ಎನ್ನ ಪೂಣ್ಕೆಯನ್ ಎರ್ದೆಯೊಳ್ ಬಗೆ. ಮುನಿಯ ಮಂತ್ರ ಪದಮನ್ ಬಗೆ. ಪಾರ್ಥಾ, ನಿನ್ನ ಬಗೆದ ಬಗೆಯೊಳ್ ಕೂಡುಗೆ.

(ಎಂದು ಬುದ್ಧಿವೇಳ್ದು, ಮನದ ಎಱಕಮ್ ಮನೋವೇಗದಿನ್ ಪರಿಯೆ ಸೈರಿಸಲಾಱದೆ, ಬಳ್ವಳ ನೀಳ್ದ ಕಣ್ ಮಲರ ತಳ್ತ ಎಮೆಯಿನ್ ಕರೆಗಣ್ಮಿ, ಬೆಳ್ಗಡಲ್ಗಳ್ ಪರಿಯಲ್ಕಮ್ ಆಟಿಸಿದೊಡೆ, ಒಯ್ಯನೆ ಮಂಗಳ ಭಂಗ ಭೀತಿಯನ್ ತಳ್ವದೆ ಮಾಡೆ, ಬಾಷ್ಪ ಜಳಮನ್ ಕಳೆದು, ಅಳ್ಕಱಿನ್ ಈಯೆ, ಸಂಬಳಮ್ ಕೊಳ್ವವೊಲ್ ಆ ತಳೋದರಿಯ ಚಿತ್ತಮನ್ ಅರ್ಜುನನ್ ಇಳ್ಕುಳಿಗೊಂಡನ್. ಅಂತು ಯಾತ್ರಾ ಉದ್ಯುಕ್ತನಾಗಿ ಗುಹ್ಯಕನ ಪೆಗಲನ್ ಏಱಿ ಗಂಧೇಭವಿದ್ಯಾಧರನ್ ವಿದ್ಯಾಧರನಂತೆ ಗಗನತಳಕ್ಕೆ ಒಗೆದು ಮಹೇಂದ್ರಕೀಲಾಭಿಮುಖನ್ ಆದನ್.)



## ೪೧. ಅಪ್ಸರೆಯರ ಸೋಲು

(೯೧ ನೆಯ ಗದ್ಯದಿಂದ ೯೪ ನೆಯ ಗದ್ಯ)

**ಪಾತ್ರಗಳು**

ಅಪ್ಸರೆಯರು: ದೇವಲೋಕದ ಹೆಂಗಸರು.

## ಅಪ್ಸರೆಯರ ಸೋಲು

ಅಂತು ಆಕೆಗಳ್ ಎಡೆಯಾಡಿಯುಮ್, ಮನಂಗೊಳೆ ಪಾಡಿಯುಮ್, ಮನುಜಮಾಂಧಾತನನ್ ಸೋಲಿಸಲಾಱದೆ, ಸಹಜ ಮನೋಜನ ರೂಪಿಂಗಮ್ ಸುರತಮಕರಧ್ವಜನ ಸೌಂದರ್ಯಕ್ಕಮ್ ಗಂಧೇಭವಿದ್ಯಾಧರನ ಗಂಡಗಾಡಿಗಮ್ ತಾಮೆ ಸೋಲ್ತು, ಎಯ್ದೆ ವಂದು...

**ಅಪ್ಸರೆಯರು:** ಬೂದಿ ಜೆಡೆ ಲಕ್ಕಣಮ್ ತಪಕೆ ಆದುವು. ಎರಲ್ದೊಣೆ ಶರಾಸನಮ್ ಕವಚಮ್ ಇವು ಎಂತು ಆದುವೊ. ನಿನ್ನ ತಪದ ಪಾಂಗು ಮುತ್ತುಮ್ ಮೆಳಸಮ್ ಕೋದಂತುಟೆ ಎಂತು ಗಡಾ. ಗಾವಿಲ, ಕಡುತಪದಿಂದೆ ನಿನ್ನ ಪಡೆಪು ಆವುದೊ ಸಗ್ಗಮಲ್ತೆ. ಪೋ... ಮೂರ್ಖ... ನುಡಿಯವೊ ಸಗ್ಗದ ಫಲಮ್ ಸುಖಮಲ್ತೆ. ಸುಖಕ್ಕೆ ಒಡಂಬಡದವರ್ ಆರೊ. ಪೇಳ್, ಪೆಂಡಿರೊಳಗೆ ಆರ್ ಪೆಱರ್. ಆಮೆ ದಲ್. ಆಮೆ ಬಂದು ಕಾಲ್ವಿಡಿದಪೆವು.

ಇಂಬುಕೆಯ್ವೊಡೆ ಇವು ಮೆಲ್ಲಡಿಗಳ್ ಗಡ. ಬೂದಿಯನ್ ಕರ್ಚು ಕೋಕಿಲಕುಳ ಗಳ ನಿನದ ಆಕುಳ ರವಮ್ ಆಗಳುಮ್ ಇಂಪನ್ ಪಡೆದುದು. ನೋಡ, ಈಕೆಗಳ ಚಳಿತ ಲುಳಿತ ಭ್ರೂಕುಟಿಯೇ ಪರಮಸುಖದ ಕೋಟಿಯನ್ ಈಗುಮ್.

(ಎಂದು ಎನಿತಾನುಮ್ ತೆಱದೊಳ್ ಅಳಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳನ್ ನುಡಿದುಮ್, ಕಾಲ್ವಿಡಿದುಮ್, ಅಚಳಿತ ಧೈರ್ಯನ ಮನಮನ್ ಚಳಿಯಿಸಲಾಱದೆ, ಅಚ್ಚರಸೆಯರ್ ಅಚ್ಚಿಗಂಗೊಂಡಂತಾಗೆಯುಮ್, ಗಂಧರ್ವರ್ ಗರ್ವಮನ್ ಉಳಿದು ಪೋಗೆಯುಮ್, ಕಾಮದೇವನ್ ಏವಮನ್ ಕೆಯ್ಕೊಂಡು ಸೀತಂತೆ ಮೊಗಮ್ ಮಾಡಿ ಪೋಗಿ,

ದೇವೇಂದ್ರನ ಮೊಗಮನ್ ನೋಡಲ್ ನಾಣ್ಚಿ ಇರ್ದನ್. ಆಗಳ್ ಇಂದ್ರನ್ ನರೇಂದ್ರತಾಪಸನ ಧೈರ್ಯಕ್ಕೆ ಮೆಚ್ಚಿ ಧರಾಮರ ವೇಷದೊಳ್ ಇಂದ್ರಕೀಲನಗೇಂದ್ರಮನ್ ಎಯ್ದೆವಂದು...)



# ೪೨. ದೇವೇಂದ್ರ ಮತ್ತು ಅರ್ಜುನರ ಭೇಟಿ

(೧ ನೆಯ ಪದ್ಯದಿಂದ ೯ ನೆಯ ಪದ್ಯ)

## ಪಾತ್ರಗಳು

ಇಂದ್ರ: ದೇವತೆಗಳ ಒಡೆಯ.

ಅರ್ಜುನ: ಪಾಂಡುರಾಜ ಮತ್ತು ಕುಂತಿಯ ಮಗ.

## ದೇವೇಂದ್ರ ಮತ್ತು ಅರ್ಜುನರ ಭೇಟಿ

ಶ್ರೀಯನ್ ಭುಜಬಳದಿನ್ ನಿರ್ದಾಯಾದ್ಯಮ್ ಮಾಳ್ಪ ಬಗೆಯಿನ್, ಅವಿಕಳನಿಯಮಶ್ರೀಯನ್ ಅಳವಡಿಸಿ ನಿಂದ, ಧರಾಯುವತೀಶನನ್ ಉದಾತ್ತನಾರಾಯಣನನ್ ಕಂಡು ನಿಜತನಯನ ಅಳವು ಎರ್ದೆಗೊಂಡಿರೆ, ಮುದುಪಾರ್ವನಾಗಿ ಮೆಲ್ಲನೆ ಸಾರ್ವ ಆಖಂಡಳನನ್ ಕಾಣಲೊಡಮ್ ಗಾಂಡಿವಿಗೆ ಅಶ್ರುಜಲಂಗಳ್ ಇರದೆ ಉರ್ಚಿ ಪಾಯ್ದುವು. ಅಂತು ಮನದೊಳಾದ ಮೋಹರಸಮೆ ಕಣ್ಣಿಮ್ ತುಳುಂಕುವಂತೆ ಪೊಱಪೊಣ್ಮುವ ನಯನಜಲಂಗಳನ್ ಉತ್ತರೀಯ ವಲ್ಕಲ ವಸನೋಪಾಂತದೊಳ್ ಒತ್ತುತ್ತುಮ್, ಅತಿಥಿಗೆ ಅತಿಥಿ ಸತ್ಕಾರಮೆಲ್ಲಮನ್ ನೆಱೆಯೆ ಮಾಡಿದಾಗಳ್, ಇಂದ್ರನ್ ನರೇಂದ್ರತಾಪಸನನ್ ಇಂತು ಎಂದನ್.

**ಇಂದ್ರ:** ನೀನಾರ್ಗೆ... ನಿನ್ನ ಪೆಸರೇನ್... ಈ ನಿಯಮಕ್ಕೆ ಮೆಯ್ಯನ್ ಎಂತು ಒಡ್ಡಿದೆ. ಇದು ದಲ್, ತಾನ್ ಆಶ್ಚರ್ಯಮ್. ಇದೇನ್ ಅಜ್ಞಾನಿಯವೋಲ್ ತಪಕೆ ಬಿಲ್ಲುಮ್ ಅಂಬುಮ್ ದೊರೆಯೇ.

(ಎನೆ ಸಾಹಸಾಭರಣನ್ ಇಂತು ಎಂದನ್.)

**ಅರ್ಜುನ:** ನಿನ್ನೆಂದಂತುಟೆ ಎನ್ನಿರ್ಪ ಇರವು ಮೋಕ್ಷಕ್ಕೆ ಅಘಟಮಾನಮ್. ಐಹಿಕದ ತೊಡರ್ಪು ಎನ್ನ ಇರವಿನೊಳುಂಟು. ಅಱಪದೆ ನಿನ್ನನ್ ಪುಸಿಯಾಡಿ ಕಾಡಲ್ ಎನಗೆ ಏನ್ ದೊರೆಯೇ.

ನಿನಗಮ್ ಪೇಳ್ವೊಡೆ ಪಾಂಡುರಾಜತನಯನ್ ಗಾಂಡೀವೆಯೆನ್. ನೆಲನ್ ಜೂದಿನೊಳ್ ದಾಯಿಗಂಗೆ ಒತ್ತೆವೋಗೆ, ಬನಮನ್ ಪೊಕ್ಕ ಅಣ್ಣನೆಂದ ಒಂದು ಮಾತನ್ ಅಣಮ್ ಮೀಱದೆ ನಿಂದು, **'ಶಂಕರನನ್ ನೀನ್ ಆರಾಧಿಸು'** ಎಂದಿಂತು ಇದನ್ ಮುನಿ ಪಾರಾಶರನ್ ಒಲ್ದು ಪೇಳೆ, ಹರ ಬರ್ಪನ್ನಮ್ ತಪಂಗೆಯ್ದಪೆನ್.

ಅಂತುಮ್ ಅಲ್ಲದೆ ಸ್ಫುರಿತ ತಪೋಮಯ ಅನಳನಿನ್ ನೆಗಳ್ದ ಈ ಗಿರೀಂದ್ರ ಕಂದರದೊಳಗೆ ಈ ಒಡಲನ್ ಇಂತೆ ದಲ್ ಕರಗಿಪೆನ್. ಪೆಱತೇನ್ ಪಡೆಮಾತೊ, ಮೇಣ್ ಪುರಂದರನ್ ಒಸೆದಿತ್ತುದು ಒಂದು ಬರದಿಂದೆ ಉಱದೆ ಎನ್ನ ವಿರೋಧಿ ವರ್ಗಮನ್ ಕರಗಿಪೆನಲ್ಲದೆ, ಇಲ್ಲಿ ದ್ವಿಜೋತ್ತಮಾ, ಸೆರಗನ್ ಬೆರಗನ್ ಬಗೆಯೆನ್.

(ಎನೆಯೆನೆ ರತ್ನರಶ್ಮಿ ಜಟಿಳಮ್ ಮಕುಟಮ್ ಮಣಿಕುಂಡಳಮ್ ಕನತ್ಕನಕ ಪಿಶಂಗ ದೇಹರುಚಿ ನೀಳ ಸರೋಜವನಂಗಳ್ ಆಗಳ್ ಉಳ್ಳನಿತುಮ್ ಅಲರ್ವವೊಲ್ ಪೊಳೆವ ಕಣ್ಗಳುಮ್ ವಿಕ್ರಮಾರ್ಜುನನ ಮನಕ್ಕೆ ಅಳ್ಕಱನ್ ಈಯೆ, ಇಳಾ ಅಮರನ್ ಅಂದು ಅಮರೇಂದ್ರ ರೂಪಮನ್ ತೋಱದನ್. ಅಂತು ತನ್ನ ಸಹಜರೂಪಮನ್ ತೋಱ, ಮನದ ಅಳ್ಕಱನ್ ತೋಱಲೆಂದು ಮಗನನ್ ಅಪ್ಪಿಕೊಂಡು...)

**ಇಂದ್ರ:** ಅರಿನೃಪರನ್ ಸಾಧಿಸುವೊಡಮ್, ಅಸ್ತ್ರಚಯಮನ್ ಸಾಧಿಸುವೊಡಮ್ ಇನ್ನುಮ್ ತಪೋಗ್ನಿಯಿಂದೆ ತನುವನ್ ಬಾಧಿಸು. ಮಗನೆ, ನೀನ್ ದುರಿತಹರನನ್ ಹರನನ್ ಆರಾಧಿಸು.

(ಎಂದು ತಿರೋಹಿತನಾಗಿ ಪುರಂದರನುಮ್ ಪೋದನ್. ಇತ್ತ ತಪದೊಳ್ ನರನ್ ಇಂತು ಒಂದಿ ನಿಲೆ...)



## ೪೩. ಕಿರಾತಾರ್ಜುನೀಯ ಪ್ರಸಂಗ

(೯ ನೆಯ ಪದ್ಯದಿಂದ ೨೬ ನೆಯ ಗದ್ಯ)

### ಪಾತ್ರಗಳು

**ತಪೋಧನರು:** ಇಂದ್ರಕೀಲ ಪರ್ವತ ಪ್ರಾಂತ್ಯದಲ್ಲಿದ್ದ ಮುನಿಗಳು..

**ಶಿವ:** ದೇವರು.

**ಗಿರಿಜೆ:** ಶಿವನ ಹೆಂಡತಿ

**ಗುಹ:** ಶಿವನ ಆಪ್ತ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

# ಕಿರಾತಾರ್ಜುನೀಯ ಪ್ರಸಂಗ

ಇತ್ತ ತಪದೊಳ್ ನರನ್ ಇಂತೊಂದಿ ನಿಲೆ, ತಪದ ಬಿಸುಪಿನ್ ವನದೊಳುಳ್ಳ ತಪಸಿಯರ ತಪಮ್ ಬೆಂದು ಅಳಿದುದು. ನರೇಂದ್ರತಾಪಸನ ತಪೋಮಯೂಖಾವಳಿಗಳ್ ಪಗಲ್ ಖರಕರಕಿರಣಾವಳಿಯನ್ ಪರಿದು ಎಳ್ಬಿಟ್ಟಿದುವು. ಇರುಳ್ ಶಶಿರುಚಿಯನ್ ಪರಿಭವಿಸಿ ನಭಮನ್ ಅಡರ್ದುವು. ಅಂತು ಉಗ್ರೋಗ್ರ ತಪಂಗೆಯ್ಯೆ, ತತ್ ತಪಸ್ತಪನ ವಿಪುಳ ಮರೀಚಿಗಳ್ ತಮಗೆ ತಪವಿಘಾತಮನ್ ಮಾಡುವುದುಮ್, ಇಂದ್ರಕೀಲನಗೇಂದ್ರದ ತಪೋಧನರೆಲ್ಲಮ್ ನೆರೆದು ಬಂದು, ಕೈಲಾಸದೊಳ್ ವಿಳಾಸಂಬೆರಸು ಗಿರಿಜೆಯೊಳ್ ತಳ್ತಿರ್ದ ಬಾಳೇಂದುಚೂಡಾಮಣಿಗೆ ಸಾಮಂತಚೂಡಾಮಣಿಯ ತಪಃಪ್ರಭಾವಮನ್ ಇಂತೆಂದು ಬಿನ್ನಪಮ್ ಗೆಯ್ದರ್.

**ತಪೋದನರ್:** ಆವನ್ ಎಂದು ಅಱಿಯಲ್ಕೆ ಬಾರದು. ಅಪೂರ್ವನ್ ಒರ್ವನ್ ಅರಾತಿ ವಿದ್ರಾವಣನ್ ತಪಕೆಂದು ನಿಂದೊಡೆ, ತತ್ತಪೋಮಯ ಪಾವಕನ್ ದಾವ ಪಾವಕನಂತೆವೋಲ್ ಸುಡೆ, ಎಮ್ಮ ತಪಂಗಳ್ ಬೆಂದುವು. ಇನ್ನಾವ ಶೈಳದೊಳ್ ಇರ್ಪೆವು. ತ್ರಿಪುರಾಂತಕಾ, ನೀನ್ ಇರ್ಪ ಎಡೆವೇಳ. ಆರೋಪಿತ ಚಾಪನ್, ಸಂಧಾರಿತ ಕವಚನ್, ಧೃತೋಗ್ರಶರಯುಗನ್ ಅವನ್ ತಾನ್ ಆರ ಅಂದಮ್ ಅಲ್ಲ. ತ್ರಿಪುರಾರೀ ಕೇಳ್, ತ್ರಿಪುರಮಿಸುವ ನಿನ್ನನ್ನೆ ಪೋಲ್ವನ್.

(ಎಂಬುದುಮ್ ಅದೆಲ್ಲಮನ್ ಕೇಳ್ದು, ಆತನ್ ಆವನ್ ಎಂಬುದನ್ ಅಱಿಯಲೆಂದು ಅಭವನ್ ಧ್ಯಾನದೊಳ್ ನೆಱೆದು, ಇನಿಸಾನುಮನ್ ಕಣ್ಗಳನ್ ಅರೆಮುಚ್ಚಿ ನಿಶ್ಚಳಿತನ್ ತಾನಿರ್ದು, ಮಱೆದು ಕೆಂದಿದ ಮೀನನ್ ತಳ್ತು ಆಡದೆ ಇರ್ದ ಮಡುವಮ್ ಪೋಲ್ತನ್. ಅಂತು ಪೋಲ್ತು ದಿವ್ಯಜ್ಞಾನದೊಳ್ ಮಹೇಶ್ವರನ್

ಉದಾರ ಮಹೇಶರನ್ ಅಪ್ಪುದನ್ ಅಱಿದು, ಬೆರಲನ್ ಮಿಡಿದು ಮುಗುಳ್ನಗೆ ನಕ್ಕು ನೆನೆದು...)

**ಶಿವ:** ಆತಂಗೆ ತಕ್ಕುದನ್ ಆನೆ ಬಲ್ಲೆನ್.

(ಎಂದು ಮುನೀಂದ್ರ ವೃಂದಮನ್ ಪೋಗಲ್ವೇಳ್ದು, ಮುನ್ನ ದೇವೇಂದ್ರನ್ ತನಗೆ ಮೂಕದಾನವನ ಪುಯ್ಯಲನ್ ಬಿನ್ನಪಂಗೆಯ್ದುದನ್ ಅವಧಾರಿಸಿ, ಮೂಕದಾನವನ್ ಆದಿ ವರಾಹ ರೂಪದೊಳ್ ಇರ್ದುದುಮನ್ ಅಱಿದು...)

**ಶಿವ:** (ತನ್ನಲ್ಲಿಯೇ)

ಮನುಜ ಮಾಂಧಾತನಿಂದಮ್ ಆ ದೈತ್ಯನನ್ ಕೊಲಿಸಲುಮ್, ಸಾಹಸಾಭರಣನೊಳ್ ಏನಾನುಮ್ ಎಡಂಬಡಮ್ ಮಾಡಿ, ಮಾಯಾಯುದ್ಧದೊಳ್ ಆತನ ಸಾಹಸದ ಚಲದ ಬಲದ ಬಿಲ್ಲಾಳ್ತನದ ಅಳವಿಗಳನ್ ಅಳೆದು ನೋಡಿ, ವರದನಪ್ಪೆನ್.

(ಎಂಬುದಮನ್ ಬಗೆದು, ಶಂಭು ವನಚರನಾಗಿ, ಗಿರಿಜಾತೆಯನ್ ಓತು ಪುಳಿಂದಿ ಮಾಡಿ, ನಚ್ಚಿನ ಗುಹನನ್ ಕಿರಾತ ಬಲನಾಯಕನಾಗಿರೆ ಮಾಡಿ, ಭೂತಮುಳ್ಳನಿತುಮನ್ ಬೇಡವಡೆ ಮಾಡಿ, ಯುಗಾಂತ ಪಯೋಧರಾಳಿ ಭೋಂಕನೆ ಕವಿವ ಅಂದದಿನ್ ಮೃಗಯಾ ನಿಧಾನಮನ್ ಆ ಬನಮನ್ ಕವಿದನ್. ಅಂತು ಕವಿದೊಡೆ ಆ ಕಳಕಳಕ್ಕೆ ಏವಯಿಸಿ ವರಾಹ ರೂಪದ ಮೂಕದಾನವನ್ ಪೊರಳೆ ವಾರಿಧಿಗಳ್ ಕಲಂಕಿದುವು; ಮೆಯ್ಯನ್ ಉರ್ದೆ ಉದಗ್ರ ಮಂದರಮ್ ಅದು ಅಂದು ಅಲುಗಿತ್ತು; ಬಾಯ್ಗೆಯೆ ದಿಗ್ಗಜಮ್ ಪೆಱಗಿಟ್ಟುವು; ಆಂತರದೆ ತೊಟ್ಟನೆ ದಾಡೆಗುಟ್ಟೆ ತಾರಗೆಗಳ್ ಕಳಲ್ದು ನಭಂಬೆರಸು ಬಿಳ್ದುವು; ದೈತ್ಯವರಾಹನಾ ಪೆಂಪು ಇದೇನ್ ಪಿರಿದಾಯ್ತೊ. ಅಂತು ಆ ವರಾಹನ್ ಆದಿವರಾಹನಾದ ಮುರಾಂತಕನುಮನ್ ಇಳಿಸಿ, ನೆಲನ್ ಕಪ್ಪಂಗವಿಯುಮಾಗೆ ಬರೆ, ಪೆಱಗೆ ಕೃತಕ ಕಿರಾತನ್, ಅಟ್ಟುತ್ತುಮ್ ಬರೆ, ತನ್ನತ್ತ ಮೊಗದೆ ಬರ್ಪುದನ್ ಕಂಡು, ಅಮೋಘಾಸ್ತ್ರ ಧನಂಜಯನ್ ಒಂದು ಅಮೋಘಾಸ್ತ್ರಮನ್ ಅಕ್ಷೂಣ ಬಾಣಧಿಯಿಂದಮ್ ಉರ್ಚಿಕೊಂಡು, ಗಾಂಡೀವದೊಳ್

ಪೂಡಿ, ತೆಗೆದು ಎಚ್ಚ ಅರ್ಜುನನ ಅಂಬು ತುದಿಯಿನ್ ಬಾಲಂಬರಮ್ ತೀವೆ, ಸೌಳಗೆ ಪೋಪಂತಿರೆ ಪಂದಿ... ನೋಡ, ಸಂಬಳಗೆವೋಯ್ತು ಎಂಬನ್ನೆಗಮ್ ಕೊಂಡುದು. ಒಯ್ಯಗೆ ಪಾರ್ದುಿ ಎಚ್ಚ ವೃಷಾಂಕನ ಅಂಬು ತನುವನ್ ಪಚ್ಚಂತೆ ತೊಟ್ಟಗೆ ವೈಮಾನಿಕ ಕೋಟಿಗೆ ಅಂದು ಪಿರಿದೊಂದು ಉತ್ಸಾಹಮ್ ಅಪ್ಪನ್ನೆಗಮ್ ಕೊಂಡತ್ತು. ಅಂತು ಮೂಕದಾನವನನ್ ಆ ನೆವದೊಳೆ ಕೊಂದು, ವರಾಹ ಅರುಣ ಜಲಧಾರಾ ಅರುಣಮ್ ಆಗಿರ್ದ ಆತ್ಮೀಯ ಬಾಣಮನ್ ಪರಾಕ್ರಮ ಧವಳನ್ ಒಯ್ಯನೆ ಕೊಂಡು ಬಾಣಧಿಯೊಳ್ ಇಟ್ಟು, ಪೋಗಿ ಪೂಗೊಳದೊಳ್ ಕರಚರಣ ಪ್ರಕ್ಷಾಳನಮ್ ಗೆಯ್ದು, ಮಗುಳ್ದುಮ್ ಏಕಪಾದ ತಪದೊಳ್ ನಿಲೆ, ಗೀರ್ವಾಣನಾಥಾತ್ಮಜನಲ್ಲಿಗೆ ಗುಹನನ್ ಅಹಿಭೂಷಣನ್ ಅಂಬನ್ ಬೇಡಿಯಟ್ಟಿದೊಡೆ ಆತನ್ ಬಂದು...)

**ಗುಹ:** ಗೊರವರೆ, ತಪಕ್ಕೆ ಬೂದಿಯುಮ್ ಜೆಡೆಯುಮ್ ಅಕ್ಕೆ; ತನುತ್ರಮ್, ಈ ಭಯಂಕರ ಧನು, ಖಳ್ಗಮ್, ಅತ್ತಪರಮ್, ಇಂತು ಎರಡುಮ್ ದೋಣೆ ತೀವಿದ ಅಂಬುಮ್ ಒಂದಿರವು ತಪಕ್ಕೆ. ಇದು ಎಂತುಟೊ; ತಪಂಗಳುಮಿಲ್ಲಮ್. ಅವು ಉಳ್ಳೊಡೆ, ಈಗಳ್ ಎಮ್ಮ ಅರಸರ ನಚ್ಚಿನ ಎಚ್ಚ ಶರಮನ್ ಸೆರಗಿಲ್ಲದೆ ಕೊಂಡು ಬರ್ಪಿರೇ. ಅಱಿಯದೆ ತಂದೊಡಮ್ ಏನ್. ಎಮ್ಮ ಎರೆಯಂಗೆ ಅದನ್ ಎಮ್ಮ ಕೆಯ್ಯೊಳ್ ಅಟ್ಟಿಮ್. ನೀಮ್ ಇಂತು ಅಱಿಯುತ್ತಮ್, ಪೆಱರ ಒಡಮೆಯನ್ ಉಱಿ ಸೆಱೆವಿಡಿದಿರ್ಪಿರ್. ಇನ್ನರ್ ಉರ್ವಿಯೊಳ್ ಒಳರೇ.

(ಎಂದು ಕಿರಾತ ದೂತನ್ ತನ್ನನ್ ಅತಿಕ್ರಮಿಸಿ ನುಡಿದುದರ್ಕೆ ಮುಳಿದು ಪರಾಕ್ರಮಧವಳನ್ ಇಂತು ಎಂದನ್.)

**ಅರ್ಜುನ:** ಬೇಡಂಗೆ ಮೃಗಮನ್ ಇಸಲ್ಕೆ ದಸಿಕು ಒಂದು ದೊರೆಯಕ್ಕುಮ್. ಈ ಜಗಂಗಳನ್ ಅಳ್ಳಾಡಿಸುವ ಮದೀಯ ಉಗ್ರಾಸ್ತ್ರಮ್ ಪೆಸರ್ಗೊಳಲ್ ತನಗೆ ಏನ್ ದೊರೆಯೆ. ಖಳನ್ ಅಳವಱಿಯನ್. ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಮ್ ಆಸನಮ್ ತೋಱುವ, ಬಲ್ಪು ತೋಱುವ, ಎರ್ದೆ ತೋಱುವ ಕಯ್ಪೆಸರಂಗಳ್ ಎಮ್ಮನ್ ಉಂತೆ ಏಱವು. ಬೇಡ... ಬೇಡ...

ಬೇಡದಿರು. ಚಲಮ್ ಬೆರಸು ಅಂಬನಂಬನ್ ಇನ್ ಕಾಱುತೆ ಮೋದಲ್ ಆಟಿಪೊಡೆ, ನಿನ್ನನ್ ಆಳ್ದನಮ್ ನೀನ್ ಬರವೇಳ್ವುದು.

(ಎಂದು ಬಂದ ಕಿರಾತದೂತನನ್ ವಿಕ್ರಾಂತತುಂಗನ್ ಬಗ್ಗಿಸಿದೊಡೆ, ಆ ಮಾತೆಲ್ಲಮನ್ ಆ ಮಾಳ್ಕೆಯೊಳೆ ಪೋಗಿ ಕಪಟ ಕಿರಾತಂಗೆ ಅಱುಪಿದೊಡೆ, ಆತನುಮ್ ಮಾಯಾಯುದ್ಧಮನ್ ಪೊಣರ್ಚಲ್ ಬಗೆದು ಹಸ್ತಿ ಅಶ್ವ ರಥ ಪದಾಥಿ ಬಲಂಗಳನ್ ಎನಿತಾನುಮನ್ ಇದಿರೊಳ್ ತಂದೊಡ್ಡಿದಾಗಳ್, ಪರಸೈನ್ಯಭೈರವನ್ ಮಹಾಪ್ರಳಯ ಭೈರವ ಆಕಾರಮನ್ ಕೆಯ್ಕೊಂಡು ಸೆರಗಿಲ್ಲದೆ ಬಂದು ತಾಗಿ ಚತುರ್ಬಲಮ್ ಕೆದಱೆ, ತಳ್ತದಳಮ್ ಬೆದಱೆ, ಘಟಾಳಿ ಕೆಡೆದು ಅಳ್ಗಿತಳ್ಗಿ ಮಾಣದೆ ಪೆಱಗಿಟ್ಟು ಬಾಯ್ವಿಡೆ, ಗುಣಾರ್ಣವನಂಬು ಲಕ್ಕಲೆಕ್ಕದೆ ಕೊಳೆ, ಚಾತುರಂಗ ಬಲಮ್ ಅಂತು ಅಳಿದು ಅಳ್ಗೆ, ಹರ ಕನಲ್ದು ಒನಲ್ದು ಮಾಣದೆ ಪಾರ್ಥನೊಳ್ ದಿಗಿಭಮ್ ದಿಗಿಭದೊಳ್ ಪೆಣೆವಂತೆ ಪೆಣೆದನ್.

ಅಂತು ಶೂನ್ಯಹಸ್ತದೊಳ್ ಇರ್ವರುಮ್ ಪೆಣೆದು, ಪಲವುಮ್ ಗಾಯದೊಳ್ ಆಯಮ್ ತಪ್ಪದೆ, ಪಿರಿದುಮ್ ಪೊಳ್ತು ಸಲ್ತರ್ಪಿನಮ್ ಪೋರೆ, ದೇವರ್ ಎಲ್ಲರುಮ್ ಅಂಬರ ತಳದೊಳ್ ಇರ್ದು, ಅಂಕಮನ್ ನೋಳ್ಪಂತೆ ನೋಡೆ, ಅಭವನ್ ಪಾರ್ಥನನ್ ಇಕ್ಕಿದನ್. ಅರ್ಜುನನ್ ಆ ತ್ರಿಪುರಹರನನ್ ಇಕ್ಕಿದನ್ ಎನೆ, ಗೆಲ್ಲಕ್ಕೆ ಮುಡಿಗಿಕ್ಕುವಂತೆವೊಲ್ ಹರಿಗನ್ ಹರನನ್ ನೆಲದೊಳ್ ಅವಯವದೆ ಇಕ್ಕಿದನ್. ಅಂತು ನೆಲಕ್ಕಿಕ್ಕಿ ಗಂಟಲನ್ ಮೆಟ್ಟಿದಾಗಳ್, ಪೊಱಕಣ್ಗಮ್ ಮುನ್ನಮ್ ತಾನ್ ಮಱಸಿದ ನೊಸಲ ಒಂದು ಕಣ್ಣುಮ್ ಆಗಳ್ ನೊಸಲಿನ್ ಪೊಱಮಟ್ಟಂತಿರೆ, ರುದ್ರನ್ ಹರಿಗಂಗೆ ಅಗ್ಗಳಗಣ್ಣನ್ ಎಱಕದೆ ತೋಱದನ್. ಉರದೊಳ್ ಫಣಿ; ಕರದೊಳ್ ಬಿಲ್; ಶಿರದೊಳ್ ತೊಱೆ; ತೊಱೆಯ ಕೆಲದೊಳ್ ಪೆಱೆ ಎಸೆದಿರೆ, ಮುಂಗೊರಲೊಳ್ ಕಱೆ ಮಱೆಯಿಲ್ಲದೆ ದೊರೆಕೊಳೆ, ಮೃಡನಡಿಗೆ ಹರಿಗನ್ ಆಗಳ್ ಎಱಗಿದನ್ ಅಂತು ಎಱಗಿ ಪೊಡೆವಟ್ಟು...)

**ಅರ್ಜುನ:** ನೀನ್ ಅಪ್ಪುದನ್ ಅಣಮ್ ಅಱಿಯದೆ, ದಾನವ ಮಾನವ ಸುರೇಂದ್ರ ಮಣಿಮಕುಟತಟ ವ್ಯಾನಪದಂಗೆ, ಆ ನೆಗಳ್ದುದನ್ ಆನ್ ಏತಱಿಕೊಳ್ ಎಂತು ನೀಗುವೆನ್. ನೀನ್ ಬೆಸಸಾ.

(ಎಂದು ವಿನಯವಿನಮಿತ ಉತ್ತಮಾಂಗನಾಗಿ ಕರಕಮಳಂಗಳನ್ ಮುಗಿದು, ತನ್ನ ಮುಂದಿರ್ದ ಪರಾಕ್ರಮಧವಳನ ಪರಾಕ್ರಮಕ್ಕಮ್ ವಿನಯಕ್ಕಮ್ ಮೆಚ್ಚಿ...)

**ಶಿವ:** ಮೆಚ್ಚಿದೆನ್ ಬರವನ್ ಬೇಡಿಕೊಳ್.

**ಅರ್ಜುನ:** ಮಹಾಪ್ರಸಾದಮ್. ಪೆಱತೇನುಮನ್ ಒಲ್ಲೆನ್. ಎನಗೆ ನಿಮ್ಮಡಿ ಪಾಶುಪತಾಸ್ತ್ರಮನ್ ದಯೆಗೆಯ್ವುದು.

**ಶಿವ:** ನಿನ್ನ ತಪಶ್ಶಕ್ತಿಗಮ್ ಭಕ್ತಿಗಮ್ ಮೆಚ್ಚಿತ್ತೆನ್.

(ಎಂದು ಕ್ಲೇಶದ ಫಳಮ್ ಎರ್ದೆಗೊಳ್ಳದೆ, ಈಶನ್ ಮನಮೊಸೆದು. ದಯೆಯಿನ್ ನೆಗಳ್ದ ದಿವ್ಯಾಸ್ತ್ರಮನ್ ಆ ಪಾಶುಪತಾಸ್ತ್ರಮನ್ ಇತ್ತು...)

**ಶಿವ:** ಹರಿಗನ್ ವಿನಾಶಿತರಿಪುವಕ್ಕೆ.

(ಎಂದನ್. ಆಗಳ್ ಈಶ್ವರನ್ ಕೊಟ್ಟುದರ್ಕೆ ತೆಲ್ಲಂಟಿಯೆಂದು ಗೌರಿದೇವಿಯುಮ್ ಅಂಜರಿಕಾಸ್ತ್ರಮ್ ಎಂಬ ಅಮೋಘಾಸ್ತ್ರಮನ್ ವಿಕ್ರಮಾರ್ಜುನಂಗೆ ಕುಡೆ, ಮೂವತ್ತು ಮೂದೇವರುಮ್ ತಂತಮ್ಮ ನಚ್ಚಿನ ಅಂಬುಗಳನ್ ತಂದು ಈಯೆ, ಗುಣಾರ್ಣವನ್ ಸಂಪೂರ್ಣ ಮನೋರಥನ್ ಆಗಿರ್ದಾಗಳ್...)



# ೪೪. ಅಮರಾವತಿಯಲ್ಲಿ ಅರ್ಜುನ

(೨೬ ನೆಯ ಗದ್ಯದಿಂದ ೨೯ ನೆಯ ಗದ್ಯ)

## ಪಾತ್ರಗಳು

**ಇಂದ್ರ:** ದೇವಲೋಕದ ಒಡೆಯ.

**ವಾರಸ್ತ್ರೀಯರು:** ಅಮರಾವತಿ ಪಟ್ಟಣದ ಹೆಂಗಸರು.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ರಂಬೆ:** ದೇವಲೋಕದ ಅಪ್ಸರೆ.

# ಅಮರಾವತಿಯಲ್ಲಿ ಅರ್ಜುನ

ಇಂದ್ರನ್ ಪರಾಕ್ರಮಧವಳನ ಪರಾಕ್ರಮಕ್ಕಮ್ ಏಗೆಯ್ವ ತೆಱನುಮ್ ಅಱಿಯದೆಯುಮ್, ಅತಿಸ್ನೇಹದಿನ್ ಪುಷ್ಪವೃಷ್ಟಿಯುಮನ್ ಆನಂದಬಾಷ್ಪ ವೃಷ್ಟಿಯುಮನ್ ಒಡನೊಡನೆ ಸುರಿದು...

**ಇಂದ್ರ:** ಪಲವು ದಿವಸಮ್ ಉಗ್ರೋಗ್ರತಪದೊಳ್ ಮೆಯ್ಯನ್ ದಂಡಿಸಿದ ಪರಿಶ್ರಮಮ್ ಪೋಗೆ, ಕೆಲವು ದಿವಸಮನ್ ಎಮ್ಮ ಲೋಕದೊಳ್ ವಿಶ್ರಮಿಸಿ ಬರ್ಪ ಬಾ ಪೋಪಮ್.

(ಎಂದು ತನ್ನೊಡನೆ ರಥಮನ್ ಏಱಿಸಿಕೊಂಡು ಗಗನತಳಕ್ಕೆ ಒಗೆದು, ತನ್ನ ಅಮರಾವತೀಪುರಮನ್ ಎಯ್ದಿ, ಮಗನ್ ಬಂದ ಒಸಗೆಗೆ ಪೊಳಲೊಳ್ ಅಷ್ಟಶೋಭೆಯನ್ ಮಾಡಿಸಿ ಪೊಳಲನ್ ಪೊಕ್ಕಾಗಳ್, ಅಂದು ಅಮರಾವತೀಪುರದ ವಾರಸ್ತ್ರೀಯರ್ ಪರಿತಂದು...)

**ವಾರಸ್ತ್ರೀಯರ್:** ಈತನೇ ನರನ್... ಆ ಖಾಂಡವಮೆಲ್ಲಮನ್ ಶಿಖಿಗೆ ಉಣಲ್ ಕೊಟ್ಟಾತನ್. ಈಗಳ್ ಮಹೇಶ್ವರನನ್ ಮೆಚ್ಚಿಸಿ ಮಿಕ್ಕ ಪಾಶುಪತಮನ್ ಪೆತ್ತಾತನೇ ಸಾಹಸನ್, ಪಿರಿದುಮ್ ಚೆಲ್ವನುಮಪ್ಪನ್.

(ಎಂದು ಮನದೊಳ್ ಸೋಲ್ತು ಅಳ್ಕಱಿನ್ ನೋಡಿದರ್. ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳನ್ ಈಶ್ವರನನ್ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳುತ್ತುಮ್, ದೇವರಾಜನೊಡನೆ ದೇವಾಪ್ಸರೋನಿಚಯನಿಚಿಮಪ್ಪ ದೇವ ವಿಮಾನಮನ್

ಪೊಕ್ಕಾಗಳ್, ದೇವೇಂದ್ರನ್ ತನ್ನೊಡನೆ ಮಜ್ಜನಂಬುಗಿಸಿ, ದಿವ್ಯಾಹಾರಂಗಳನ್ ಒಡನೆ ಆರೋಗಿಸಿ ತಂಬುಲಂಗೊಂಡು, ತನ್ನ ತುಡುವ ತುಡುಗೆಗಳೆಲ್ಲಮನ್ ತುಡಿಸಿ, ಕಿರೀಟಿಯನ್ ಕೋಟಿ ಮಾಳ್ಕೆಯಿನ್ ಕೊಂಡಾಡಿ, ಕೆಲವು ದಿವಸಮನಿರ್ದು...)

**ಇಂದ್ರ:** ತನಗೆ ಅವಧ್ಯರುಮ್ ಅಸಾಧ್ಯರುಮ್ ಆಗಿರ್ದ ನಿವಾತಕವಚ ಕಾಳಕೇಯ ಪೌಲೋಮ ತಳತಾಳುಕರ್ ಎಂಬ ಅಱುವತ್ತು ಕೋಟಿ ರಕ್ಕಸರನ್ ಎನಗೆ ಗೆಲ್ದು ಈಯಲ್ವೇಳ್ಕುಮ್...

(ಎಂದು ಮಾತಳಿಯೆಂಬ ಸಾರಥಿವೆರಸು ವಿವಿಧಾಸ್ತ್ರ ಗರ್ಭಮಪ್ಪ ರಥಮನ್ ಕೊಟ್ಟೊಡೆ, ಅದನೇಱಿ ಪೋಗಿ ದನುಜಾನೀಕದ ನಿಂದ ಅದೊಂದು ನೆಲೆಯನ್ ಮುಟ್ಟುತ್ತೆ, ಮಾದೇವನ್ ಇತ್ತ ನಿಜೋಗ್ರಾಸ್ತ್ರದೆ ದೈತ್ಯರೆಂಬ ಪೆಸರಿಲ್ಲ ಎಂಬಂತುಟಮ್ ಮಾಡಿ ಬಂದು, ಎನಿತಾನುಮ್ ಮಹಿಮಾ ಗುಣಕ್ಕೆ ಕಣಿಯಾಗಿರ್ದ ಒಂದು ಪೆಂಪಿಂದಮ್ ಇಂದ್ರನೊಳ್ ಅರ್ಧಾಸನಮ್ ಏಱಿದ ಒಳ್ಪು ಹರಿಗಂಗೆ ಅಕ್ಕುಮ್ ಪೆಱಂಗೆ ಅಕ್ಕುಮೇ. ಅಂತು ದೇವಲೋಕದೊಳ್ ತನ್ನ ಮಾತೆ ಮಾತಾಗಿರ್ದ ಪರಾಕ್ರಮಧವಳನ ಪರಾಕ್ರಮಕ್ಕಮ್ ಗಂಡಗಾಡಿಗಮ್ ರಂಭೆ ಸೋಲ್ತು ಸೈರಿಸಲಾಱದೆ, ಏಕಾಂತದೊಳ್ ಮೇಲೆ ಬಿಳ್ದೊಡೆ...)

**ಅರ್ಜುನ:** ಎಂದು ಪುರಂದರನ ಅರಸಿಯಯ್... ಅಂದು ದಲ್ ಎನಗೆ ಅಬ್ಬೆಯೇ... ತೊದಳ್ ನುಡಿಯದೆ ಪೋಗು.

(ಎಂದೊಡೆ...)

**ರಂಭೆ:** ಅದೊಂದು ಅಬ್ದದೊಳೆ ಬೃಹಂದಳೆಯಾಗು.

(ಎಂದು ಮುನಿದು ಶಾಪವನ್ ಇತ್ತಳ್. ಇತ್ತೊಡೆ...)

**ಅರ್ಜುನ:** ಎಂತುಮ್ ಆನ್ ಪರಸ್ತ್ರೀಯರ ದೆಸೆಯೊಳಮ್ ಅಣ್ಣನ ನನ್ನಿಯ ವರ್ಷಾವಧಿಯೊಳಮ್ ಓತು ಪಿಡಿವೆನ್. ನಿನ್ನ ನುಡಿಯೊಳ್ ಏನ್ ದೋಷಮ್.

(ಎಂದು ತನ್ನ ಶೌಚದ ಮೇಗಣ ಕಲಿತನಮುಮನ್, ಸೌಭಾಗ್ಯದ ಮೇಗಣ ಬಲ್ಲಾಳ್ತನಮುಮನ್ ಇಂದ್ರಲೋಕದಿನ್ ಪೊಗಳಿಸಿ ಸುಖಮ್ ಇರ್ಪನ್ನೆಗಮ್...) 

# ೪೫. ಭೀಮ ಮತ್ತು ಆಂಜನೇಯರ ಮಿಲನ

(೨೯ ನೆಯ ಗದ್ಯದಿಂದ ೩೬ ನೆಯ ಗದ್ಯ)

**ಪಾತ್ರಗಳು**

| | |
|---|---|
| ಯುಧಿಷ್ಠರ: | ಪಾಂಡುರಾಜ ಮತ್ತು ಕುಂತಿಯ ಮಗ. |
| ಭೀಮಸೇನ: | ಪಾಂಡುರಾಜ ಮತ್ತು ಕುಂತಿಯ ಮಗ. |
| ಅರ್ಜುನ: | ಪಾಂಡುರಾಜ ಮತ್ತು ಕುಂತಿಯ ಮಗ. |
| ನಕುಲ: | ಪಾಂಡುರಾಜ ಮತ್ತು ಮಾದ್ರಿಯ ಮಗ. |
| ಸಹದೇವ: | ಪಾಂಡುರಾಜ ಮತ್ತು ಮಾದ್ರಿಯ ಮಗ. |
| ದ್ರೌಪದಿ: | ಅರ್ಜುನನ ಹೆಂಡತಿ. |
| ವಾನರ/ಹನುಮಂತ: | ವಾಯುದೇವನ ಮಗ. |

# ಭೀಮ ಮತ್ತು ಆಂಜನೇಯರ ಮಿಲನ

ವಿಕ್ರಾಂತತುಂಗನ ತಡೆದುದರ್ಕೆ ಯುಧಿಷ್ಠಿರ ಭೀಮಸೇನ ನಕುಳ ಸಹದೇವರುಮ್ ದ್ರೌಪದಿಯುಮ್ ವ್ಯಾಕುಳಚಿತ್ತರಾಗಿ...

(ತಮ್ಮಲ್ಲಿಯೇ): ನೆಗಳ್ದ ಪಾರಾಶರನ್ ಆ ದಿವ್ಯಾಸ್ತ್ರಂಗಳಮ್ ಸಾಧಿಸಲೆ ಪೇಳೆ, ಮುನ್ನಮ್ ಸಂದ ಇಂದ್ರಕೀಲಕ್ಕೆ ಪೋದನ್. ಅದೇನ್ ಆದುದೋ ಅದನ್ ಅಱಿವಮ್. ಕಾರ್ಯಸಿದ್ಧಿ ಪ್ರಾದುರ್ಭಾವಕ್ಕೆ ಪಲವು ವಿಘ್ನಮ್ ಒಳವು. ಅಱಿಯಲ್ ಬರ್ಕುಮೇ ಬಾರದು. ಅಲ್ಲಿಮ್ ವಿಕ್ರಾಂತ ತುಂಗನ್ ಪೋದನ್ ಗಡ. ಅದನ್ ಅಱಿಯಲ್ಕೆ ಆಗದು. ಇನ್ನೆಲ್ಲಿ ಕಾಣ್ಬಮ್.

(ಎಂದು ಪೋದ ದೆಸೆಯನ್ ಅಱಿಯದೆ ಚಿಂತಾಕ್ರಾಂತರಾಗಿ ಮಾರ್ಕಂಡೇಯನ್ ಎಂಬ ದಿವ್ಯಜ್ಞಾನಿಗಳ ದಿವ್ಯ ಉಪದೇಶದೊಳ್ ಅಯ್ವರುಮ್ ಗಂಧಮಾದನಗಿರಿಗೆ ವಂದು, ತತ್ ಗಿರೀಂದ್ರದೊಳ್ ಭೀಮಸೇನನ್ ದ್ರೌಪದಿಯ ಬಯಕೆಗೆ ಧನದನ ಕೊಳದೊಳಗಣ ಕನಕ ಕಮಲಂಗಳನ್ ತರಲೆಂದು ಪೋಗಿ, ಪ್ರಕಟಿತ ಸಾಹಸನ್ ಅಱುವತ್ತು ಕೋಟಿ ಧನಧ ಅನುಚರರನ್ ಅತಿರೌದ್ರ ಭಯಾನಕಮಾಗೆ ಕೊಂದು, ಸೌಗಂಧಿಕ ಕಾಂಚನ ಕಮಲ ಹರಣ ಪರಿಣತನಾದನ್. ಮತ್ತಮ್ ಜಟಾಸುರನ್ ಎಂಬ ಅಸುರನನ್ ಆ ಗಿರೀಂದ್ರ ಕಂದರದೊಳ್ ಸೀಳ್ದು ಸೀಱುಂಬುಳಾಡಿ, ಕೆಲವು ದಿವಸಮನಿರ್ದು ಒಂದು ದಿವಸಮ್ ಒರ್ವನೆ ಬೇಂಟೆಯ ನೆವದಿಂದೆ ಅಲ್ಲಿಮ್ ತಳರ್ದು, ಬಟ್ಟೆಯ ಕಣ್ಣೊಳ್ ಅಡ್ಡಮ್ ಬಿಳ್ದಿರ್ದ ವೃದ್ಧ ವಾನರನನ್ ಕಂಡು...)

ಭೀಮ: ತೊಲಗು.

(ಎನೆ)

**ವಾನರ:** ಬಟ್ಟೆಯಿನ್ ತೊಲಗಲಾಜೆನ್. ಅಶಕ್ತನೆನ್. ಆರ್ಪೊಡೆ ಎನ್ನನ್ ಇನ್ ತೊಲಗಿಸಿ ಪೋಗು ನೀನ್.

(ಎನೆ ವೃಕೋದರನ್ ಒಯ್ಯನೆ ನಕ್ಕು, ಬಾಲಮನ್ ಸಲೆಮುರಿದು ಎತ್ತಲಾಟಿಸೆ, ಧರಿತ್ರಿಗೆ ಕೀಲಿಸಿದಂತುಟಾಗೆ, ದೋರ್ವಲದ ಪೊಡರ್ವು ಕೆಟ್ಟು ಮರುತ್ಸುತನ್ ಮರುತ್ಸುತನನ್ ನಡೆ ನೋಡಿ...)

**ಭೀಮ:** ನೀನ್ ಎಮ್ಮಣ್ಣನೆ ವಲಮ್. ವಂಶದ ವಾನರನಲ್ಲಯ್. ಮಹಾಬಲ ಏಕೆ ಈ ನಗದೊಳ್ ಇರ್ದೆ ಪೇಳ್.

(ಎನೆ ತತ್ ವಾನರನ್ ಅಳ್ಕರ್ತು ನೋಡಿ...)

**ವಾನರ:** ಭೀಮನೆಂಬನ್ ನೀನೇ.

**ಭೀಮ:** ಅಪ್ಪೆನ್.

**ವಾನರ:** ನಿಮ್ಮಣ್ಣನಪ್ಪ ಅಣುವನೆನ್ ಆನ್ ಅಪ್ಪೆನ್.

(ಎಂದು ಪೇಳ್ವುದುಮ್, ಆಗಳ್ ಸಾಷ್ಟಾಂಗಮ್ ಎಱಗಿ ಪೊಡೆವಟ್ಟ ಭೀಮಸೇನನನ್ ಪರಸಿ...)

**ವಾನರ:** ಎನ್ನಂತಪ್ಪ ಒಡವುಟ್ಟಿದರ್ ಇನ್ ನಿನಗೆ ಒಳರಾಗಲ್, ಅಹಿತರ್ ನಿನ್ನನ್ ಇದಿರಾಂಪರೆ ಪೇಳ್. ಪಗೆವರ ಬೇರೊಳ್ ಬೆನ್ನೀರನ್ ಪೊಯ್ದು, ನಿನಗೆ ಧರೆಯನ್ ಮಾಳ್ಪೆನ್.

(ಎಂಬುದುಮ್ ಭೀಮಸೇನನ್ ಇಂತು ಎಂದನ್.)

**ಭೀಮ:** ಬೆಸನಮ್ ಪೂಣ್ದು, ಕಡಂಗಿ ಕಡಲನ್ ಪಾಯ್ದು, ಮುನ್ ಪೂಣ್ದರನ್ ಕೊಂದು, ಲಂಕೆಯನ್ ಸಮಂತು ಆಗಡೆ ಪೊಕ್ಕು, ಬನಮನ್ ಆಟಂದು ಉರ್ಕಿ ಕಿಳ್ತಿಕ್ಕಿ, ಸೀತೆಗೆ ಸಂತಸಮನ್ ಮಾಡಿ, ಪೊಳಲನ್ ಸುಟ್ಟು ಕಾಳಾನಳಂಗೆ ಇತ್ತು, ಬೇವಸಮನ್ ರಾಮನಿನ್ ಉಯ್ದ ನೀನ್ ಬರೆಗಮ್ ಆ ಕೌರವರ್ ಏನ್ ಗಂಡರೇ. ಎನಗೆ ದಯೆಗೆಯ್ದುದು ಒಂದನೆ, ವಿಜಯಂಗೆ ಮೊನೆಯೊಳ್ ವಿಜಯಮಾಗಿರೆ ನೀನುಮ್ ಆತನ ಕೇತನದೊಳ್, ಫಣಿಕೇತನನ ಬಲಕ್ಕೆ ಉತ್ಪಾತಕೇತುವಪ್ಪುದೆ ವಿನಾಶದ ಕೇತು ಗ್ರಹವಾಗಿರುವುದೆ ಸಾಲ್ಗುಮ್.

(ಎಂದು ಬೇಡಿಕೊಂಡೊಡೆ...)

**ಹನುಮಂತ:** ಅದು ಏನ್ ಪಿರಿದು ಇತ್ತೆನ್.

(ಎಂದು ಅಣುವನ್ ಅದೃಶ್ಯಮಾದನ್. ಆಗಳ್ ಭೀಮಸೇನನ್ ಬೀಡಿಂಗೆ ವಂದು, ಧರ್ಮಪುತ್ರಂಗೆ ಆ ಮಾತೆಲ್ಲಮನ್ ಪೇಳ್ದು, ವಿಕ್ರಮಾರ್ಜುನನ ಬರವನೆ ಪಾರುತ್ತ ಇರ್ಪನ್ನೆಗಮ್. ಇತ್ತ ವಿಬುಧವನಜವನ ಕಳಹಂಸನುಮ್ ಪಲವುಮ್ ದಿವಸಮ್ ಅಗಲ್ದು ಇರ್ದ ತನ್ನ ಒಡವುಟ್ಟಿದರನ್ ನೆನೆದು...)

**ಅರ್ಜುನ:** ಪೋಪೆನ್.

(ಎಂದು ಇಂದ್ರನನ್ ಬೀಳ್ಕೊಂಡು, ತನಗೆ ದೇವೇಂದ್ರನಿತ್ತ ಐಂದ್ರಮ್ ಎಂಬ ದಿವ್ಯಾಸ್ತ್ರಮುಮನ್, ನೈಷ್ಠಿಕಮ್ ಎಂಬ ಮುಷ್ಟಿಯುಮನ್ ಕೆಯ್ಕೊಂಡು, ದೇವಸ್ತ್ರೀಯರ ಮನಮನ್ ಇಳ್ಕುಳಿಗೊಂಡು, ಇಂದ್ರನ್ ತನ್ನ ಪುಷ್ಪಕಮನ್ ಏಱಿಸಿ, ಮಾತಳಿಯನ್ ಸಾರಥಿಯಾಗಲ್ ಪೇಳ್ದು ಕಳಿಪೆ, ನಾಕಲೋಕದ್ವಾರಮಾಗಿರ್ದ ಗಂಧಮಾದನಗಿರಿಗೆ ವಂದು, ಕಾರ್ಗಾಲದ ಬರವನ್ ಚಾದಗೆ ಪಾರ್ವಂತೆ ತನ್ನ ಬರವನೆ ಪಾರುತ್ತಿರ್ದ ಧರ್ಮಪುತ್ರನ ಮರುತ್ಸುತನ ಪಾದಕಮಲಂಗಳನ್ ನಿಜಮಕುಟಮರೀಚಿಗಳಿಂದಮ್ ಅರ್ಚಿಸಿ, ತದೀಯ ಆಶೀರ್ವಚನಮನ್ ಆಂತು, ತನಗೆ ಪೊಡವಟ್ಟ ನಕುಳ ಸಹದೇವರ್ ಇರ್ಬರುಮನ್ ಅಳ್ಕಱಿನ್ ಪರಸಿ, ಬಳಿಯಮ್ ಇಂದ್ರಕೀಲ ನಗೇಂದ್ರದೊಳ್ ಈಶ್ವರನ ವರ ಪ್ರಸಾದದಿನ್ ಪಡೆದ ದಿವ್ಯಾಸ್ತ್ರಮನ್ ತೋಱಿ, ತನ್ನನ್ ಇಂದ್ರನ್ ಒಡಗೊಂಡು ಪೋದುದುಮನ್, ಇಂದ್ರ ಲೋಕದೊಳ್ ಆತನಲ್ಲಿ ಪಡೆದ ಮಹಿಮೆಯುಮನ್ ಅಱಿಯೆ ಪೇಳ್ದು..)

**ಅರ್ಜುನ:** ನಾವ್ ಇಲ್ಲಿರಲ್ ಬೇಡ. ದ್ವೈತವನದೊಳ್ ಇರ್ಪಮ್ ಬನ್ನಿಮ್.

(ಎಂದು ಮಾತಳಿಯನ್ ಬೀಳ್ಕೊಟ್ಟು ಕಳಿಪಿ, ನಿಜಪರಿಜನ ಸಹಿತಮ್ ಬಂದು ಸುಖಮ್ ಇರ್ಪನ್ನೆಗಮ್...)



# ೪೬. ಯಕ್ಷ ಪ್ರಸಂಗ

(೩೭ ನೆಯ ಪದ್ಯದಿಂದ ೫೦ ನೆಯ ಗದ್ಯ)

## ಪಾತ್ರಗಳು

| | |
|---|---|
| **ವಿಪ್ರರು:** | ಆಶ್ರಮವಾಸಿಗಳು. |
| **ತಾಪಸರು:** | ಯಾಗವನ್ನು ಮಾಡುತ್ತಿದ್ದವರು. |
| **ಪಾಂಡವರು:** | ಧರ್ಮರಾಯ–ಭೀಮ–ಅರ್ಜುನ–ನಕುಲ–ಸಹದೇವ. |
| **ಯಕ್ಷ:** | ಮಾರುವೇಷದಲ್ಲಿ ಬಂದಿರುವ ಯಮ ದೇವತೆ. |
| **ಕೀರ್ತಿಗೆ:** | ಉಗ್ರದೇವತೆ. |
| **ಕನಕಸ್ವಾಮಿ:** | ಪಾಂಡವರನ್ನು ಕೊಲ್ಲಲು ದುರ್ಯೋಧನನಿಂದ ನೇಮಕಗೊಂಡಿರುವ ಮಂತ್ರವಾದಿ. |

## ಯಕ್ಷ ಪ್ರಸಂಗ

ಒಂದು ದಿವಸಮ್ ಒಂದು ಮಾಯಾ ಮತ್ತ ಹಸ್ತಿ ಮಸಕಮ್ ಕಾಯ್ಪು ಜವಮ್ ಜವಂಗಮ್ ಇದಿರೊಳ್ ನೋಡಲ್ಕೆ ಅಗುರ್ವಾಗೆ, ವಿಪ್ರರ್ ಭಯದಿನ್

**ವಿಪ್ರರ್:** ಮಾಂದಿಸಿಮ್ ಈ ವಂದುದು ಕೊಂದುದು.

(ಎಂದು ಭಯದಿನ್ ತೆರಳ್ದು ಓಡೆ, ತಾಪಸರನ್ ಬೆರ್ಚಿಸಿ ತೂಳ್ದಿ, ಬೇಳ್ವರಣಿಯನ್ ಕೊಂಡು ಆಶ್ರಮಕ್ಕೆ ಇಂತು ಬೇವಸಮನ್ ಮತ್ತೇಭವಿಕ್ರೀಡಿತಮ್ ಒಂದು ವಿಭವಮ್ ಮಾಡುವುದಾಯ್ತು. ಆಗಳ್ ಆ ಮದಾಂಧಗಂಧ ಸಿಂಧುರದ ಕೋಳಾಹಳಮನ್ ತಾಪಸರ್ ಬಂದು ಯುಧಿಷ್ಠರಂಗೆ ಅಱಿಪಿ...)

**ತಾಪಸರ್:** ನೀಮ್ ಎಮಗೆ ಅದಱ ಕೈಗೆ ಪೋದ ಅರಣಿಯನ್ ತಂದು ಈಯದಾಗಳ್, ಇಷ್ಟಿವಿಘ್ನಂಗಳನ್ ಮಾಡಿದಿರ್.

(ಎಂದೊಡೆ, ಅಯ್ವುರುಮ್ ಪ್ರಚಂಡಕೋದಂಡಹಸ್ತರ್ ಕಾಳಕಾಳಸ್ವರೂಪಮನ್ ಕೆಯ್ಕೊಂಡು, ಮದಾಂಧಗಂಧ ಸಿಂಧುರದ ಬಳಿಯನ್ ನಿರ್ವಂದದಿನ್ ತಗುಳ್ವುದುಮ್, ಆ ಮಾಯಾ ಮತ್ತಹಸ್ತಿಯುಮ್ ಮೂಱು ಜಾವರಂಬರಮ್ ರೂಪುದೋಱಿ ಪರಿದು, ಬಳಿಯಮ್ ಅದೃಶ್ಯಮ್ ಆದೊಡೆ, ಅಯ್ವರುಮ್ ಚೋದ್ಯಮ್ ಪಟ್ಟು, ಘರ್ಮಕಿರಣಸಂತಾಪ ತಾಪಿತ ಶರೀರರ್ ಒಂದು ಆಲದ ಮರದ ಕೆಳಗೆ ವಿಶ್ರಮಿಸೆ, ಧರ್ಮಪುತ್ರನ್ ನೀರಡಸಿ ಸಹದೇವನನ್...)

**ಧರ್ಮಪುತ್ರ:** ಎಲ್ಲಿಯಾದೊಡಮ್ ನೀರನ್ ಕೊಂಡು ಬೇಗಮ್ ಬಾ.

(ಎಂದು ಪೇಳ್ವುದುಮ್...)

**ಸಹದೇವ:** ಅಂತೆ ಗೆಯ್ವೆನ್.

(ಎಂದು ಕೂಜತ್ ಜಳಚರಕುಳ ಕಳವರದೊಳಮ್ ಕಮಳ ಕುವಳಯರಜಃಕಷಾಯ ಪರಿಮಳದ ಅಳಿಪಟಳ ಜಟಿಳಮಾಗಿ ಬಂದು ತೀಡುವ ಮಂದಾನಿಳನಿನ್, ನೀರ ದೆಸೆಯನ್ ಅಱಿದು ಪೋಗೆವೋಗೆ ಬಕ ಕಲಹಂಸ ಬಲಾಕ ಪ್ರಕರ ಮೃದುಕ್ವಣಿತ ರಮ್ಯಮ್ ಪರಿವಿಕಸಿತ ಕನಕಕಂಜ ಕಿಂಜಲ್ಕಪುಂಜ ಪಿಂಜರಿತ ಜಳಮ್ ಕೊಳನ್ ಇದಿರೊಳ್ ತೋಱಿತ್ತು

ಅಂತು ಸೊಗಯಿಸುವ ಸರೋವರಮನ್ ಕಂಡು, ತಾನುಮ್ ನೀರಡಸಿದನಪ್ಪುದರಿಂದ ಅದಱ ಕೆಲದ ಲತೆಯ ಮೆಳೆಯೊಳ್ ಬಿಲ್ಲುಮ್ ಅಂಬುಮನ್ ಸಾರ್ಚಿ, ಕೊಳನಮ್ ಪೊಕ್ಕು ಕರಚರಣ ವದನಪ್ರಕ್ಷಾಲನಮ್ ಗೆಯ್ದು, ನೀರನ್ ಕುಡಿಯಲೆಂದು ನಿಜಾಂಜಲಿಪುಟಮನ್ ನೀಡಿದಾಗಳ್, ಒಂದು ದಿವ್ಯವಚನಮ್ ಆಕಾಶದೊಳ್...)

**ಯಕ್ಷ:** ತೋಯಜ ಷಂಡಮನ್ ಇದನ್ ಆನ್ ಆಯತಿಯಿನ್ ಕಾವೆನ್. ಎಲೆ ಕೌಂತೇಯ, ಎನ್ನ ಮಾತಿಂಗೆ ಮಱುಮಾತನಿತ್ತು, ಮದೀಯ ಸರೋವರದ ತೋಯಮನ್ ಕುಡಿ ಕೊಂಡುಯ್.

(ಎಂಬುದುಮ್, ಆ ದಿವ್ಯವಚನಮನ್ ಉಲ್ಲಂಘಿಸಿ ನೀರಳ್ಕೆ ಪೋಪಿನಮ್ ನೀರನ್ ಕುಡಿದು, ಪದ್ಮಪತ್ರೌಘಂಗಳಿನ್ ತಮ್ಮಣ್ಣಂಗೆ ನೀರನ್ ತೀವಿಕೊಂಡು, ಸರೋವರದಿನ್ ಪೊಱಮಟ್ಟು, ಒಂದೆರಡು ಅಡಿಯನ್ ಇಡುತೆ ಗತಪ್ರಾಣನಾಗಿ ಬಿಳ್ದಿರ್ದನ್. ಇತ್ತ ಧರ್ಮಪುತ್ರನ್ ಸಹದೇವನ್ ತಡೆದುದರ್ಕೆ ಉಮ್ಮಳಿಸಿ, ನಕುಲನ ಮೊಗಮನ್ ನೋಡಿ...)

**ಧರ್ಮರಾಯ:** ಸಹದೇವನ ಒಡಗೊಂಡು ನೀರನ್ ಕೊಂಡು ಬೇಗಮ್ ಬಾ.

(ಎಂದು ಪೇಳ್ದೊಡೆ...)

**ನಕುಲ:** ಅಂತೆ ಗೆಯ್ವೆನ್.

(ಎಂದು ಸಹದೇವನ ಪೋದ ಪಜ್ಜೆಯಿನೆ ಪೋಗಿ, ಕೊಳದ ತಡಿಯೊಳ್ ಬಿಳ್ದಿರ್ದ ತಮ್ಮನನ್ ಕಂಡು ಚೋದ್ಯಮ್ ಪಟ್ಟು... ತಾನುಮ್ ಆನತರಿಪು ಸರೋಜಷಂಡಮನ್ ಪೊಕ್ಕು, ದಿವ್ಯ

ವಚನಮನ್ ಅದನ್ ಅಂತೆ ಏನುಮ್ ಬಗೆಯದೆ, ಅಜ್ಞಾನತೆಯಿನ್ ಕುಡಿದು ನಂಜು ಕುಡಿದಂತಿರೆ ಕೆಡೆದನ್. ಅನ್ನೆಗಮ್ ಯಮನಂದನನ್ ಇರ್ವರ ಬರವುಮನ್ ಕಾಣದೆ ಶಂಕಾಕುಳಿತಚಿತ್ತನ್ ಆಗಿ ಕಿರೀಟಿಯನ್...)

**ಧರ್ಮರಾಯ:** ಬೇಗಮ್ ಪೋಗಿ ನೀನ್ ಆ ಕೂಸುಗಳನ್ ಒಡಂಗೊಂಡು ನೀರನ್ ಕೊಂಡು ತಡೆಯದೆ ಬಾ.

(ಎಂಬುದುಮ್)

**ಅರ್ಜುನ:** ಅಂತೆ ಗೆಯ್ವೆನ್.

(ಎಂದು ಬಂದು, ಕೊಳನ ತಡಿಯೊಳ್ ಅಚೇತನರಾಗಿ ಬಿಳ್ದಿರ್ದ ತಮ್ಮಂದಿರ್ ಇರ್ವರುಮನ್ ಕಂಡು ವಿಸ್ಮಯಮ್ ಪಟ್ಟು, ಅರಿಭೂಪಾನೀಕ ಭಯಂಕರನುಮ್ ಆ ಕಮಳಾಕರಮನ್ ಪೊಕ್ಕು, ಆಕಾಶಧ್ವನಿಯನ್ ಉಱದೆ ಕುಡಿದನ್ ಗಡಮ್. ಏಕೆಂದಱಿಯೆನ್ ಬಳಲ್ದು ಧರೆಯೊಳ್ ಜೋಲ್ದನ್. ಅನ್ನೆಗಮ್ ಅತ್ತ ಯಮನಂದನನ್ ಮೂವರ್ ತಮ್ಮಂದಿರ ಬರವನ್ ಕಾಣದೆ ಭಗ್ನಮನನಾಗಿ ಭೀಮಸೇನನನ್...)

**ಧರ್ಮರಾಯ:** ನೀನ್ ಪೋಗಿ ಮೂವರುಮನ್ ಒಡಂಗೊಂಡು ನೀರನ್ ಕೊಂಡು ಬಾ.

(ಎಂದೊಡೆ)

**ಭೀಮ:** ಅಂತೆ ಗೆಯ್ವೆನ್.

(ಎಂದು ವಾಯುವೇಗದಿನ್ ಬಂದು ಪುಂಡರೀಕ ಷಂಡೋಪಾಂತದೊಳ್ ವಿಗತಜೀವಿತರಾಗಿರ್ದ ಮೂವರ್ ಅನುಜರುಮನ್ ಕಂಡು...)

**ಭೀಮ:** (ತನ್ನಲ್ಲಿಯೇ)

ಇದು ಮನುಜರಿಂದಾದ ಉಪದ್ರವಮಲ್ಲಮ್. ಏನಾನುಮ್ ಒಂದು ದೇವತೋಪದ್ರವಮ್ ಆಗಲೆ ವೇಳ್ಕುಮ್.

(ಎಂದು ಬಿಡದೆ ಕಡುಕೆಯ್ದು ದಿವ್ಯದ ನುಡಿಗೆ ಕಿವುಳ್ಕೇಳ್ದು, ಭೀಮನ್ ನೀರನ್ ಕುಡಿದು, ಪಿಡಿದ ಗದೆವೆರಸು ಗಿರಿ

ಶಿಖರದೊಡನೆ ಕೆಡೆವಂತೆ ಆಗಳ್ ಭೋಂಕೆನೆ ಕೆಡೆದನ್. ಅಂತು ನಾಲ್ವರುಮ್ ವಿಳಯಕಾಲ ವಾತಾಹತಿಯಿನ್ ಕೆಡೆದ ಕುಲಗಿರಿಗಳಂತೆ ಕೆಡೆದು ವಿಗತಜೀವಿತರಾಗಿರ್ದ ಪದದೊಳ್,

ಅತ್ತ ದುರ್ಯೋಧನನ ಬೆಸದೊಳ್ ಆತನ ಪುರೋಹಿತನ್ ಕನಕಸ್ವಾಮಿ ಎಂಬನ್ ಪಾಂಡವರ್ಗೆ ಅಭಿಚಾರಮಾಗೆ ಬೇಳ್ವ ಬೇಳ್ವೆಯ ಕೊಂಡದೊಳಗಣಿಂದಮ್ ಅಂಜನಪುಂಜದಂತಪ್ಪ ಮೆಯ್ಯುಮ್, ಸಿಡಿಲನ್ ಅಡಸಿದಂತಪ್ಪ ದಾಡೆಯುಮ್, ಉರಿಯುರುಳಿಯಂತಪ್ಪ ಕಣ್ಣುಮ್, ಕೃತಾಂತನಂತೆ ಆಕಾರಮಾಗಿ ತಳತಳಸಿ ಪೊಳೆವ ಕತ್ತಿಗೆಯುಮ್ ಬೆರಸು ಪೊಱಮಟ್ಟು ಕೀರ್ತಿಗೆ ಎಂಬ ಉಗ್ರದೇವತೆ...)

**ಉಗ್ರದೇವತೆ:** ಬೆಸಸು ಬೆಸಸು.

(ಎಂದು ಬೆಸನಮ್ ಬೇಡೆ...)

**ಕನಕಸ್ವಾಮಿ:** ಪಾಂಡವರನ್ ಎಲ್ಲಿವೊಕ್ಕಡಮ್ ಕೊಲ್.

(ಎಂದೊಡೆ...)

**ಉಗ್ರದೇವತೆ:** ಅಂತೆ ಗೆಯ್ವೆನ್.

(ಎಂದು ಪೋಗೆ, ಎಲ್ಲಿಯುಮ್ ಅಱಸಿ ಕಾಣದೆ, ಕೊಳನ ತಡಿಯೊಳ್ ಬಿಳ್ದಿರ್ದ ನಾಲ್ವರುಮನ್ ಕಂಡು...)

**ಉಗ್ರದೇವತೆ:** (ತನ್ನಲ್ಲಿಯೇ)

ಬಾಪ್ಪು ಬಳ್ದೆನ್.

(ಎಂದು ತಿನಲ್ ಸಾರ್ವಾಗಳ್, ಅವರ್ಗಳ್ಗೆ ಅನಿತನ್ ಮಾಡಿದ ದೈವಮ್ ಪ್ರತ್ಯಕ್ಷಮಾಗಿ ಗಜಱಿ ಗರ್ಜಿಸುತ್ತುಮ್ ಬಂದು...)

**ಯಕ್ಷ:** ಎಲೆ ಪಿಱಿತಿನಿ, ಪೋ... ಮುಟ್ಟದೆ ತೊಲಗು. ಈ ನಾಲ್ವರ್ಕಳ ಅಸುವನ್ ಅವರ್ಗಳ ಮೆಯ್ಯಿನ್ ತೊಲಗಿಸಿ, ಮುನ್ನಮೆ ಕಾದಿರ್ದ ಅಲಂಘ್ಯಬಲನ್ ಎನಿಸಿದ ಎನಗೆ, ನೀನ್ ಅಗ್ಗಳಮೇ. ಅದಲ್ಲದೆಯುಮ್ ನೀನೆ ಜಾತಿದೇವತೆಯಪ್ಪೊಡೆ ಎನ್ನ ಎಂಜಲನ್ ಎಂತು ತಿಂಬೆ...

(ಎಂಬುದುಮ್)

**ಉಗ್ರದೇವತೆ:** ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆ ವಂದರ್. ಎನಗಮ್ ಆ ಬೆಸಮ್ ತಪ್ಪಿದುದು. ಆನ್ ಆರನ್ ತಿಂಬೆನ್ ಪೇಳ್...

**ಯಕ್ಷ:** ನಿನ್ನನ್ ಆವನ್ ಒರ್ವನ್ ಅಕಾರಣಮ್ ಪುಟ್ಟಿಸಿದನ್ ಆತನನೆ ತಿನ್.

(ಎಂಬುದುಮ್)

**ಉಗ್ರದೇವತೆ:** ಅಂತೆ ಗೆಯ್ವೆನ್.

(ಎಂದು ಪೋಗಿ **'ಕನಕನ ಬೇಳ್ವೆ ಕನಕನನ್ ತಗುಳ್ದುದು'** ಎಂಬೊಂದು ಮಾತು ಧರೆಗೆಸೆಯೆ, ಸುಯೋಧನನ ಪುರೋಹಿತನಪ್ಪ ಆ ಕನಕಸ್ವಾಮಿಯನೆ ಮುನಿದು ಕೀರ್ತಿಗೆ ತಿಂದಳ್. ಅನ್ನೆಗಮ್ ಇತ್ತ ಕೃತಾಂತನಂದನನ್ ತನ್ನ ನಾಲ್ವರ್ ತಮ್ಮಂದಿರುಮ್ ಬಾರದೆ ತಡೆದುದರ್ಕೆ ಚಿಂತಾಕ್ರಾಂತನಾಗಿ...)

**ಧರ್ಮರಾಯ:** (ತನ್ನಲ್ಲಿಯೇ)

ಪೋದರನ್ ಒಡಗೊಂಡು ಬರಲ್ ಪೋದರುಮ್, ಆ ಪೋದ ಪೋಗೆ ಪೋದರ್. ತಡೆಯಲ್ ಪೋದವರಲ್ತು.

(ಎಂದು ಮನಃಖೇದಮ್ ಬೆರಸು ಅಬ್ಜಾಕರಮನ್ ಎಯ್ದೆ ವಂದನ್. ಅಂತು ಎಯ್ದೆವಂದು ಬಱಸಿಡಿಲ್ ಪೊಡೆಯೆ ಕೆಡೆದ ಶಾಲತರುಗಳ್ ಇರ್ಪಂತಿರ್ದ ನಾಲ್ವರ್ ತಮ್ಮಂದಿರುಮನ್ ಕಂಡು ಬೆಕ್ಕಸಮ್ ಪಟ್ಟು...)

**ಧರ್ಮರಾಯ:** (ತನ್ನಲ್ಲಿಯೇ)

ಆರಿಂದಮ್ ಇದು ಇವರ್ಗೆ ಆಯ್ತು ಎಂದು ಆರಯ್ವೆನ್. ಬೞಿಯಮ್ ಆದೊಡೆ ಏನಾಯ್ತು.

(ಎಂದು ಅಂಭೋರುಹ ರಜಃಪಟಾವೃತ ವಾರಿಯನ್ ಆ ನೃಪತಿ ಕುಡಿಯಲ್ ಒಡರಿಸಿದಾಗಳ್...)

**ಯಕ್ಷ:** ಮರುಳಾಗದೆ ಎನ್ನ ನುಡಿಗೆ ಉತ್ತರಮನ್ ಮುನ್ನಿತ್ತು ಕುಡಿಯೆ, ನಿನಗೆ ಕಜ್ಜಮ್ ಉತ್ತರಿಸುಗುಮ್. ಅಂತಲ್ಲದೆ ಇವಂದಿರಂತೆ ನೀನ್ ಉಂತೆ... ಅರಸಾ ಮೂರ್ಖನಾಗದಿರ್.

(ಎಂಬುದುಮ್...)

**ಧರ್ಮರಾಯ:** ಎನ್ನ ತಮ್ಮಂದಿರ್ಗೆ ಇನಿತನ್ ಮಾಡಿದ ದಿವ್ಯಮ್... ಈ ದಿವ್ಯಮ್ ಅಕ್ಕುಮ್.

(ಎಂದು ಅದಱ ಬೆಸಗೊಂಡುದರ್ಕೆಲ್ಲಮ್ ಮಱುಮಾತುಗುಡುವುದುಮ್ ಮೆಚ್ಚಿ, ತನ್ನ ಸ್ವರೂಪಮನ್ ತೋಱಿ..)

**ಯಕ್ಷ:** ಕನಕನ ಬೇಳ್ವೆಯಿಂದ ಒಗೆದ ಕೀರ್ತಿಗೆಯಿನ್ ನಿನಗೆ ಅಪ್ಪ ಅಪಾಯಮನ್ ನೆನೆದು, ಮದೇಭರೂಪಮನೆ ತೋಱಿ ನಿಜಾಶ್ರಮದಿಂದ ಅಗಲ್ಚಿ, ನಿನ್ನ ಅನುಜರನ್ ಈ ಉಪಾಯದೊಳೆ ಕೀರ್ತಿಗೆ ಒಡ್ಡಿಸೆ ಕಾದೆನ್. ಆನ್ ಕೃತಾಂತನೆನ್. ಅಮ್ಮ, ಎನಗೆ ನೀನ್ ಮಗನೆಯ್. ಇನ್ ಪೆಱತೇನ್. ನಿನಗೆ ಉತ್ತರೋತ್ತರಮ್...

(ಎಂದು ಮಱಕೆಂದಿದರನ್ ಎತ್ತುವಂತೆ ನಾಲ್ವರುಮನ್ ಎತ್ತಿ, ತಾನ್ ಮುನ್ನಮ್ ತಂದ ಅರಣಿಯನ್ ಕೊಟ್ಟು, ಕೃತಾಂತನ್ ಅಂತರ್ಧಾನಕ್ಕೆ ಸಂದನ್. ಧರ್ಮತನೂಜನುಮ್ ಅನುಜರ್ ಸಹಿತಮ್ ನಿಜನಿವಾಸಕ್ಕೆ ವಂದು, ಅರಣಿಯನ್ ಪಾರ್ವರ್ಗೆ ಕೊಟ್ಟು, ಕೆಲವು ದೆವಸಮ್ ಇರ್ದು, ಧೌಮ್ಯ ಪುರೋಹಿತನ್ ಬೆರಸು ಅಯ್ವರುಮ್ ಆಳೋಚಿಸಿ...)

**ಪಾಂಡವರು:** ಉಗ್ರವಿರೋಧಿಜನಕ್ಕೆ ಮಿಳ್ತುಗಳ್ ನೆಱೆವವೊಲ್ ಪನ್ನೆರಳ್ಬರಿಸಮ್ ನೆಱೆದುವು. ಅಱಿದು ಇನ್ ನಮಗೆ ಅಬ್ದಮನ್ ಒಂದನ್ ಇರಲಾಗದು. ಇರ್ದೊಡೆ ಏತಱ ಪಡೆಮಾತೊ. ಮತ್ತಮ್ ಮನಂಮಱುಗೆ ಪನ್ನೆರಡಬ್ದಮನ್ ಬನಂಗಳೊಳ್ ನುಡಿದ ನನ್ನಿಗೆ ಇರವೇಳ್ಪುದು. ಇದರ್ಕೆ ಕಜ್ಜಮನ್ ಪೇಳಿಮ್...

(ಎನೆ ಯಮನಂದನನ್ ಇಂತು ಎಂದನ್...)

**ಧರ್ಮರಾಯ:** ನಮಗೆ ಇನ್ನುಮ್ ಅಪವಾದಮ್ ಪೆಱತೊಂದು ಇಲ್ಲ. ಪೊಕ್ಕಿರಲ್ಕೆ ಮತ್ಸ್ಯಪುರಮ್ ಇಂಬು. ಶತ್ರುಗೆ ಮತ್ಸ್ಯಮ್ ಶತ್ರು. ಅದಱಿಂದೆ ಅಜ್ಞಾತವಾಸಕ್ಕೆ ಚಿಂತಿಪೊಡೆ, ಇನ್ನನ್ನವು ತಾಣಮಿಲ್ಲ. ಅದಱಿಮ್ ಉಂತೆ ಆರ್ಗಮ್ಪೊಡಮ್ ಮಿಕ್ಕ ರೂಪ ಪರಾವರ್ತನದಿಮ್ ವಿರಾಟಪುರಮನ್ ಪೊಕ್ಕಿರ್ದು ಅದನ್ ನೀಗೆಮೇ...

(ಎಂದು ಯುಧಿಷ್ಠಿರನ್ ನಿಶ್ಚಿತಕಾರ್ಯಮನ್ ಅನುಷ್ಠಿಸೆ...)

**ಧರ್ಮರಾಯ:** ನಿಜ ಪರಿಜನಮ್ ಎಲ್ಲಮನ್ ಈ ಒಂದು ವರುಷಮುಮ್ ನಿಮ್ಮ ನಿಮ್ಮ ಬಲ್ಲಂದದೊಳ್ ಇರಿಮ್.

(ಎಂದು ಧೌಮ್ಯ ಸಮೇತಮ್ ಪೋಗಲ್ ಪೇಳ್ದು, ತಮ್ಮಯ್ವರುಮ್ ಪಾಂಚಾಳಿವೆರಸು ಪೋದ ದೆಸೆಯನ್ ಆರುಮ್ ಅಱಿಯದಂತು ದ್ವೈತವನಮನ್ ಪೊಱಮಟ್ಟು, ಜಗುನೆಯನ್ ಪಾಯ್ದು, ಮೂಡಮೊಗದೆ ಪಯಣಂ ಪೋಗಿ ಮತ್ಸ್ಯದೇಶಮನ್ ಪುಗುತಂದರ್...)



# ೪೭. ವಿರಾಟನಗರಕ್ಕೆ ಪಾಂಡವರ ಬರುವಿಕೆ

(೫೨ ನೆಯ ಗದ್ಯದಿಂದ ೫೭ ನೆಯ ಗದ್ಯ)

## ಪಾತ್ರಗಳು

**ವಿರಾಟ:** ವಿರಾಟ ನಗರದ ರಾಜ.

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

**ದ್ರೌಪದಿ:** ಅರ್ಜುನನ ಹೆಂಡತಿ.

**ಸುದೇಷ್ಣೆ:** ವಿರಾಟ ರಾಜನ ಹೆಂಡತಿ. ರಾಣಿ.

## ವಿರಾಟನಗರಕ್ಕೆ ಪಾಂಡವರ ಬರುವಿಕೆ

ಅಂತು ಎಯ್ದೆವಂದು, ತಮ್ಮ ದಿವ್ಯ ಆಯುಧಂಗಳನ್ ಎಲ್ಲಮನ್ ಆ ಪುರೋಪವನದ ಪಿತೃವನದ ಕೆಲದ ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇಲ್ಗಟ್ಟಿ , ಕೆಲದ ಪೆಣಂಗಳೆಲ್ಲಮನ್ ಅವಱ ಮೇಲೊಟ್ಟಿ ಪರೆದು, ಓರೋರ್ವರ್ ಒಂದೊಂದು ಬಟ್ಟೆಯೊಳ್ ಬೇಱೆವೇಱೆ ಪೋಗಿ ಪೊಳಲನ್ ಪೊಕ್ಕು, ಧರ್ಮಪುತ್ರನ್ ಧರಾಮರವೇಷದೊಳ್ ವಿರಾಟನನ್ ಕಂಡು ಆಶೀರ್ವಾದಮನ್ ಕುಡೆ...

**ವಿರಾಟ:** ನೀಮ್ ಎತ್ತಣಿನ್ ಬಂದಿರ್.

(ಎಂಬುದುಮ್)

**ಧರ್ಮರಾಯ:** ಆಮ್ ಧರ್ಮರಾಜನ ಸಮೀಪದೊಳ್ ಇರ್ಪೆವು. ಅರಸಂಗೆ ಪೊಳ್ತು ಪೋಗದಾಗಳ್ ಎಮ್ಮೊಡನೆ ನೆತ್ತಮನ್ ಆಡುವನ್. ಅದಲ್ಲದೆಯುಮ್ ಕನವರಿಸೆ ಎನಗೆ ನಾಲ್ಕು ವೇದಮುಮ್ ಮುಖೋದ್ಗತಮ್. ಅದಲ್ಲದೆ ನೃಪತಿ ಆಱು ಅಂಗದ ಮಾತು ಅನಿತೆ ಗಡ. ನಿನಗೆ ಆಳಾಗಲ್ಕೆ ಬಂದೆನ್ ಕಂಕಭಟ್ಟನೆನ್ ಎಂಬೆನ್.

(ಎಂಬುದುಮ್, ವಿರಾಟನ್ ಆತನ ಭದ್ರಾಕಾರಮುಮನ್ ಮೃದುಮಧುರಗಂಭೀರ ವಾಣಿಯುಮನ್ ಕಂಡು ಕರಮ್ ಮನದೆಗೊಂಡು...)

**ವಿರಾಟ:** ಕರಮ್ ಒಳ್ಳಿತು.

(ಎಂದು ಕಂಕಭಟ್ಟನನ್ ಇರಿಸಿದನ್. ಅನ್ನೆಗಮ್ ಭೀಮಸೇನನುಮ್ ಬೋನವೇಳಿಗೆಯನ್ ಸಟ್ಟುಗಮುಮನ್ ಒರ್ವ ಪರಿಚಾರಕನಿನ್ ಪಿಡಿಯಿಸಿಕೊಂಡು ಬಂದು ನಿಂದನನ್ ಕಂಡು...)

**ವಿರಾಟ:** ನಿನ್ನ ಬಿನ್ನಾಣಮ್ ಏನ್

(ಎಂದು ಬೆಸಗೊಳೆ)

**ಭೀಮಸೇನ:** ಎನ್ನಟ್ಟ ಅಡುಗೆಯನ್ ಉಂಡೊಡೆ ಬಿನ್ನಣಮ್ ಏನ್ ಅರಸ, ನರೆಗಳಾಗವು. ಸವಿಯೊಳ್ ನಿನ್ನನ್ ಮೆಚ್ಚಿಪೆನ್. ಎಡಱಿದೊಡೆ ಎನ್ನರೊಳಮ್ ಮಲ್ಲನ್. ಒರ್ವ ವಲ್ಲಲನ್ ಎಂಬೆನ್.

(ಎಂಬುದುಮ್)

**ವಿರಾಟ:** ನಿನ್ನನ್ ಆಳ್ವೆನ್.

(ಎಂದು ಬಾಣಸಿನ ಕರಣಕ್ಕೆ ನಿರೂಪಣಮ್ ಗೆಯ್ದನ್. ಅನ್ನೆಗಮ್ ನಕುಳನುಮ್ ಅಂಕವಣೆಯುಮ್, ಬಾಳುಮ್, ಬಾರುಮ್, ಚಮ್ಮಟಿಗೆಯುಮನ್ ಒರ್ವ ಕೀಳಾಳಿನ್ ಪಿಡಿಯಿಸಿಕೊಂಡು ಬಂದು ವಿರಾಟನನ್ ಕಂಡು...)

**ನಕುಲ:** ಎಂತಪ್ಪ ದುಷ್ಟಾಶ್ವಂಗಳುಮನ್ ಏಱಲುಮ್ ತಿರ್ದಲುಮ್ ಬಲ್ಲೆನ್.

(ಎಂದು ಪೇಳ್ದು, ಆಳಾಗಿ ತಂತ್ರಪಾಳ ಪೆಸರೊಳ್ ಮಾಸಾದಿಯಾಗಿ ಇರ್ದನ್. ಸಹದೇವನುಮ್ ಗೋಪಾಳವೇಷದೊಳ್ ಬಂದು ಕಂಡವನ ಗೋಮಂಡಳಾಧ್ಯಕ್ಷನ್ ಆಗಿರ್ದಾಗಳ್,

ವಿಕ್ರಮದಿನ್ ಎಳೆಯನ್ ತರಲ್ ಮುನ್ ಮಹಿಧರನ್ ಪಂದಿಯಾದಂತೆ, ಪೋದೆಳೆಯನ್ ದಾಯಿಗರನ್ ಆದ ಏವದಿನ್ ಪಡಲ್ವಡಿಸಿಕೊಂಡು ಆಳಲ್ಕಮ್, ಮುಳಿಸಿನ್ ರಂಭೆಯ ಕೊಟ್ಟ ಶಾಪಮನ್ ನೀಗಲ್ಕಮ್, ಆಗಳ್ ಆತ್ಮಕಾರ್ಯ ವಶದಿನ್ ಮತ್ಸ್ಯನಾ ಶುದ್ಧಾಂತದೊಳ್ ನರನ್ ಬೃಹಂದಳೆಯಾದನ್. ಅಂತು ಬೃಹಂದಳೆಯಾಗಿ ಗಾಂಡೀವ ಜ್ಯಾಘಾತದೊಳ್ ಇಂದ್ರನೀಲಂಗಳನ್ ಅಡಸಿದಂತಿರ್ದ ಎರಡುಮ್ ಮುಂಗೆಯ್ಗಳ ಕರ್ಪನ್ ತೀವೆ ತೊಟ್ಟ ಬಳೆಗಳ್ ಮಱಸೆ, ವಿರಾಟನ ಮಗಳಪ್ಪ ಉತ್ತರೆ ಮೊದಲಾಗೆ ಪಲವುಮ್ ಪಾತ್ರಂಗಳನ್ ಆಡಿಸುತ್ತುಮ್, ಮಹಾಭಾರಾವತಾರದೊಳಪ್ಪ ಸಂಗ್ರಾಮರಂಗದೊಳ್ ಅರಾತಿ ನಾಯಕರ ಕಂಬಂಧ ಪಾತ್ರಗಳನ್ ಆಡಿಸುವುದನ್ ಉದಾಹರಿಸುವಂತೆ ಇರ್ದನ್. ಪಾಂಚಾಳ

ರಾಜತನೂಜೆಯುಮ್ ರೂಪುಗರೆದು ಸೈರಂಧ್ರೀ ವೇಷದೊಳ್ ಪೋಗಿ ವಿರಾಟನ ಮಹಾದೇವಿ ಸುದೇಷ್ಣೆಯನ್ ಕಾಣ್ಬುದುಮ್, ಆಕೆಯುಮ್ ಕೃಷ್ಣೆಯ ರೂಪನ್ ಕಂಡು ಚೋದ್ಯಂಬಟ್ಟು...)

**ಸುದೇಷ್ಣೆ:** ಸಾಮಾನ್ಯೆಯಲ್ಲೆ ನೀನ್ ಆರ್ಗೆ... ಏನ್ ಎಂಬೆ.

(ಎಂದು ಬೆಸಗೊಳೆ..)

**ದ್ರೌಪದಿ:** ದೇವಿ, ನವಮೃಗಮದ ಪರಿಮಳಮುಮನ್ ಇವು ಮಸುಳಿಪುವು ಎನಿಪ ವಿವಿಧ ಗಂಧಂಗಳನ್ ಆನ್ ಅವಯವದೊಳ್ ಮಾಡುವ ಘಟ್ಟಿವಳ್ತಿಯೆನ್. ಗಂಡವಳ್ತಿಯೆನಲ್ಲೆನ್. ಪೆಸರೊಳ್ ಸೈರಂಧ್ರಿಯೆನ್. ಅಳಿವೆಸನದ ದೆಸೆಯನ್ ಅಱಿಯೆನ್. ಎನಗೆ ಗಂಧರ್ವರ ಕಾಪು ಅಸದಳಮುಂಟು. ಇರಿಸುವೊಡೆ ಆನ್ ಬೆಸಕೆಯ್ವೆನ್. ನಿನ್ನ ಬೆಸಸಿದ ಅಂದದೊಳ್ ಇರ್ಪೆನ್.

(ಎಂದು ವಿರಾಟನ ಮಹಾದೇವಿಗೆ ಆವಗಮ್ ಅಣುಗೆಯಾಗಿ ಪಾಂಚಾಳಿ ಇರ್ದಳ್. ಅಂತು ಈ ಮಾಳ್ಕೆಯಿಂದ ಇರ್ಪನ್ನೆಗಮ್...)



# ೪೮. ಕೀಚಕನ ಕೊಲೆ

(೫೭ ನೆಯ ಗದ್ಯದಿಂದ ೮೨ ನೆಯ ಗದ್ಯ)

## ಪಾತ್ರಗಳು

| | |
|---|---|
| **ಕೀಚಕ:** | ಸುದೇಷ್ಣೆಯ ತಮ್ಮ. |
| **ಸುದೇಷ್ಣೆ:** | ವಿರಾಟ ರಾಜನ ಹೆಂಡತಿ. |
| **ಸೈರಂಧ್ರಿ/ದ್ರೌಪದಿ:** | ಅರ್ಜುನನ ಹೆಂಡತಿ. ಈಗ ಸುದೇಷ್ಣೆಯ ದಾಸಿ. |
| **ಭೀಮ:** | ಪಾಂಡುರಾಜ ಮತ್ತು ಕುಂತಿಯ ಮಗ.<br>ಈಗ ವಿರಾಟನ ಅರಮನೆಯಲ್ಲಿ ಬಾಣಸಿಗ. |
| **ಯಮ:** | ಮೃತ್ಯು ದೇವತೆ. |
| **ಒಡಹುಟ್ಟಿದವರು** | ಕೀಚಕನ ತಮ್ಮಂದಿರು. |
| **ಪಟ್ಟಣಿಗರು:** | ವಿರಾಟನಗರದ ಪ್ರಜೆಗಳು. |

# ಕೀಚಕನ ಕೊಲೆ

ಪಾಂಡವರ್ ಈ ಮಾಳ್ಕೆಯಿಂದೆ ಇರ್ಪನ್ನೆಗಮ್, ಒಂದು ದೆವಸಮ್ ವಿರಾಟನ್ ನೆಲದೊಳುಳ್ಳ ಮಲ್ಲರೆಲ್ಲುರಮನ್ ಬರಿಸಿ ಮಲ್ಲಯುದ್ಧಮನ್ ನೋಡೆ, ಸುಯೋಧನನ ಮಲ್ಲನ್ ವಿಷಖರ್ಪರನ್ ಎಂಬನ್ ತನ್ನ ಮಲ್ಲರೆಲ್ಲರುಮನ್ ಕೊಂದೊಡೆ ಸಿಗ್ಗಾಗಿ, ತನ್ನ ಬಾಣಸಿಗನಾಗಿರ್ದ ವಲ್ಲಲನನ್ ಕರೆದು ಪೇಳ್ದಾಗಳ್, ಕಲಿ ವಿಷಖರ್ಪರನ್ ಪರ್ಪರಿಕೆಗಿಡದೆ ಇದಿರಾಂತೊಡೆ, ವಲಲನ್ ಆಂತು ತಳಮನ್ ಮಾರ್ಪೊಸೆದು ತಳ್ತು, ಕಣ್ತಿರಿತರ್ಪಿನೆಗಮ್ ಅವುಂಕಿ ಸಿಂಹಾನಾದದಿನ್ ಆರ್ದನ್. ಅಂತು ಸುಯೋಧನನ ಮಲ್ಲನನ್ ಕೊಂದು ವಲಲನ್ ವಿರಾಟನ ಮನೆಯೊಳ್ ತನ್ನ ಮಾತೆ ಮಾತಾಗಿರ್ದನ್.

ಅನ್ನೆಗಮ್ ವಿರಾಟನ ಮೈದುನನ್ ಸುದೇಷ್ಣೆಯ ಒಡವುಟ್ಟಿನ್ ಒರ್ವ ಸಿಂಹಬಲನ್ ಕೀಚಕನ್ ಎಂಬನ್ ಸುಯೋಧನನ ದಂಡೆಲ್ಲಮನ್ ಇಱಿದು ಓಡಿಸಿ ಬಂದು, ವಿರಾಟನನ್ ಕಂಡು ತಮ್ಮಕ್ಕನನ್ ಕಾಣಲ್ ಪೋದಾತನ್, ಆ ಮಹಾದೇವಿಯ ಕೆಲದೊಳ್ ಇರ್ದ... ತೋಳ ಮೊತ್ತಮೊದಲ್ ಪೊಗರ್ವಟ್ಟು ಎಸೆವ ಒಂದು ನುಣ್ಪು ಸೊಗಯಿಸೆ; ಸಾವಗಿಸುವ ಮೇಲುದಮ್ ಮೊಲೆಗಳ್ ಅಳ್ಳಿಱಿಯುತ್ತಿರೆ; ಘರ್ಮಬಿಂದುಗಳ್ ಪೊಣ್ಮೆ; ಅಲರಂಬುವೋಲ್ ಪಾಟಲಲೋಲ ವಿಲೋಚನಮ್ ಎಳಸಿ ಮನಂಬುಗೆ; ನಳಿತೋಳ ಕೋಳೆಸೆಯೆ; ಘಟ್ಟಿ ಮಗುಳ್ಚುವ ಘಟ್ಟಿವಳ್ತಿಯನ್... ಭೋಂಕನೆ ಕಂಡು, ಕೀಚಕನ್ ಕಾಮದೇವನ್ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು, ಮನಂಗಾಪಳಿದು ಅಳಿಪಿ ನೋಡಿ, ತನ್ನ ಮನದೊಳ್ ಇಂತೆಂದು ಬಗೆದನ್.

**ಕೀಚಕ:** (ತನ್ನ ಮನಸ್ಸಿನಲ್ಲಿ)

ಮಱಿದುಂಬಿ ಮುತ್ತುಗಳನ್ ಕಾಱುವಂತಿರೆ; ಬೆಮರ್ ಕುರುಳ್ವಿಡಿದು ಸುರಿಯೆ; ನಳಿತೋಳ ಬಳ್ವಳಿಕೆ ಕಣ್ಗೊಳೆ; ಘಟ್ಟಿ

ಮಗುಳ್ಚುವ ಅಂದಮಲ್ತು; ಎನ್ನೆರ್ದೆಯನ್ ಅರೆದು ಮಗುಳ್ಚುವಂದಮೆ ದಲ್; ಪೆಱತೇನ್ ಈ ಮೃಗೋದ್ಭವದ ಕಂಪುಮನ್ ಈಕೆಯ ಸುಯ್ಯ ಕಂಪುಮನ್ ಅದೆಂತು ಪರಿಕಿಪೆನ್ ಪೇಳ್. ವಿಲೋಲೇಕ್ಷಣೆಯಾ ಕಟಾಕ್ಷ ಈಕ್ಷಣಮ್ ಇದೆ ಮದನಭವನಮ್; ಇಂತು ಇದೆ ಮದನಾಮೃತಮ್; ಇದುವೆ ಮದನ ಸಾಯಕಮ್; ಪೋ... ಇದೆ ಮದನ ಮಹೋತ್ಸವಪದಮ್ ಎನಿಸಿದುದು. ಮಾಸಿದ ರೂಪು ನೋಳ್ಪೊಡೆ ಅರೆ ಮಾಸಿದ ಚಿತ್ರದ ಪೆಣ್ಣ ರೂಪುಮನ್ ಮಾಸಿಸೆ ನಾಡೆ ಮಾಸದಿಕೆಯನ್ ಪಡೆದಪ್ಪುದು; ಕಂಡ ಕಣ್ಗಳೊಳ್ ಸೂಸುವ ಮಾಳ್ಕೆಯಿನ್ ಅಂದಮ್ ಪೊಱಗೆ ಪೊಣ್ಮುವುದು; ಕಾಯ್ದು ಕೈವೀಸುವ ಕಾವನ ಅಂದಮ್ ಅದೆಂತೊ; ಇವಳ್ ಏನ್ ಕುಲನಾರಿಯೋ ವಾರನಾರಿಯೋ. ಆವಳ್ ಅಪ್ಪೊಡಮಕ್ಕೆ... ಪೋ... ತಲೆ ಇಂದೆ ಪೋದೊಡಮ್... ಇಂದೆ ಮಾದೇವನ್ ಆರ್ತು ಎಡೆಗೊಂಡೊಡಮ್... ಇಂದೆ ಲಯಮ್ ಬರ್ಪೊಡಮ್... ಎನ್ನುರಮ್ ತೀವಿ ತಳ್ತು ಇವಳ ಈ ಕುಚಾಗ್ರಮನ್ ಅಳ್ಕರಿಂದ ಅಮರ್ದಪ್ಪಿ ಪೋಗು... ಆವ ಉಪಾಯದೊಳಾದೊಡಮ್ ಈಕೆಯೊಳ್ ನೆರೆದಲ್ಲದೆ ಇರೆನ್.

(ಎಂದು ಸೈರಂಧ್ರಿಯನ್ ನೋಡಿ ಸೈರಿಸಲಾಱದೆ ಸಿಂಹಬಲನ್ ಅಂತು ಅನಂಗಮತ್ತಮಾತಂಗ ಕೋಳಾಹಳೀ ಕೃತಾಂತರಂಗನಾಗಿ ತಮ್ಮ ಅಕ್ಕನನ್...)

**ಕೀಚಕ:** ಈಕೆ ಆರ್ಗೆ.

(ಎಂದು ಬೆಸಗೊಂಡೊಡೆ, ಆತನ ಸೋಲ್ತ ಕಣ್ಣಱಿದು...)

**ಸುದೇಷ್ಣೆ:** ಈಕೆ ಸಾಮಾನ್ಯ ವನಿತೆಯಲ್ಲ. ಇವಳ್ ಗಂಧರ್ವ ವನಿತೆ. ಎನ್ನೊಳಾದ ಮಚ್ಚುಮ್ ಮೋಹಮುಮ್ ಕಾರಣಮಾಗಿ ಇರ್ಪಳ್.

(ಎಂಬುದುಮ್ ಆ ಮಾತಿನೊಳ್ ಬೇಟಮ್ ಅಗ್ಗಳಿಸೆ, ನಿಜ ನಿವಾಸಕ್ಕೆ ಬಂದು, **"ಅಕ್ಕನ್ ಎನಗೆ ತನ್ನ ಘಟ್ಟಿವಳ್ತಿಯ**

**ಕೆಯ್ಯೊಳ್ ಅಪೂರ್ವ ವಿಲೇಪನಂಗಳನ್ ಅಟ್ಟುವುದು"** ಎಂದು ಅಟ್ಟುವುದುಮ್, ತಮ್ಮನ ಉಪರೋಧಕ್ಕೆ ಆಱದೆ ಸೈರಂಧ್ರಿಯನ್ ಪೋಗಲ್ ಪೇಳ್ವುದುಮ್, ಆಕೆ ಅವನ ಮನದ ಪಳುವಗೆಯನ್ ಅಱಯದೆ...)

**ಸೈರಂಧ್ರಿ:** ಅಂತೆಗೆಯ್ವೆನ್.

(ಎಂದು ಸ್ಮರನ ಅರಲಂಬು ಕೈಬರ್ದುಕಿ ಬರ್ಪವೊಲ್ ಒಯ್ಯನೆ ಬಂದು ನಿಂದ ಸುಂದರಿಯನ್ ಸಿಂಹಬಳನ್ ಒಱಲ್ದು...)

**ಕೀಚಕ:** ಅಂಬುಜಲೋಲಲೋಚನೇ, ಅಂತೆ ಇರು ಮಾಸಿದೆಯಾದೆ. ಮೇಣ್ ಉಡಲ್ ತರಿಪೆನೆ. ತಂಬುಲಮ್ ಪಿಡಿ. ಮುನ್ನಮ್ ಮನೋಜ ಶಿಖಾಳಿಗಳ್ ಅಳ್ವೆ, ಎನ್ನ ಉರಿವೆರ್ದೆ ನಿನ್ನನ್ ಕಂಡು ಇನಿಸು ಆಱದುದು. ಪರೆದ ಕುರುಳ್ ಅಲುಗೆ, ಘಟ್ಟಿಯನ್ ಅರೆಯುತ್ತುಮ್ ನಾಣ್ಚಿ ಎನ್ನನ್ ತೆಗೆದು ನೋಳ್ಪುದುಮ್, ನಿನ್ನ ನೋಡಿದ ನೋಟಮ್ ಸ್ಮರಕುಳಿಕಾಗ್ನಿಯೆ ಕೊಂಡಂತಿರೆ ಕೊಂಡುದು ನೋಡ. ಅಂಭೋಜ ಪತ್ರೇಕ್ಷಣೇ, ನಿನ್ನೊಂದು ಕಂದಿದ ಮೆಯ್ ಎನ್ನಯ ತೋಳೊಳ್ ಒಂದಿ ಮದನಾಸ್ತ್ರಮ್ ಕರಸಾಣೆಗಾಣಿಸಿದುದು ಎಂಬಂತಾಗೆ, ನೀನ್ ಸಿರಿಯನ್ ಉಯ್ದು ತೊಳ್ತಾಳ್ದ ರಾಗದಿನ್ ಎನ್ನೊಳ್ ಸುಕಮಿರ್ಪುದು. ಎನ್ನ ನುಡಿಯನ್ ನೀನ್ ಕೇಳ್ದು ಒಂದಂಚೆಯನ್ ಪೊದೆಯೊಂದಂಚೆಯನ್ ಉಟ್ಟ ನಿನ್ನಿರವು ಇದೇನ್.

ಬಿಗಿದೊಗೆದ ನಿನ್ನ ಮೊಲೆಗಳ ಮೃಗಮದದ ಪುಳಿಂಚುಗಳ್ ಪಗಿಲ್ತಿರಲ್ ಎಡೆಯಾದ ಅಗಲುರಮನ್ ಎನಗೆ ಪಡೆದ ಅಜನ್ ಎಲೆಗೆ ನಿನ್ನನ್ ಎನಗೆಯೆ ಪಡೆದನ್ ಒಗಸುಗಮಲ್ತು ಎನಗೆ ಅರಸಿಯಾಣೆ, ನಿನ್ನೊಡನೆ ಎನಗೆ ಏಗೆಟ್ಟಪುದು ಇದೆಂದು ಜಿಸೋಡಾಡಲ್ ಕೆಮ್ಮನೆ ನುಡಿದೊಡೆ, ಕಣ್ಗಮ್ ಮನಕ್ಕೆ ವಂದಿರ್ದ ನಿನ್ನೊಳ್ ಎನಗೆ ಎರಡುಂಟೇ ಬಾಯಳಿದು ಎನಿತೆರೆದೊಡಮ್ ಹಾ ಎನ್ನೆಯ. ಕರಮೆ

ಮಱುಗಿ ಮೆಯ್ವಿಡಿದು ಉರಿವ ಎನ್ನ ಈ ಎದೆಯನ್ ಆಱಿಸಲ್, ನೀನ್ ಬಾಯೊಳ್ ತಂಬುಲಮನಪ್ಪೊಡಮ್ ದಯೆಗೆಯ್ವೋ...

(ಎಂದು ಮತ್ತಮ್ ಎನಿತಾನುಮ್ ತೆಱದ ಲಲ್ಲೆಯಿನ್ ಅಳಿಪನ್ ತೋಱಿ ಬಾಯಳಿದು, ತನ್ನ ನುಡಿಗಳ ಅಳಿಪು ಇಳಿವೋಗೆ ಸೈರಿಸಲಾಱದೆ ಪಿಡಿವುದುಮ್, ಪಾಂಚಾಲರಾಜ ತನೂಜೆ ಇಂತೆಂದಳ್.)

**ಸೈರಂಧ್ರಿ:** ಎನ್ನೊಳ್ ಇಂತಪ್ಪ ಅಳಿಪಿನ ನುಡಿಯನ್ ನುಡಿಯಲ್ವೇಡ. ನಿನ್ನ ಮಾತಿಂಗೆ ಚಿಃ ಮೆಳ್ಪಡುವಂತಪ್ಪಾಕೆಯಲ್ಲೆನ್. ಬಿಡು ಗಡ. ಬಿಡದಂದು ನೀನ್ ಎನ್ನ ಗಂಧರ್ವರಿಂದಮ್ ಮಡಿವಯ್.

(ಎಂದೊಡೆ)

**ಕೀಚಕ:** ಅಂತಪ್ಪೊಡೆ ಬಿಡೆನ್. ಎನಗಮ್ ಮೇಗುವೇಳ್ದಪ್ಪೆಯಲ್ಲ, ಆರ್ಪೊಡೆ ನಿನ್ನನ್ ಕಾವ ಗಂಧರ್ವರೆ ಬಿಡಿಸುಗೆ ಪೋಗು.

(ಎಂದು ದುರಾತ್ಮನ್ ಪೊಯ್ದನ್. ಪೊಯ್ದೊಡೆ ಬಱುಬನ್ ಪೊಯಿಲ್ವೆತ್ತಂತೆ ಏನುಮನ್ ಅಱಿಯದೆ ಪರಿಭವಾನಿಲನಿನ್ ಶೋಕಾನಲನ್ ಇರ್ಮಡಿಸೆ, ನಡನಡುಗಿ ಕಾಯ್ಪಿನೊಳ್ ಪಿಡುಗಿ ತಳೋದರಿ ವೃಕೋದರನಲ್ಲಿಗೆ ವಂದು ಕಟ್ಟೇಕಾಂತದೊಳ್ ಇಂತು ಎಂದಳ್.)

**ದ್ರೌಪದಿ:** ಪೆಱಿನ ಇಕ್ಕುಂಗೂಳೊಳಮ್ ಕೀಳಿಲೊಳಮ್ ಅಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಮ್, ಮಱುಗುತ್ತಿರ್ಪಳ್ಗೆ ಎನಗೆ ನೋಡ ಆದ ಅಳಲನ್. ಕಣ್ಸೋಲದಿನ್ ಕೀಚಕನ್ ಬಂದು ಉಱದೆ ಎನ್ನನ್ ಕಾಡಿ, ಕೈಗೆಲ್ದು ಉಗಿದನ್. ಅವನ ಅದು ಒಂದು ಉರ್ಕನ್ ಏವೇಳ್ವೆನ್. ಇನ್ ನೀನ್ ಅಱಿವಯ್ . ಪೂಣ್ದು ಎನ್ನದು ಒಂದನ್ ಪರಿಭವನಿದನ್ ಭೀಮಸೇನಾ ನೀನ್ ನೀಗು.

(ಎಂಬುದುಮ್ ಭೀಮಸೇನನ್ ಏವದೊಳ್...)

**ಭೀಮ:** ಕಣ್ಣಾಗಣದೆ ಇವನೊರ್ವನ್ ದುಶ್ಶಾಸನನ ನಂಟನಕ್ಕುಮ್. ಆದೊಡೇನಾಯ್ತು ಎನಗೆ ಮುಳಿಸೆಂಬುದು ಆ ಕೌರವರೊಳೆ

ಪಿರಿದು. ಆ ಬಲಿದ ಬಯಕೆಯನ್ ಮಾದುರದೊಳ್ ಕಳೆವಂತು ಅನ್ನೆಗಮ್ ಅಬ್ಜದಳಾಕ್ಷೀ... ನಿನ್ನೊಂದು ಮುಳಿಸನ್ ಇವನೊಳ್ ಕಳೆವೆನ್. ನೀನ್ ಈ ವಿರಾಟನ ನಾಟಕ ಶಾಲೆಯನೆ ಸಂಕೇತ ನಿಕೇತನಮ್ ಮಾಡಿ, ನೇಸರ್ಪಡಲೊಡಮ್ ಎನ್ನಿಮ್ ಮುನ್ನಮೆ ಪೋಗಿ ಇರ್ಪುದು. ಆನ್ ಅಲ್ಲಿಗೆ ವರ್ಪೆನ್. ಆ ಪಾಣ್ಬನನ್ ನಂಬೆ ನುಡಿದು ಆ ಪೊಳ್ತಿಂಗೆ ಎನ್ನನ್ ಅಲ್ಲಿಗೆ ವರಿಸು. ಅವಂಗೆ ತಕ್ಕುದನ್ ಆನೆ ಬಲ್ಲೆನ್.

(ಎಂದು ನುಡಿದು ಕಳಿಪಲ್ ಆ ದ್ರೌಪದಿ ಸಂತಸಂಬಟ್ಟು...)

**ದ್ರೌಪದಿ:** ಅಂತೆ ಗೆಯ್ವೆನ್.

(ಎಂದು ಪೋಗಿ ಮಱುದೆವಸಮ್ ಲತಾಲಲಿತೆ ಕೀಚಕನಲ್ಲಿಗೆ ಕಾಮನೊಂದು ಕೈಸೆಱೆಯೆನಿಪ ಅಂಗರಾಗಮನ್ ಇಳೇಶ್ವರ ವಲ್ಲಭೆ ಅಟ್ಟಲ್ ಉಯ್ದೊಡೆ...)

**ಕೀಚಕ:** ಆನ್ ಅಱಿಯದೆ ನಿನ್ನೆ ನೋಯಿಸಿದೆನ್. ಇಂದು ಎನಗೆ ಎಂಬುದನ್ ಎಂಬುದು.

(ಎಂದು ಕಾಲ್ಗೆ ಎಱಗಿದೊಡೆ...)

**ಸೈರಂಧ್ರಿ:** ಒಳ್ಳಿತಾಗೆ ನಿನಗೆ ಇನಿತೊಂದು ಒಲವು ಉಳ್ಳೊಡೆ ಒಲ್ಲೆನೇ.

(ಎಂದು ನಂಬೆ ನುಡಿದು, ವಿರಾಟನ ನಾಟಕಶಾಲೆಯನೆ ಪೂರ್ವಸೂಚಿತಕ್ರಮದೊಳ್ ಕುಱುಪುವೇಳ್ದು, ಸೂರ್ಯಾಸ್ತಮಯ ಸಮಯದೊಳ್ ಭೀಮಸೇನಂಗೆ ತತ್ ವೃತ್ತಕಮನ್ ಅಱಿಪಿದೊಡೆ, ಬಾಹುಯುದ್ಧಸನ್ನದ್ಧನಾಗಿ, ಕಲಿಗಂಟಿಕ್ಕಿ, ಗಂಡುಡೆಯುಮನ್ ಉಟ್ಟು, ಮೇಲುದನ್ ಇಳಿಯೆ ಮುಸುಕಿಟ್ಟು ಪೋಗಿ, ಗುಣಣೆಯ ಬಾಗಿಲೊಳ್ ದ್ರೌಪದಿಯನ್ ಇರಿಸಿ, ವೀರಶ್ರೀಯ ವಿವಾಹಮಂಟಪಮನ್ ಪುಗುವಂತೆ ಒಳಪೊಕ್ಕು ಸಿಂಗಬಲನೆಂಬ ಅಗುರ್ವಿನ ಸಿಂಗಮನ್ ಅಸಿಧೇನು ಕಿರಣಕೇಸರಮಾಲಾಸಂಗತಮನ್ ಅಡಸಿ ನುಂಗಲ್ ಸಂಗತಬಲನ್ ಒಂದು ಶರಭಮಿರ್ಪಂತೆ ಇರ್ದನ್.

ಅನ್ನೆಗಮ್ ಇತ್ತ ಕೀಚಕನೆಂಬ ಪಾಣ್ಬನ್ ಅಚ್ಚಿಗದಿಂದೆ ಅಳಲ್ದು, ಇನನ್ ಅಡಂಗದ ಬೇಸಜಿಯೊಳ್ ಅಂತೆ ನೀರೊಳಮ್ ಕಿಚ್ಚಿನೊಳಮ್ ಪೊರಳ್ದು, ಪಗಲ್ ಅಂದು ಇರುಳಾದೊಡೆ ರಾಜ್ಯಮಾದವೊಲ್ ಪೆರ್ಚಿ, ಮನಕ್ಕೆ ಬಿಚ್ಚತಿಕೆವಂದಿರೆ ನಾಟಕ ಶಾಲೆವೊಕ್ಕು, ವಿದ್ಯುಚ್ಚಪಳನ್ ಮನೋಜಪರಿತಾಪದಿನ್ ಭೀಮನನ್ ಓಪಳೆಗೆತ್ತು...)

**ಕೀಚಕ:** ನುಡಿಯದೆ ಕೆಮ್ಮನಿರ್ಪ ಇರವು ಇದು ಆವುದು ಕಾರಣಮ್. ಈ ಮೊಗಂಗುಡದ ಇರವು ಆವುದು. ಇಂತು ಮಾನಸರ್ ಕಣ್ಬಡಿಗರಪ್ಪರೆ ಅಪ್ಪರ್...

(ಎಂದು ಮೆಳ್ಪಡೆ ನುಡಿದು ಎಯ್ದೆವಂದು ಮುಸುಕನ್ ತೆಗೆದಾಗಡೆ, ಬಲ್ದಡಿಗನ್ ಮೇಲೆ ವಾಯ್ದು ಬಲ್ದಡಿಗನನ್ ಅಮುಂಕಿ ಪಿಡಿದು, ಒರ್ಮೆಯೆ ಮಲ್ಲಯುದ್ಧದೊಳ್ ಪೋರ್ದು, ಮಲ್ಲಾಮಲ್ಲಿಯಾಗೆ ಪಲವುಮ್ ಗಾಯಗಳೊಳ್ ಆಯಮ್ ತಪ್ಪದೆ, ತನಗೆ ಅವನ್ ಸಮಾನಬಳನ್ ಅಪ್ಪುದಱಿನ್, ಪಿರಿದು ಪೊಳ್ತು ಸಲ್ತರ್ಪಿನಮ್ ಪೋರ್ದು, ಬಳೆಯ ಪೇಱಿನ್ ಆನೆ ಮೆಟ್ಟಿದಂತೆ ನುರ್ಚುನೂಱಪ್ಪಿನಮ್ ಅವುಂಕಿ ಪಿಡಿದು ಅಡಸಿ, ಅಗುರ್ವು ಪರ್ವೆ ಬೀಸಿ ಗುಣಣೆಯ ಕಂಭಂಗಳೊಳಮ್ ಕೇರ್ಗಳೊಳಮ್ ಆಸ್ಫೋಟಿಸಿ ತಾಟಿಸಿದಾಗಳ್, ಬಿಸುನೆತ್ತರ್ ನೆಣಮ್ ಅಡಗು ಎಲ್ವು ಸಮಸ್ತಮ್ ಸುರಿಯೆ, ಕೈಗೆ ತೊವಲುಳಿಯಲ್, ಕೀಚಕನಾ ತನು ತೀವಿದ ಗುಳ್ಳೆಯ ಪಸುಂಬೆಯನ್ ಸೋರ್ಚಿದಂತೆ ಅಗುರ್ವಿಸಿದುದು.)

**ಯಮ:** (ತನ್ನಲ್ಲಿಯೇ)

ಆನ್ ಜಗದೊಳ್ ಬಲಸ್ಥನೆನ್. ಎನಗೆ ಇದಿರ್ಚುವರಾರ್ ಎಂದು ಸೋಲದಿನ್ ಕಂಜದಳಾಕ್ಷಿಯನ್ ಖಳನ್ ಪಿಡಿದನ್.

(ಎಂಬ ಅಳಲಿಂದಮ್ ಅತ್ತಮ್ ಇತ್ತಮ್ ಜವನ್ ಒಕ್ಕಲಿಕ್ಕಿದೊಡೆ, ನಾಟಕಶಾಲೆಯೊಳ್ ಸೂಸಿದ ಖಂಡದ ಇಂಡೆಗಳ್ ರಕ್ತಪುಷ್ಪಾಂಜಲಿ ಗೆಯ್ದು ಮಾಳ್ಕೆವೊಲ್ ಇರ್ದುವು.

ಅಂತು ಸಂಧಿ ಸಂಧಿಯೊಳ್ ಸಹಸ್ರ ಸಿಂಹಬಲನ್ ಎನಿಪ ಸಿಂಹಬಲನನ್ ಅಶ್ರಮದೊಳೆ ಕೊಂದು, ಜವಂಗೆ ಬಾಣಸುಗೆಯ್ದ್ ಎಂದಿನ ಅಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದನ್. ಇತ್ತ ದ್ರೌಪದಿಯುಮ್ ಉಪಾಯದೊಳ್ ಗುಣಣೆಯ ಮನೆಯ ಮುಂದೆ ನಿಂದು...)

**ಸೈರಂಧ್ರಿ:** ಗಂಧರ್ವ ವನಿತೆಯೆನ್. ನಿರ್ಬಂಧಮ್ ಬೇಡ. ಅಳಿಪೆ ಸಾವೆಯೆನೆ ಮಾಣದೆ ಕಾಮಾಂಧನ್ ಕೀಚಕನ್ ಆಟಿಸಿ ಎನಗೆ ದೂಱಿಪ್ಪಿನೆಗಮ್ ಗಂಧರ್ವರಿನ್ ಅಳಿದನ್.

(ಎಂದು ಗಗ್ಗರಿಕೆಗೊಳ್ವ ಸರಮನ್ ಕರ್ಣಪರಂಪರೆಯಿನ್ ಕೇಳ್ದು, ಸಿಂಹಬಲನೊಡವುಟ್ಟಿದರ್ ನೂರ್ವರ್ ಕೀಚಕರುಮ್ ಪರಿತಂದು ಮುಳಿಸಿನೊಳ್ ಕಣ್ಗಾಣದೆ...)

**ಕೀಚಕನ ತಮ್ಮಂದಿರು:** ಎಲ್ಲಮ್ ಈ ಡಾಮರ ಡಾಕಿನಿಯಿಂದಮ್ ಆದುದು. ಈಕೆಗಮ್ ಎಮ್ಮ ಅಣ್ಣಂಗಮ್ ಒಂದೆ ವಿಧಿಯನ್ ಮಾಳ್ಪೆಮ್.

(ಎಂದು ಆಕೆಯನ್ ಮುಂದಿಟ್ಟು ಪೋದರ್. ಇವನನ್ ಇರುಳೊಳೆ ಸಂಸ್ಕರಿಸಲ್ವೇಳ್ಕುಮ್ ಎಂದು ಕೊಂಡು ಪೋಪಾಗಳ್, ಆ ಕಳಕಳಮನ್ ಭೀಮಸೇನನ್ ಕೇಳ್ದು, ಅವಂದಿರೊಡನೆ ರೂಪುಗರೆದು ಪೊಳಲನ್ ಪೊಱಮಟ್ಟು, ಬಱಸಿಡಿಲ್ ಎಱಗುವಂತೆ ನಿಜಭುಜಶಿಖರ ಆಸ್ಫಾಲನಮ್ ಗೆಯ್ದು...)

**ಭೀಮ:** ನಿಮಗಮ್ ವನಿತಾ ಹೇತುವೆ ಕೇತುವಾಯ್ತು. ಗಾಂಧರ್ವರಿಂದೆ ಇಂದು ನಿಮ್ಮ ನಿಷೇಕಮ್ ನೆಱೆದತ್ತು ಸತ್ತಿರ್..

(ಎನುತುಮ್ ಪೊಕ್ಕು ಕಾಳಾಂಬುದ ಧ್ವನಿಯಿನ್ ಆರ್ದು, ಬಾಳೆಯ ಚೆಲ್ವನಪ್ಪ ಬನಮನ್ ಕಾಡಾನೆ ಪೊಯ್ದಂತೆ ಪೊಯ್ದು, ಇನಿಸುಮ್ ಮಾಣದೆ ನೀಚಕೀಚಕನಿಕಾಯ ಧ್ವಂಸಮನ್ ಮಾಡಿದನ್. ಅಂತು ಅಳವಿಗಳಿಯೆ ಕೊರ್ವಿದ ಕೀಚಕವನಮೆಲ್ಲಮ್ ಒಂದು ಇರುಳೊಳೆ ಸಾಹಸಭೀಮನ ಉದ್ದಾಮಕೋಪ ದವ ದಹನಜ್ವಾಲಾ ಸಹಸ್ರಂಗಳಿನ್ ಅಳ್ಕಿಮೆಳ್ಕಿದಂತೆ ಅಪ್ಪುದುಮ್, ನೇಸಱ್ ಮೂಡಿದಾಗಳ್ ಆ

ಪಡೆಮಾತನ್ ಇರ್ದರ್ ಇರ್ದಲ್ಲಿಯೆ ಕೇಳ್ದು...)

**ಪಟ್ಟಣಿಗರು:** ಕೀಚಕ ಬಲಮ್ ಗಂಧರ್ವರಿಂದೆ ಇಂದು ಪಡಲಿಟ್ಟಂತೆ ಪೊಲಾಯ್ತು. ಇಂದಿರುಳ್ ಸಂಗಡ ಮಿಳ್ತುವಾಯ್ತು. ಏನ್ ಗಡ. ಪೆಱವೆಣ್ಗೆ ಒಲ್ದಂಗೆ ಏನಾಗದು. ಇಂದು ಮತ್ಸ್ಯನೊಂದು ಬಲಗೆಯ್ ಉಡಿದತ್ತಾಗದೆ ಎಂದು ಅಕ್ಕಟಾ ಎಂಬುದನ್ ನುಡಿಯಲ್ಕೆ ಆರ್ತರುಮ್ ಇಲ್ಲ. ಪಾರದರದೊಳ್ ಸತ್ತಂಗೆ ಅಳಲ್ವನ್ನರ್ ಆರ್ . ರಾವಣನುಮ್ ಸೀತಾದೇವಿಗೆ ಸೋಲ್ತು ಅದಱ ಫಲಮನ್ ಎಯ್ದಿದರ್ ಗಡ. ಇವನ್ ಆ ರಾವಣನಿನ್ ಪಿರಿಯನೆ ಪೇಳ್. ಶುಚಿಯಿಲ್ಲದವನ ಗಂಡುಮ್ ತೊಂಡುಮ್ ಏವುದೋ.

(ಎಂದು ಪೊಳಲ ಜನಂಗಳ್ ಗುಜುಗುಜುಗೊಂಡು ಕೀಚಕನ ಪಡೆಮಾತನೆ ನುಡಿಯೆ, ವಿರಾಟನ ಮಹಾದೇವಿಯುಮ್ ಪೇಡಿ ಸತ್ತಂತೆ ಏನುಮನ್ ಎನಲ್ ಅಱಿಯದೆ ನಾಣ್ಚಿ, ತನ್ನೊಳೆ ಮೂಗಳ್ಕೆಯನ್ ಅಳ್ತು ಕೆಮ್ಮನೆ ಇರ್ದಳ್.

ಇತ್ತ ದುರ್ಯೋಧನನ ಗೂಢಪ್ರಣಿಧಿಗಳ್ ಆ ಮಾತನ್ ಜಲಕ್ಕನೆ ಅಱಿದು ನಾಗಪುರಕ್ಕೆ ವಂದು ಸುಯೋಧನ ಸಭಾ ಮಧ್ಯದೊಳ್ ಇಂತು ಎಂದು ಬಿನ್ನಪಮ್ ಗೆಯ್ದರ್.)



# ೪೯. ಗೋಗ್ರಹಣ

(೮೨ ನೆಯ ಗದ್ಯದಿಂದ ೯೧ ನೆಯ ಪದ್ಯ)

## ಪಾತ್ರಗಳು

**ಗೂಢಚಾರ:** ದುರ್ಯೋಧನನ ಕಡೆಯ ಗೂಢಚಾರ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

**ದ್ರೋಣ:** ಕೌರವರು ಮತ್ತು ಪಾಂಡವರ ಗುರು.

**ಕರ್ಣ:** ಅಂಗರಾಜ್ಯದ ಒಡೆಯ.

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

# ಗೋಗ್ರಹಣ

ಇತ್ತ ದುರ್ಯೋಧನನ ಗೂಢಪ್ರಣಿಧಿಗಳ್ ಆ ಮಾತನ್ ಜಲಕ್ಕನೆ ಅಱಿದು, ನಾಗಪುರಕ್ಕೆ ವಂದು ಸುಯೋಧನ ಸಭಾಮಧ್ಯದೊಳ್ ಇಂತೆಂದು ಬಿನ್ನಪಮ್ ಗೆಯ್ದರ್.

**ಗೂಢಚಾರ:** ಗುಡಿಗಮ್ ಬದ್ದವಣಕ್ಕಮ್ ಅಪ್ಪ ಪಡೆಮಾತು.

**ದುರ್ಯೋಧನ:** ಏ ಮಾತು.

**ಗೂಢಚಾರ:** ಇದನ್ ಕೇಳ್ದೊಡೆ ಈಗಳೆ ಮೆಚ್ಚಿ ಈಯಲ್ವೇಳ್ಪುದು. ನಿಮ್ಮಡಿಯೊಳ್ ಎಯ್ದೆ ಪರಮದ್ರೋಹರ್ಕಳಾಗಿರ್ದು ಪೋಗದೆ ಕಾಡುತಿರ್ದ ಸುಭಟರ್ಕಳ್ ನೂರ್ವರುಮ್ ಕೀಚಕರ್ ದೇವರದೊಂದು ಪುಣ್ಯಬಲದಿಂದೆ ಗಂಧರ್ವ ಯುದ್ಧಾಗ್ರದೊಳ್ ಮಡಿದರ್. ಅದು ಕಾರಣದಿಂದ ಆ ವಿರಾಟನ ಮಂಡಲಮ್ ಗೋಮಂಡಲದಂತೆ ಹೇಳಾಸಾಧ್ಯಮಾಗಿ ಕೈಗೆವರ್ಕುಮ್.

(ಎಂಬುದುಮ್ ಕುರುರಾಜನ್ ಸಿಂಧುತನೂಜನ ಮೊಗಮನ್ ನೋಡಿ...)

**ದುರ್ಯೋಧನ:** ಇದು ದಲ್ ಚೋದ್ಯಮ್, ಅತರ್ಕ್ಯಮ್, ಅದ್ಭುತಮ್, ಅಸಂಭಾವ್ಯಮ್. ವಿಚಾರಕ್ಕೆ ಬಾರದುದು. ಎಂತೆಂದೊಡೆ ಸಂದ ಸಿಂಹಬಲನಮ್ ಭೀಮನಲ್ಲದವರ್ ಕೊಲ್ವನ್ನರ್ ಆರ್. ಕೀಚಕ, ಭೀಮ, ಶಲ್ಯ, ಬಲದೇವರ್ಕಳ್ ತೋಳ್ವಲದೊಳ್ ಸಮಾನರ್ಕಳ್ ಅಪ್ಪುದಱಿಮ್, ಈ ವಿಕ್ರಾಂತಮುಮ್ ಗರ್ವಮುಮ್ ಪೆಱಂಗಮ್ ಅರಿದು. ಅದಱಿನ್ ಪಾಂಡವರ್ಯೈವರುಮ್ ವಿರಾಟಪುರದೊಳ್ ಇರ್ದರಾಗಲೆ ವೇಳ್ಕುಮ್. ಅವರ್

ಇರ್ದರಪ್ಪೊಡೆ ಪರಿಭವದ ಒಂದು ತುತ್ತತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್ ಪೋಜಿಸಳಿವಂತೆ ತಮ್ಮ ಅರಸುಗೆಟ್ಟು ಕಳಲ್ದು ಎರ್ದೆಗೆಟ್ಟು ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರ್, ಇನ್ ಮಗುಳ್ದುಮ್ ಬಿಜುತೋಡಿ ಬೇಡರೊಳ್ ನೆರೆದಿರಲಲ್ಲದೆ, ಒಡ್ಡಯಿಸಿ ರಾಜ್ಯದೊಳ್ ನೆರೆಯಲ್ಕೆ ಏನ್ ತೀರ್ಗುಮೋ.

(ಎಂಬುದಮ್ ಕೌರವನ ಆ ಮಾತಿಂಗೆ ಅಮರಾಪಗಾನಂದನನ್ ಇಂತು ಎಂದನ್.)

**ಭೀಷ್ಮ:** ರಸೆಯೊಳ್ ಕಾಲಾಗ್ನಿರುದ್ರನ್, ಜಲಶಯನದೊಳ್ ಅಂಭೋಜನಾಭನ್, ಪೊದಳ್ದ ಆಗಸದಿನ್ ಸುತ್ತಿರ್ದ ಅಜಾಂಡೋದರದೊಳ್ ಅಜನ್ ಅಡಂಗಿರ್ಪವೋಲ್ ಪಾಂಡವರ್ ಕಾನನದೊಳ್ ಕಾರಣಕ್ಕೆಂದು ಒಸೆದು ಇರ್ದರ್. ಅವರ್ ಇರದೆ ನನ್ನಿಯನ್ ತಪ್ಪೆಯುಮ್ ಸಪ್ತಸಮುದ್ರಮ್ ಮೇರೆಯನ್ ತಪ್ಪೆಯುಮ್ ರಾಜರಾಜಾ ಬಿಗುರ್ತು ಆಂಪವರ್ ಒಳರೇ.

(ಎನೆ ಕುಂಭಸಂಭವನ್ ಇಂತು ಎಂದನ್.)

**ದ್ರೋಣ:** ಕೃತಶಾಸ್ತ್ರರ್ ಧೃತಶಸ್ತ್ರರ್ ಅಪ್ರತಿಹತಪ್ರಾಗಲ್ಭ್ಯರ್ ಪೃಥಾಸುತರ್ ಉದ್ಯೋಗಮನ್ ಎತ್ತಿಕೊಳ್ವ ದೆವಸಮ್ ಈಗಳ್ ಸಾರ್ಚಿತ್ತು. ಕಾಲಾವಧಿಸ್ಥಿತಿಯುಮ್ ಬಂದುದು. ಇದರ್ಕೆ ಮಾಣ್ದಿರದೆ ಮಂತ್ರಾವಾಸದೊಳ್ ಈಗಡೆ ಮಂತ್ರ ನಿಶ್ಚಿತನಾಗು. ಕಾದಿದಲ್ಲದೆ ಇಳೆಯನ್ ನೀನ್ ಎಂತುಮ್ ಏನ್ ಇತ್ತಪಯ್.

(ಎಂದೊಡೆ ಕರ್ಣನ್ ಇಂತು ಎಂದನ್.)

**ಕರ್ಣ:** ಸಾಮಮನ್ ಬಗೆಯದೆ, ಭೇದಮನ್ ಬಿಸುಟು, ಉದಗ್ರ ದಾನಮನ್ ಒಲ್ಲದೆ, ದಂಡಮನ್ ನೆಗಳದೆ ನಿನಗೆ ಮಾಡಿದ ಅಕೃತ್ಯರನ್ ಅಂತು ಮಾಣ್ಬುದು ಏ ಬಗೆ. ಪಗೆ ನೀಗೆಯುಮ್, ಮುಳಿಸು ಪೋಗೆಯುಮ್, ಆಯತಿ ಪೆರ್ಚೆಯುಮ್, ಜಗಮ್ ಪೊಗಳೆಯುಮ್ ಆಂತ ಅರಾತಿನೃಪರನ್ ಅಹೀಂದ್ರಕೇತನಾ ತವೆ ಕೊಲ್ವುದು.

(ಎಂಬುದುಮ್ ಸುಯೋಧನನ್ ಇರ್ವರ ನುಡಿಯುಮನ್ ಕೇಳ್ದು ತನ್ನ ಮನದೊಳಾದ ಕಜ್ಜಮನ್ ಇಂತು ಎಂದನ್...)

**ದುರ್ಯೋಧನ:** ಇರ್ದ ಎಡೆಯನ್ ಅಱಿಯಲೆವೇಳ್ಪುದು. ಅವರನ್ ಇರ್ದ ಎಡೆಯಿನ್ ತೆಗೆದು, ಆಜಿರಂಗದೊಳ್ ನಿಱಿಸಲೆವೇಳ್ಪುದು. ಅವರ್ ಇರ್ಪ ಎಡೆಯುಮ್ ವಿರಾಟನ್ ಇರ್ಪ ಅಱಿಕೆಯ ಪಟ್ಟಣಮ್ ನಮಗೆ ಇದೇ ವಿರಿದಪ್ಪುದು. ನಾಮ್ ತಳ್ವದೆ, ಎಯ್ದಿ ತುಱುವನೆ ಕೊಳ್ವಮ್. ಅಂತು ತುಱುಗೊಂಡಡೆ ಪಾಂಡವರ್ ಇರ್ಪ ಗಂಡರೇ.

(ಎಂದು ಪಿರಿದುಮ್ ಆಗ್ರಹಮ್ ಬೆರಸು ಗೋಗ್ರಹಣ ಪ್ರಪಂಚಮನೆ ನಿಶ್ಚಯಿಸಿ, ವಿರಾಟನ ದಾಯಿಗನ್ ತ್ರಿಗರ್ತಾಧೀಶನ್ ಸುಶರ್ಮನುಮನ್ ನಾಲ್ಛಾಸಿರ ರಥಮ್ ಬೆರಸು ದಕ್ಷಿಣ ದಿಶಾಭಾಗಕ್ಕೆ ವೇಳ್ದು ತುಱುವನ್ ಕೊಳಿಸಿದಾಗಳ್, ವಿರಾಟನ್ ಆತ್ಮತನೂಜನನ್ ಉತ್ತರನನ್ ಕರೆದು, ಆ ಪೊಳಲ್ಗೆ ಕಾಪಿರಿಸಿ ಧರಾತಳಮ್ ತಳರ್ವವೊಲ್ ನಡೆದಾಗಳೆ ಪಾಂಡುಪುತ್ರರ್ ಅಯ್ವರುಮ್...)

**ಪಾಂಡವರು:** ಇದು ನಮ್ಮನಾರಯಲೆ ವೈರಿಯ ಮಾಡಿದ ಗೊಡ್ಡಮ್. ಇಲ್ಲಿ ಮಾಣ್ದಿರಲ್ ಅಣಮ್ ಆಗ. ಪೂಣ್ದ ಅವಧಿಯುಮ್ ನೆಱೆದತ್ತು ಕಡಂಗಿ ಕಾದುವಮ್.

(ಎಂದು ತಮ್ಮಯ್ವರುಮ್ ಆಲೋಚಿಸಿ, ವಿಕ್ರಮಾರ್ಜುನನನ್ ಪೆಱಗಣ ಕಾಪಿಂಗೆ ಇರಲ್ವೇಳ್ದು, ನಾಲ್ವರುಮ್ ನಾಲ್ಕು ಸಮುದ್ರಂಗಳೆ ಮೇರೆದಪ್ಪಿದಂತೆ ವಿರಾಟನೊಳ್ ಕೂಡಿ ಪೋಗಿ ತಾಗಿದಾಗಳ್, ಕಡಲ ಪೊದಳ್ದ ಪೆರ್ದೆರೆಗಳ್ ಎಯ್ದೆ ಕುಲಾದ್ರಿಗಳೊಳ್ ಪಳಂಚಿ ತೂಳ್ದು ಮರಲ್ದವೊಲ್ ಪಾಯಿಸಿದ ಉಗ್ರರಥಂಗಳ್ ಕೆಡೆಯೆ, ಅಳ್ಕಿ ತಳ್ತಡಿಗಿಡೆ ಪಾಯ್ದ ಅರಾತಿನೃಪರನ್ ತಱಿದು, ಇರದೆ ಆ ಸುಶರ್ಮನನ್ ಆಂತು ಪಿಡಿದು ನೆಗಳ್ತೆಯನ್ ಪಡೆದು ಸಾಹಸದಿನ್ ತುಱುವನ್ ಮಗುಳ್ಚಿದರ್.)



# ೫೦. ಉತ್ತರಕುಮಾರನ ಪ್ರಸಂಗ

(೯೧ ನೆಯ ಗದ್ಯದಿಂದ ೧೧೯ ನೆಯ ಗದ್ಯ)

## ಪಾತ್ರಗಳು

**ತುರುಗಾಹಿರು:** ವಿರಾಟರಾಜನ ದನಗಳನ್ನು ಕಾಯುವವರು.

**ಉತ್ತರ ಕುಮಾರ:** ವಿರಾಟರಾಜನ ಮಗ.

**ಅರ್ಜುನ:** ಬೃಹನ್ನಳೆಯ ವೇಷದಲ್ಲಿರುವ ಅರ್ಜುನ.

**ಸೈರಂಧ್ರಿ:** ದಾಸಿಯ ವೇಷದಲ್ಲಿರುವ ದ್ರೌಪದಿ.

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

# ಉತ್ತರಕುಮಾರನ ಪ್ರಸಂಗ

ಅನ್ನೆಗಮ್ ಅತ್ತ ಸುಯೋಧನನ್ ಸಮಸ್ತ ಸಾಧನಮ್ ಬೆರಸು ಉತ್ತರ ಗೋಗ್ರಹಮ್ ಪಿರಿದುಮ್ ಆಗ್ರಹಮನ್ ಮನದೊಳ್ ತಗುಳ್ಚೆ, ದಿಗ್ಭಿತ್ತಿ ವಿಭೇದಿ ಕದನಾನಕರಾವಮ್ ಪೆರ್ಚೆ, ಚಾರುವೀರ ಭಟಕೋಟಿಗೆ ಅಗುರ್ವಿನ ಉರ್ವು ಪರ್ವುತ್ತಿರೆ, ರಾಗರಸಮ್ ಪೊದಳ್ದು ತುಳ್ಕುತ್ತಿರೆ ಬಂದು ವಿಭು ವಿರಾಟನಾ ಗೋಕುಲಮನ್ ಮುತ್ತಿ ಮೊಗೆದನ್.

ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚೆ ಪಾಯಿಸುವ ದಳಕ್ಕೆ ಅಗುರ್ವೆಸೆಯೆ, ನೂಂಕಿದ ಬಲ್ಲಣಿಗೆ ಎತ್ತಮ್ ಎಯ್ದೆ, ಚೋದಿಸುವ ರಥಕ್ಕೆ ಪೆಳ್ಪಳಿಸದೆ ಒರ್ವರಿನೊರ್ವರೆ ಮಿಕ್ಕು ಪಾರ್ದು ಸಾರ್ದು ತುಱುಗಾಱರ್ ಇಸೆ, ಅಂದಿನಿಸು ಅದೊಂದು ಕಾಳಗಮ್ ಬಳ್ವಳನಾದುದು. ಮಚ್ಚರದಿನ್ ಒರ್ವರೊರ್ವರನ್ ಉಚ್ಚಳಿಸಿ ತಗುಳ್ದು ಗೋವರ್ ಆರ್ದು ಇಸೆ, ನಚ್ಚಿನ ಕಾಂಭೋಜವಾಜಿಗಳ್ ಕೆಲವು ಆಗಳ್ ಕೀಳನ್ ಕರ್ಚಿ ಪುಡಿಯೊಳ್ ಪೊರಳ್ದುವು. ಅಂತು ಮತ್ತು ಮನದೊಳೊಡಂಬಟ್ಟಂತೆ ಮನಮನ್ ಎಡಗಲಿಸಿ ಪರಿವ ಜಾತ್ಯಶ್ವಂಗಳ್ ಎಲ್ಲಮ್ ಅಳಿಗಾಳೆಗದೊಳ್ ಸತ್ತೊಡೆ...

**ತುಱುಗಾಱರ್:** ತುಱು ಪರಿವಾಗಳ್ ಎಮ್ಮ ಪೆಣನನ್ ತುಳಿದುಮ್ ಪರಿಗುಮ್ ದಲ್. ಚಿಃ ತುಱುಗೊಳೆ ಬಾಳೆಮ್ ಎಂದು ತುಱುಗೋಳೊಳೆ ಸಾವುದು ಸೈಪು.

(ಇದೆಂದು ಪಾಯ್ದು, ಅಱಿಕೆಯ ಗೋವರ್ ಅಣ್ಮಿ ಬರೆ, ಫೋಳಯಿಲರ್ ಪಾಯಿಸಿ ತಗುಳ್ದು ತತ್ತಱಿ ತಱಿದಿಕ್ಕಿ ದೇಗುಲಕೆ ಪೆರ್ಮರನನ್ ಕಡಿವಂತೆ ಮಾಡಿದರ್. ಆಗಳ್ ಒರ್ವ ಗೋವಳನ್ ಅನಿಬರ ಸಾವುಮನ್ ಕಂಡು ಮನದೊಳ್ ಆದ ಏವಮ್ ಪೆರ್ಚೆಯುಮ್ ತುಱುವ ಪೋಗಿಂಗೆ ಆಱದೆ,

ವಿರಾಟಪುರಕ್ಕೆ ವಂದು ಉತ್ತರಂಗೆ ಪೇಳ್ದಾಗಳ್...)

**ಉತ್ತರ:** ಪೆಱಗಣ ಕಾಪನ್ ಎನ್ನನೆ ಪೂಣಿಸಿ ಮಹೀಪತಿ ಪೋದನ್ ಗಡಮ್. ತುಱುಗೊಳೆ ಮಾಣೆನ್. ಎನ್ನಿದಿರ್ಗೆ ರಾವಣ ಕೋಟಿಯುಮ್ ಆಂತುಮೇನ್ ಗೆಲಲ್ ನೆಱೆಗುಮೆ. ಇನ್ ಎನಗೆ ಸಾರಥಿಯಪ್ಪನನ್ ಈಗಳೆ ತನ್ನಿಮ್.

(ಎಂದು ವಿರಾಟನಂದನನ್ ಪೊಚ್ಚಱಿಸೆ, ಅದೆಲ್ಲಮನ್ ಆಗಡೆ ವಿಕ್ರಮಾರ್ಜುನನ್ ಕೇಳ್ದು, ಆ ಪೊಳ್ತೆ ಪೊಳ್ತಾಗೆ ದ್ರೌಪದಿಗೆ ಬಳಿಯನಟ್ಟಿ ಬರಿಸಿ...)

**ಅರ್ಜುನ:** ಮತ್ಸ್ಯಸುತನ್ ಉತ್ತರನನ್ ಸಾರಥಿ ಮಾಡು. ತದರಾತಿ ಸೈನ್ಯ ಕೂಪಾರದ ಪಾರಮನ್ ತಡೆಯದೆ ಎಯ್ದುವೆನ್.

(ಎಂಬುದುಮ್ ಪಂಕೇರುಹ ವಕ್ತ್ರೆ ಅಂತೆ ಬಂದು ಮತ್ಸ್ಯಸುತಂಗೆ ನುಡಿದಳ್.)

**ಸೈರಂಧ್ರಿ:** ನಿನಗೆ ಆಜಿರಂಗದೊಳ್ ಸಾರಥಿಯಪ್ಪೊಡೆ ಶಿಖಂಡಿಯೆ ಅಪ್ಪುದು. ನಿನ್ನೊರೆಗೆ ಉಂತೆ ಗಂಡರಾರ್.

(ಎಂಬುದುಮ್ ಬೃಹಂದಳೆಯಲ್ಲಿಗೆ ಉತ್ತರನ್ ತನ್ನ ತಂಗೆ ಉತ್ತರೆಯನೆ ಬಳಿಯನಟ್ಟಿ ಬರಿಸಿ...)

**ಉತ್ತರ:** ಸಾರಥಿಯಪ್ಪೊಡೆ ಎನಗೀತನೆ ಅಪ್ಪನ್. ಪೋ ಪೆಱರ್ ಏವರ್. ಇನ್ ನೆರಮ್ ಬಾರೆನ್.

(ಎನುತ್ತೆ ತನ್ನ ರಥಮನ್ ತರವೇಳ್ದು, ಎಯ್ದೆ ಘೋರ ಕಾಂತಾರಮನ್ ಒಂದು ಬೇಗೆ ಪರಿವಂತು ಅಂಕದ ಬೃಹಂದಳೆ ಚೋದಿಸೆ, ಚೋದ್ಯಮಪ್ಪಿನಮ್ ವೈರಿಕಾಂತಾರಮನಳ್ವಲ್ ರಥಮ್ ಪರಿದತ್ತು. ಅಂತು ಕಿಱಿದು ಅಂತರಮನ್ ಪೋಗೆವೋಗೆ ಕರಿಘಟೆ ನೀಳಮೇಘ ಘಟೆಯಂತೆ, ತುರಂಗದಳಮ್ ಸಮುದ್ರ ದೊಳ್ ತರತರದಿಂದೆ ಏಳ್ವ ತೆರೆಯಂತೆ, ರಥಮ್ ಮಹಾ ಮಕರಂಗಳಂತೆ ಅಗುರ್ವುರಿ ವರಿಯುತ್ತುಮಿರ್ಪ ಅಣಿ ಬೃಹತ್ ಬಡಬಾನಳನಂತೆ ತೋಱೆ, ಸುಯೋಧನ ಸೈನ್ಯ ಸಾಗರಮ್ ಉತ್ತರನ ಕಣ್ಗೆ ಭೀಕರತರಮ್ ಆದುದು. ಆಗಳ್ ಅದನ್ ಕಂಡು ಉತ್ತರನ್ ಒತ್ತರಮ್ ಒತ್ತಿದಂತೆ ಬೆರ್ಚಿ ಬೆಗಡುಗೊಂಡು...)

ಉತ್ತರ: (ತನ್ನಲ್ಲಿಯೇ)

ನೋಡಲ್ ಅಳುಂಬಮೆಂದೊಡೆ ಇದನ್ ಆಂತು ಇಱಿದು ತವಿಪನ್ನರ್ ಆರ್.

(ಎಂದು ವಿರಾಟಸೂನು ನಾಣೋಡೆ ರಥದಿಂದಿಳಿದು ಓಡಿದೊಡೆ, ಎಯ್ದೆ ಪೂಣ್ದು ಬೆರ್ಚೆ ಓಡೆ, ಕಿರೀಟಿ ತನ್ನನ್ ಅಱಿಪುತ್ತೆ, ಶಮೀದ್ರುಮದಲ್ಲಿಗೆ ಆತನನ್ ನೀಡಿರದೆ ಉಯ್ದು, ಆತನಿಮ್ ಅಲ್ಲಿಯ ಕೈದುವೆಲ್ಲಮನ್ ನೀಡಿಸಿದನ್. ಅಂತು ಗಾಂಡೀವಿ ಗಾಂಡೀವನ್ ಮೊದಲಾಗೆ ದಿವ್ಯಶರಾಸನಶರಧಿ ವಿಚಿತ್ರತನುತ್ರಯಂಗಳೆಲ್ಲಮನ್ ಗೆಲ್ಲಮನ್ ತನಗೆ ಆವಗಮ್ ಕೊಳ್ವಂತೆ ಕೊಂಡು, ಪಗೆವರ ಗಂಟಲ ಬಳೆಯನ್ ಒಡೆದು ಕಳೆವುದನ್ ಅನುಕರಿಸುವಂತೆ ತೀವಿ ತೊಟ್ಟ ಮುಂಗೈಯ್ಯ ಬಳೆಗಳನ್ ಒಡೆದು ಕಳೆದು, ಪಿಣಿಲನ್ ಬಿಡೆ, ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದು.

ಅಂದು ಗಂಡುಡೆಯುಡೆ ಗಂಡು ಗೆಟ್ಟುದು. ನೆಗಳ್ತೆಯ ಗಾಂಡಿವಮನ್ ತಗುಳ್ದು ಜೇವೊಡೆಯೆ ಸಿಡಿಲ್ ಸಿಡಿಲ್ದು ಪೊಡೆವಂತೆವೊಲಾಯ್ತು ಎನೆ, ರಥಮನೇ ಱಲೊಡಮ್ ಪಡೆಮೆಚ್ಚೆಗಂಡನಾ ಗಂಡಗಾಡಿ ನೂರ್ಮಡಿ ಮಿಗಿಲಾದುದು. ಅನ್ನೆಗಮ್ ಅತ್ತ ಪರಸೈನ್ಯ ಭೈರವನ ಬರವಿಂಗೆ ಅಳ್ಕಿ ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜಿನಿಯನ್ ಕಂಡು ಸುಯೋಧನಂಗೆ ಗಾಂಗೇಯನ್ ಇಂತು ಎಂದನ್.)

ಭೀಷ್ಮ: ನನ್ನಿಗೆ ಅವಧಿಯ ಲೆಕ್ಕಮನ್ ನೆಱಪಿ ಮಾಣದೆ ಕಾದಲೆಂದು ಬಂದವನ್ ಇವನ್ ಅರ್ಜುನನ್. ತೊಡರ್ದು ನಿಲ್ಲದೆ ಗೋನಿವಹವನ್ ನೀನ್ ಒಡಗೊಂಡು ಪೋಗು. ಅಂಗರಾಜ, ಕೃಪ, ಕುಂಭಭವ, ಪ್ರಮುಖ ಪ್ರವೀರರೆಂಬ ಇವರ್ ಬೆರಸು ಈ ಎಡೆಯೊಳ್ ಕದನ ತ್ರಿಣೇತ್ರನನ್ ಆನ್ ಇನಿಸಮ್ ಆಂಪೆನ್.

(ಎಂಬುದುಮ್, ಸುಯೋಧನನ್ ಪಿರಿದುಮ್ ಆಕುಳಮ್ ಬೆರಸು ಗೋಕುಲಮನ್ ಕೊಂಡುಪೋಗೆ, ಪೋಗಲ್ ಈಯದೆ ಉತ್ತರನನ್..)

ಅರ್ಜುನ: ರಥಮನ್ ಚೋದಿಸು.

(ಎಂದು ಮುಟ್ಟೆವಂದು)

ಪಗೆ ತೀರ್ಗುಮ್. ಬಗೆ ತೀರ್ಗುಮ್. ಆ ಕುರುಕುಳ ಪ್ರಖ್ಯಾತನನ್ ಕಾದಿ ತೊಟ್ಟಗೆ ಗೋವೃಂದಮನ್ ಆನ್ ಮಗುಳ್ಚಿದಪೆನ್.

(ಎಂದು ಆರ್ದು ಎಚ್ಚು ತನ್ನ ಅಂಕದ ಅಂಬುಗಳೊಳ್ ಒಂದೊಂದಱಿಲ್ ಒಂದು ಲಕ್ಕ ಬಲಮ್ ಅಂದು ಅಳ್ಕಾಡೆ, ದುರ್ಯೋಧನನ್ ಮಿಗೆ ಸೋಲ್ತು ಓಡೆ, ವಿದ್ವಿಷ್ಟವಿದ್ರಾವಣನ್ ತುಱುವನ್ ಮಗುಳ್ಚಿದನ್. ಅದಟರ ಚೆನ್ನಪೊಂಗರ ಸಬಂಗಳ ತೊಳ್ತುಳಿಯೊಳ್ ತೊಡಂಕಿ ನಿಲ್ಲದೆ ಪೊಱಮಟ್ಟು, ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ, ಅಗ್ಗದ ನಿಡುಗೋಡು ಮೇಡುಮ್ ಅಮರುತ್ತುಮ್, ಇಱುಂಕಿದ ಕೆಚ್ಚಲ್ ಎತ್ತಮ್ ಎತ್ತಿದ ಕುಡಿವಾಲಮ್ ಅಂದು ಎಸೆಯೆ, ಕರ್ಬಸುಗಳ್ ಆಜಿಯೊಳ್ ಪರಿಗೊಂಡುವು.

ಅಂತು ತುಱುವನ್ ಮಗುಳ್ಚಿ, ಮಗುಳದೆ ತನಗೆ ಇದಿರೊಡ್ಡಿನಿಂದ ಅರಿನೃಪಬಲಮನ್ ಅರೆದು ಸದೆದು, ಪಳುವಳಿಯನ್ ತಗುಳ್ದು ಅಳುರ್ವ ಬೇಗೆವೊಲ್ ಎಚ್ಚ ಶರಾಳಿಗಳ್ ಥಳಿಲ್ ಥಳಿಲೆನೆ ಪಾಯೆ, ಪಾಯ್ವ ಬಿಸುನೆತ್ತರ ಸುಟ್ಟುರೆ ಚಾತುರಂಗಮನ್ ಕಳಕುಳಮಾಗೆ ಪೇಳಪೆಸರಿಲ್ಲ ಎನೆ, ತೇರನೆಯ್ದೆ ಪಾಯಿಸಿ, ಅಮ್ಮನ ಗಂಧವಾರಣಮ್ ವೈರಿಬಲಮೆಲ್ಲಮನ್ ತೊತ್ತಳದುಳಿದತ್ತು. ಕುರುಬಲದೊಳ್ ಕರಮ್ ನೆಗಳ್ದ ಬೀರರ, ಚೆನ್ನರ, ಸಂದ ಚೆನ್ನಪೊಂಗರ ತಲೆ ತಾಳಪಣ್ ಕೆದಱಿದಂತೆ ನಿರಂತರಮ್ ಆಜಿರಂಗದೊಳ್ ಪರೆದಿರೆ, ಲೋಹಿತಾಂಬುಧಿಯೊಳ್ ಆನೆಗಳ ಅಟ್ಟೆಗಳ್ ಆಡೆ, ನೋಡಲ್ ಅಚ್ಚರಿಯುಮ್ ಅಗುರ್ವುಮ್ ಅದ್ಭುತಮುಮ್ ಕದನತ್ರಿಣೇತ್ರನಾ ರಣಮ್ ಆಯ್ತು.

ಆಗಳ್ ಅದನ್ ಕಂಡು ಅಂಗರಾಜನ್ ರಾಜರಾಜನ ನಡಪಿದುದುಮನ್ ತನ್ನ ಬಲ್ಲಾಳ್ತನಮುಮನ್ ನೆನೆದು ತನ್ನ ತಮ್ಮನ್ ವಿಕರ್ಣನ್ ಬೆರಸು ಅರ್ಣವನಿನಾದದಿಂದ

ಆರುತ್ತುಮ್ ಬಂದು ಗುಣಾರ್ಣವನೊಳ್ ತಾಗೆ **'ಗೋಗ್ರಹಣದಲ್ಲಿಯೆ ಭಾರತಮ್ ಸಮೆದುದು ಪೋಗು'** ಎಂಬ ಮಾತನ್ ಅಂದು ಅಮರನರೋರಗರ್ ನುಡಿಯೆ, ರೌದ್ರಶರಂಗಳಿನ್ ಎಚ್ಚು ಯುದ್ಧದೊಳ್ ಸಮಸಮನಾಗಿ ಕಾದಿದೊಡೆ, ಕರ್ಣನ ವಕ್ಷಮನ್ ಎಚ್ಚು ಗರ್ವಮನ್ ಸಮೆಯಿಸಿ ನರನ್ ಒಂದೆ ವಿಕರ್ಣದಿನ್ ಅಂಕದ ವಿಕರ್ಣನನ್ ಕೊಂದನ್. ಅಂತು ಕರ್ಣನ ನೋವುಮನ್ ವಿಕರ್ಣನ ಸಾವುಮನ್ ಕಂಡು ತಕ್ಕಿನ ಕುಂಭಸಂಭವ ನದೀಜ ಕೃಪ ಪ್ರಮುಖ ಪ್ರವೀರರ್ ಎಕ್ಕೆಕ್ಕೆಯಿನ್ ಒರ್ವರೊರ್ವರೆ ಬೆಗುರ್ತು ಅಂತು ನಿಶಾತಬಾಣಜಾಲಕ್ಕೆ ಸಿಡಿಲ್ದು ಜೋಲ್ದು ಸೆರಗಮ್ ಬಗೆದು, ಒಂದು ಪೊಳ್ತುಮ್ ಕದನ ತ್ರಿಣೇತ್ರನಾ ಒಂದಿಕ್ಕನ್ ಇದಿರ್ಚಲಾಱದೆ ಮನಂಗಲಿಗಳ್ ಓಡಿದರ್.

ಮನದೊಳ್ ಕರುಣಿಸಿ ಬೀರರನ್ ಸಂಮೋಹನಾಸ್ತ್ರದಿಂದೆ ಎಚ್ಚು ಬೀರದ ಶಾಸನಮನೆ ನಿಱಿಸುವ ಬಗೆಯಿಂದೆ ಅನಿಬರ ಪಳವಿಗೆಯನ್ ಹರಿಗನ್ ಎಳೆದುಕೊಂಡನ್. ಅಂತು ವರ ಶಶಿ ವಿಶದ ಯಶಃ ಪಟಂಗಳನ್ ನನ್ನಿಪಟಂಗೊಳ್ವಂತೆ ವಿವಿಧ ಧ್ವಜಪಟಂಗಳನ್ ಕೊಂಡು ಗೆಲ್ಲಂಗೊಂಡು ತಾನುಮ್ ಉತ್ತರನುಮ್ ವಿರಾಟಪುರಕ್ಕೆ ಮಗುಳ್ದು ಬರ್ಪಾಗಳ್.



# ೫೧. ಉತ್ತರೆ ಮತ್ತು ಅಭಿಮನ್ಯು ಮದುವೆ

(೧ ನೆಯ ಪದ್ಯದಿಂದ ೯ ನೆಯ ಗದ್ಯ)

## ಪಾತ್ರಗಳು

**ವಿರಾಟರಾಯ:** ವಿರಾಟನಗರದ ರಾಜ.

**ಪುರಜನರು:** ವಿರಾಟನಗರದ ಪ್ರಜೆಗಳು.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅಭಿಮನ್ಯು:** ಅರ್ಜುನ ಮತ್ತು ಸುಭದ್ರೆಯ ಮಗ.

**ಉತ್ತರೆ:** ವಿರಾಟರಾಯ ಮತ್ತು ಸುದೇಷ್ಣೆಯ ಮಗಳು.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

# ಉತ್ತರೆ ಮತ್ತು ಅಭಿಮನ್ಯು ಮದುವೆ

**ಜನರು:** ಶ್ರೀಗೆ ನೆಗಳ್ತೆಗೆ ವೀರಶ್ರೀಗೆ ಆಗರಮಪ್ಪೆನ್ ಎಂಬ, ಕಳಕಳ ವಿಜಯೋದ್ಯೋಗದೊಳೆ ನೆಗಳ್ವೆನೆಂಬ ಉದ್ಯೋಗಿಗೆ ಮಲೆವ ಅನ್ಯನೃಪತಿ ಮಂಡಳಮ್ ಒಳವೇ.

(ಎಂದು ಜಗಜ್ಜನಮ್ ಅಳವನ್ ಅಗುಂದಲೆಯಾಗಿ ಅಡರೆ ಬಿಡದೆ ಪೊಗಳುತ್ತಿರೆ, ಕುಂದೇಂದುಯಶನ್ ರಥದಿಂದ ಇಳಿತಂದು ಅಗ್ರಜನ್ಮಪದ ಸರಸಿಜದೊಳ್ ಎಱಗಿದನ್. ಅಱಿಮಗನ ಪವನತನಯನ ನೆಱೆದ ಆಶೀರ್ವಚನಶತಮನ್ ಆಂತು, ಅನುನಯದಿಂದೆ ಎಱಗಿದ ಅಮಳರುಮನ್ ಅಳ್ಕಱಿನ್ ಒಱಲ್ದು ತೆಗೆದಪ್ಪಿ ನಲ್ವರಕೆಗಳಿಮ್ ಪರಸೆ, ಚಲಚಳದಿನ್ ಉಱಿದೆ ಪಗೆವರ ತಲೆಗಳನ್ ಅರಿದರಿದು ಬಂದು ಪಾಂಡುತನೂಜರ್ ತಲೆದೋಱಿರೆ, ಮತ್ಸ್ಯಂಗೆ ರಾಗಮ್ ಆಗಳ್ ಅಗುಂದಲೆಯುಮ್ ಪೊಂಪುಳಿಯುಮ್ ಆಯ್ತು. ಗುಡಿಯನ್ ಕಟ್ಟಿಸಿ, ಬದ್ದವಣಮನ್ ಪೊಯ್ಸಿ...

**ವಿರಾಟರಾಯ:** (ತನ್ನಲ್ಲಿಯೇ)

ಪ್ರಾಣಕ್ಕಮ್ ಅರ್ಥಕ್ಕಮ್ ಇನ್ ಎಡಱೇನ್ ಏತಱೊಳ್ ಅಪ್ಪುದು.

(ಎಂದು ಕುರುಡನ್ ಕಣ್ಬೆತ್ತವೋಲ್ ರಾಗದಿಂದೆ ಒಡೆಯನ್ ತಾನ್ ಬಗೆದು, ಉಳ್ಳಸಾರಧನಮನ್ ಮುಂದಿಟ್ಟು, ಮತ್ಸ್ಯಮಹೇಶನ್ ತತ್ ಪಾಂಡು ಪುತ್ರರ್ಕಳಾ ಮನದೊಳ್ ಅಂದು ಅತಿಪ್ರೀತಿಯನ್ ಪಡೆದನ್.)

**ಪುರಜನರು:** (ತಮ್ಮ ತಮ್ಮಲ್ಲಿಯೇ)

ಕೇಳಿರೆ... ಕಂಕಭಟ್ಟನೆ ಯುಧಿಷ್ಠಿರನ್; ಆ ವಲಲನ್ ವೃಕೋದರನ್; ಆ ಬಾಳೆಯರನ್ ದಲ್ ಆಡಿಪ ಬೃಹಂದಳೆ ಫಲ್ಗುಣನ್; ಅಂಕದ ಅಶ್ವಗೋಪಾಲಕರ್ ಎಂಬರ್ ಆ ನಕುಲನುಮ್ ಸಹದೇವನುಮ್ ಆದರ್; ಮಹೀಪಾಲರೊಳ್ ಆದ ಕಾರ್ಯಗತಿಗಳ್ ಬಗೆಯಲ್ಕೆ ಏನ್ ಬಹು ಪ್ರಕಾರಮೋ.

(ಎಂಬ ಪುರಜನ ಆಳಾಪಂಗಳ್ ನೆಗಳೆ, ವಿರಾಟನ ಮಹಾದೇವಿ ಸುದೇಷ್ಣೆ ಅಗಳ್ ಕೃಷ್ಣೆಗೆ ಎಱಗಿ ಪೊಡೆವಡೆ, ಧರ್ಮತನೂಜಂಗೆ ವಿರಾಟನ್ ಅವನತಮಣಿಮಕುಟನ್ ಇಂತೆಂದು ಬಿನ್ನಪಮ್ ಗೆಯ್ದನ್..)

**ವಿರಾಟರಾಯ:** ನೃಪ, ನೀನ್ ಉಳಿದಾವ ಮಂಡಲದೊಳಮ್ ಇರದೆ, ಇಲ್ಲಿ ದಯೆಯಿಂದಮ್ ಬಂದಿರೆ, ಎನ್ನ ಮೆಱೆವ ಆಳ್ವೆಸನ್ ದೊರೆವೆತ್ತುದು. ಎನ್ನ ತನೂಜೆಗೆ ಅಂಕದ ಉತ್ತರೆಗೆ ಅಭಿಮನ್ಯುಗೆ ಇನ್ ವಿವಾಹಮಂಗಳಮನ್ ಮಾಳ್ಪುದು ಉತ್ತರೋತ್ತರಮೆನೆ ಮಾಡು. ಯಮರಾಜ ನಂದನಾ, ನಿನ್ನ ದಯೆಯಿನ್ ಮೆಱೆವೆನ್.

**ಧರ್ಮರಾಯ:** ಅಂತೆಗೆಯ್ವೆನ್. ನಿಮ್ಮ ಎಮ್ಮ ನಣ್ಪುಗಳ್ ಈಗಳ್ ಆದುವಲ್ಲ. ಹಿರಣ್ಯಗರ್ಭ ಬ್ರಹ್ಮರಿನ್ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದುವು. ನಿನ್ನ ದೊರೆಯ ನಂಟನುಮನ್ ಎಲ್ಲಿ ಪಡೆವೆನ್.

(ಎಂದು ವಿರಾಟನನ್ ಸಂತಸಂಬಡೆ ನುಡಿದು, ಚಾಣೂರಾರಿಯನ್ ಸುಭದ್ರೆಯುಮನ್ ಅಭಿಮನ್ಯುವುಮನ್ ಒಡಗೊಂಡು ಬರ್ಪುದೆಂದು ಬಳಿಯನಟ್ಟಿ, ಬರವಱಿದು ಪಾಂಡವರ್ ಅಯ್ವರುಮ್ ವಿರಾಟ ಸಮೇತಮ್ ಇದಿರ್ವೋಗಿ ಕಂಡಾಗಳ್, ಮುರರಿಪು ಧರ್ಮನಂದನ ಪದಾಬ್ಜಯುಗಕ್ಕೆ ಮರುತ್ಸುತಾದಿಗಳ್ ಹರಿಚರಣಾಂಬುಜಕ್ಕೆ ಎಱಗೆ, ಉತ್ಸವದಿಂದೆ ಅಭಿಮನ್ಯು ತಮ್ಮುತ್ತೈವರ ಲಲಿತಾಂಘ್ರಿ ಪದ್ಮನಿವಹಕ್ಕೆ ಎಱಗುತ್ತಿರೆ, ತನ್ಮುಖಾಬ್ಜದೊಳ್ ಪರಕೆಗಳ್ ಪಂಕಜದಿನ್ ಮಕರಂದದಂತೆವೋಲ್ ಉಣ್ಮೆ ಪೊಣ್ಮಿದುವು. ಅಂತು ಮಂದರಧರನುಮ್ ತಾಮುಮ್ ಒಂದೊರ್ವರನ್ ಅಗಲ್ದಿಮ್

ಬಳಿಯಮ್ ಆದ ಸುಖದುಃಖಗಳನ್ ಅನ್ಯೋನ್ಯ ನಿವೇದನಮ್ ಗೆಯ್ದು, ಆನಂದದಿನ್ ಪೊಳಲನ್ ಪೊಕ್ಕು, ಮಜ್ಜನ ಭೋಜನಾದಿಗಳಿಂದಮ್ ಅಪಗತ ಪರಿಶ್ರಮನನ್ ಮಾಡಿ, ಮುರಾಂತಕನನ್ ಅಂತಕನಂದನನ್ ಅಭಿಮನ್ಯು ವಿವಾಹಕಾರ್ಯ ಪರ್ಯಾಲೋಚನೆಯೊಳ್ ಒಡಂಬಡಿಸಿ ಶುಭಲಗ್ನೋದಯದೊಳ್ ವಾರಿಧಿ ಘೋಷದಂತೆ ಎಸೆವ ಮಂಗಳತೂರ್ಯರವಂಗಳಿಮ್ ಬಿಯಮ್ ಮೇರುವ ಪೊನ್ ಅಣಮ್ ನೆಱೆಯದು ಎಂಬಿನಮ್ ಇಟ್ಟಳಮಾಗೆ ವಾರನಾರೀ ರಮಣೀಯ ನೃತ್ತಮ್ ಅಮರುತ್ತಿರೆ, ಸಂದ ವಿರಾಟನ್ ಅಂದು ಕೆಯ್ನೀರೆಱೆದು ಈಯೆ, ಅಭಿಮನ್ಯುಗಮ್ ಉತ್ತರೆಗಮ್ ವಿವಾಹಮನ್ ಗೆಯ್ದರ್. ಅಂತು ಆ ವೀರನನ್ ವೀರಶ್ರೀಯೊಳ್ ನೆರಪುವಂತೆ ಉತ್ತರೆಯೊಳ್ ನೆರಪಿ ಕಂಸಧ್ವಂಸಿಯನ್ ದ್ವಾರಾವತಿಗೆ ಕಳಿಪಿ...)



# ೫೨. ಕೃಷ್ಣನೊಡನೆ ಅರ್ಜುನ ಮತ್ತು ದುರ್ಯೋಧನರ ಮಾತುಕತೆ

(೧೦ ನೆಯ ಗದ್ಯದಿಂದ ೧೨ ನೆಯ ಗದ್ಯ)

**ಪಾತ್ರಗಳು**

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ, ಪಾಂಡವರ ಹಿತಚಿಂತಕ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

# ಕೃಷ್ಣನೊಡನೆ ಅರ್ಜುನ ಮತ್ತು ದುರ್ಯೋಧನರ ಮಾತುಕತೆ

ಅಂತು ತಮ್ಮ ಪೂಣ್ದ ವರ್ಷಾವಧಿ ನೆರೆದೊಡಮ್, ಅರಾತಿಗಳ್ಗೆ ಅಂತ್ಯ ಕಾಲಮ್ ನೆಱೆಯದುದರ್ಕೆ ಉಮ್ಮಳಿಸಿ...

**ಪಾಂಡವರು:** (ತಮ್ಮಲ್ಲಿಯೇ)

ನಮಗೆ ಕೆಮ್ಮಗೆ ಇರಲಾಗದು. ದುರ್ಯೋಧನನ್ ಅಪ್ಪೊಡೆ ಶ್ವೇತಕೃಷ್ಣಕಾರಕನ್. ಕೃಷ್ಣನನ್ ತನಗೆ ಮಾಡದನ್ನೆಗಮ್ ಮುನ್ನಮೆ ಪನ್ನಗಶಯನನ್ ನಮಗೆ ಮಾಡುವುದು ಉತ್ತಮಪಕ್ಷಮ್.

(ಎಂಬ ಈ ಪ್ರಧಾನ ಕಾರ್ಯಮನ್ ತಮ್ಮೊಳ್ ಆಲೋಚಿಸಿ ವಿಕ್ರಮಾರ್ಜುನನ್ನು ಕುರಿತು...)

**ಧರ್ಮರಾಯ:** ನೀನೆ ಪೋಗಲ್ವೇಳ್ಕುಮ್.

(ಎಂಬುದುಮ್, ಅಪ್ರತಿರಥನ್ ರಥಮನ್ ಏಱಿ, ಮನಃಪವನ ವೇಗದಿನ್ ದ್ವಾರಾವತಿಯನ್ ಎಯ್ದಿ, ರಾಜಮಂದಿರಮನ್ ಪೊಕ್ಕು, ದುಗ್ಧಾಬ್ಧಿಧವಳ ಶಯ್ಯಾತಳದೊಳ್ ಮರೆದೊಱಗಿದ ಮಧುಮಥನನ್ ಎತ್ತಲ್ ಅಣ್ಮದೆ, ಕಾಲ ದೆಸೆಯೊಳ್ ಉಸಿರದೆ ಕುಳ್ಳಿರೆ, ದುರ್ಯೋಧನನುಮ್ ಆಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ, ಕಿಱಿದಾನುಮ್ ಬೇಗದಿನ್ ಪವಡಿಸಿದ ಅನಂತನ್ ಒಸೆದು ಉಪ್ಪವಡಿಸಿ, ತನ್ನ ಎರಡುಮ್ ಅಡಿಯನ್ ಒತ್ತುತ್ತಿರ್ದ ಆಹವವಿಜಯಿಯಪ್ಪ ವಿಜಯನನೆ ಮುನ್ ಕಂಡು, ಬಳಿಕೆ ನೃಪನನ್ ಕಂಡನ್. ಕಂಡು ತನಗೆ ಪೊಡೆವಟ್ಟ ಇರ್ವರುಮನ್ ಪರಸಿ...)

| | |
|---|---|
| **ಕೃಷ್ಣ:** | ನೀವ್ ಇರ್ವರುಮ್ ಬಂದ ಅಂದಮುಮನ್ ಮನೆವಾಳ್ತೆಯನ್ ಪೇಳಿಮ್. |
| | (ಎಂದೊಡೆ) |
| **ಅರ್ಜುನ ಮತ್ತು ದುರ್ಯೋಧನ:** | ಎಮ್ಮ ಎಮ್ಮನ್ ಕೆಯ್ಕೊಂಡು ಗೆಲಿಸಲ್ವೇಳ್ಕುಮ್ ಎಂದು ಬಂದೆವು. |
| **ಕೃಷ್ಣ:** | ಇರ್ವರುಮ್ ಎನಗೆ ಮನ್ನಣೆಗೆ ಓರನ್ನರೆ. ವಿಜಯನನೆ ಮುನ್ನೆ ಕಂಡುದಱಿಂದೆ ಆನ್ ಎನ್ನನ್ ಕೊಟ್ಟೆನ್. ಪನ್ನಗಕೇತನ, ನಿನಗಮ್ ಚತುರ್ವಲಂಗಳನ್ ಇತ್ತೆನ್. |
| | (ಎಂದು ತನ್ನೊಳ್ ಸಮಾನಬಲನಪ್ಪ ತನ್ನ ತಮ್ಮನ್ ಕೃತವರ್ಮನುಮನ್, ತನ್ನ ಒಡನಾಡಿಗಳಪ್ಪ ತೊಂಬತ್ತಾಱು ಸಾಸಿರ ಗೋಪ ಕುಮಾರರೊಡನೆ ಕೂಡಿ ಕಳಿಪಿ, ವಿಕ್ರಮಾರ್ಜುನನುಮ್ ತಾನುಮ್ ವಿರಾಟಪುರಕ್ಕೆ ವಂದು...) |



# ೫೩. ಕೃಷ್ಣನೊಡನೆ ಪಾಂಡವರ ಸಮಾಲೋಚನೆ

(೧೨ ನೆಯ ಗದ್ಯದಿಂದ ೨೬ ನೆಯ ಗದ್ಯ)

## ಪಾತ್ರಗಳು

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

## ಕೃಷ್ಣನೊಡನೆ ಪಾಂಡವರ ಸಮಾಲೋಚನೆ

ವಿಕ್ರಮಾರ್ಜುನನುಮ್ ತಾನುಮ್ ವಿರಾಟಪುರಕ್ಕೆ ವಂದು ಮಜ್ಜನ ಭೋಜನಾದಿಗಳೊಳ್ ವಿಗತ ಪರಿಶ್ರಮರಾಗಿ, ಮಱುದೆವಸಮ್ ಅಱುವರುಮ್ ಆಱುಮ್ ಗುಣಂಗಳೆ ಮೂರ್ತಿಮಂತಗಳ್ ಆದಂತೆ ಮಂತ್ರಶಾಲೆಯನ್ ಪೊಕ್ಕಿರ್ದಾಗಳ್, ಇಂದ್ರಿಯಂಗಳ್ ಪ್ರಿಯವಿಷಯಕಾಂಕ್ಷೆಯಿಂದೆ ಮನಮನ್ ಎಯ್ದೆ ಎಂತು ಆಶ್ರಯಿಸುಗುಮ್ ಅಂತು ಅಯನಯಪರರ್ ಅಯ್ವರುಮ್ ವಿಷಯಕಾಂಕ್ಷೆಯಿನ್ ಮುರರಿಪುವನ್ ಆಶ್ರಯಿಸಿರ್ದರ್. ಧರ್ಮತನಯನ್ ಲೋಕಕ್ಕೆ ಇದು ಅರ್ಥಶಾಸ್ತ್ರದ ಟೀಕು ಎನಿಸಿದ ತನ್ನ ನುಡಿ ಮನಂಗೊಳಿಸೆ ದಳತ್ಕೋಕನದ ಜಠರನನ್ ನಿರ್ವ್ಯಾಕುಳನ್ ಇಂತೆಂದು ನುಡಿದನ್.

**ಧರ್ಮರಾಯ:** ರಸೆಯೊಳ್ ಅಳ್ದುದನ್ ಎಳೆಯನ್ ಭುಜಬಳದಿನ್ ಮುನ್ನೆ ಎತ್ತಿದಂತೆ, ವಿಷಯಾಂಬುಧಿಯೊಳ್ ಮುಳುಗಿರ್ದ ಎಮ್ಮಯ್ವರುಮನ್ ಬಲಿಹರ ಪಿಡಿದು ಎತ್ತಲೆಂದು ಬರವನ್ ಬಂದಯ್. ಜಗತೀತ್ರಯಮುಮನ್ ಬಸಿಱೊಳ್ ಒಸೆದಿಟ್ಟು ಓರಂತೆ ಕಾದ ಪೆಂಪಿನ ನಿಮ್ಮ ಈ ಬಸಿಱಿನ್ ಪೊಕ್ಕ ಎಮ್ಮಯ್ವರನ್ ಅಸುರಕುಳಾಂತಕ ಕಡಂಗಿ ಕಾವುದು ಪಿರಿದೇ.

ಎನ್ನ ನನ್ನಿಯ ಪೆಂಪು ನಿನ್ನ ಮಹತ್ವದಿಂದಮೆ ಸಂದುದು. ಅದು ಎಂತು ಎನ್ನ. ಪನ್ನಗಕೇತಂಗೆ ಧರಾವಿಭಾಗಮನ್ ಇತ್ತು, ಸಂಪನ್ನಯೋಗ ನಿಯೋಗದಿಂದಮ್ ಅರಣ್ಯದೊಳ್ ನೆಲಸಿರ್ದು, ಉಣಲ್ ಬನ್ನಮಿಲ್ಲದೆ ಬಾಳ್ವುದು ಪುಳುವಾನಸಂಗೆ ಅಕ್ಕುಮೇ ಏನ್. ಅದಲ್ಲದೆಯುಮ್ ಈ ಸೂಳ್ ಒಂದುಮ್ ಎಡಂಬಡಿಲ್ಲದೆ ಗೋಗ್ರಹಣಮನೆ ನೆವಮ್ ಮಾಡಿ ಸುಯೋಧನನೆಂಬ ಪಾಪಕರ್ಮನ ಮಾಡಿದ ಅನುವರಮ್,

ನಿಮ್ಮ ಅನುಬಲದೊಳಮ್ ಅರಿಕೇಸರಿಯ ಭುಜಬಲದೊಳಮ್ ಎಮಗೆ ಇಂಬುವಂದುದು. ಕಾದದೆ ಪನ್ನಗಧ್ವಜನ್ ಇಳಾತಳಮನ್ ಕುಡನ್. ಆನುಮ್ ಇರ್ಪುದಮ್ ಸೋದರರ್ ಎಂದು ನಾಣ್ಚಿ ಸೆಡೆದು ಇರ್ದಪೆನ್. ಇರ್ದೊಡೆ ಅವಸ್ತುಭೂತನೆಂದು ಅಲ್ಪನೆಂದು ಆದಮೆ ಭೂತಳಮ್ ಪಳಿಯೆ, ತೇಜಮೆ ಕೆಟ್ಟಪುದು. ಪದ್ಮೋದರ, ಇಂತು ಇದರ್ಕೆ ಕಜ್ಜಮನ್ ದಿವ್ಯಚಿತ್ತದಿನ್ ಬಗೆದು ನೀನೆ ಪೇಳ್.

(ಎಂಬುದುಮ್ ಅಂಬುಜೋದರನ್...)

**ಕೃಷ್ಣ:** ನಯದ ವಿನಯದ ಮಾತು ನೀನ್ ಎಂದಂತು, ತೊಱೆಗೆ ನೀರ್ ಅಡಕಲುಮ್, ಆದಿತ್ಯಂಗೆ ಸೊಡರ್ ಇಡಲುಮ್, ಇಂದ್ರಂಗೆ ದೇವಲೋಕಮನ್ ಬಣ್ಣಿಸುವಂತೆಯುಮ್ ನಿನಗೆ ಏನೆಂದು ಕಜ್ಜಮ್ ಪೇಳ್ವುದು. ಆದೊಡಮ್, ಬೆಸಮ್ ಆರ್ ಕೊಂಡವೊಲ್ ಅಕ್ಕುಮ್. ಒಂದೆ ನಯಮನ್ ಕೇಳ್, ನಿನ್ನ ಮುಂದೆ ಈಗಳ್ ಆನ್ ಉಸಿರ್ದಪ್ಪೆನ್. ಸಲೆ ಮೆಲ್ಪು ಬಲ್ಪನ್ ಅಳಿಗುಮ್. ಕೈವಾರಮುಮ್ ಕೂಡೆ ಕೂರಿಸುಗುಮ್ ನಿಕ್ಕುವಮಪ್ಪ ಕಾರಣದಿನ್, ಇಂತು ಈ ಸಾಮಮನ್ ಮುನ್ ಪ್ರಯೋಗಿಸದೆ ಏಗೆಟ್ಟಪುದು ಎಂದು ದಂಡಮನೆ ಮುನ್ ಮುಂತಿಕ್ಕುವನ್ ಮಂತ್ರಿಯೇ. ಮುನ್ ವಾಮನರೂಪದಿಂದಮೆ ಬಲಿಯನ್ ಭೂರಿಭೂತಲಮನ್ ಬೇಡಿದೆನ್ ವಲಮ್ ಎನಗೆ ಕುಂದು ಆಯ್ತೆ. ಇಳೆಯನ್ ಕೊಂಡೆನ್. ದೈತ್ಯನನ್ ಇನ್ನುಮ್ ರಸಾತಲದೊಳ್ ಕಟ್ಟಿಟ್ಟೆನ್. ಅಂತೆ ನೀನುಮ್ ಇಳೆಯನ್ ಮುನ್ ಬೇಡಿ ಅಟ್ಟಟ್ಟೆ, ಆತನ್ ಮಾರ್ಮಲೆದು ಕುಡದಿರ್ದೊಡೆ, ಅಂದು ಲೋಕಮ್ ಗುಣಂಗೊಳ್ವಿನಮ್ ನೀನ್ ಇಱಿಯ.

(ಎಂದು ನುಡಿದ ಮಂದರಧರನ ನುಡಿಗೆ ಕಿನಿಸಿ ಕಿಂಕಿಱಿವೋಗಿ ಭೀಮಸೇನನ್ ಇಂತು ಎಂದನ್.)

**ಭೀಮ:** ಅಜಾತ, ನಿಜಮತಮನ್ ಮೀಱಲ್ಕೆ ಎನಗೆ ದೊರೆಯಲ್ಲಮ್. ಅಲ್ಲದಿರ್ದೊಡಮ್ ಅಹಿಧ್ವಜನ್ ಓವದೆ ಮುನ್ನೆ ನೆಗಳ್ದ ದುಶ್ಚರಿತಂಗಳ್ ಎನ್ನಿಂದೆ ಅಜನಿಸಿ ನುಡಿಯಿಸಿದುವು. ಆ

ಲಾಕ್ಷಾಗೃಹ ದಾಹಮೊಂದೆ; ವಿಷಸಂಯುಕ್ತಾನ್ನಮ್ ಅಂತು ಒಂದೆ; ಪಾಂಚಾಳೀ ನಿಗ್ರಹಮ್ ಒಂದೆ; ಟಕ್ಕುವಗೆಯಿನ್ ಗೆಲ್ದಿರ್ದ ಜೂದು ಒಂದೆ; ಶಾರ್ದೂಲಾಭೀಲ ವನಂಗಳೊಳ್ ತಿರಿಸಿದ ಈ ಉರ್ಕು ಒಂದೆ; ಲೆಕ್ಕಂಗೊಳಲ್ ಕಾಲಮ್ ಸಾಲದೆ. ಕಂಡುಮ್ ಉಂಡುಮ್ ಎಮಗೆ ಇನ್ ಆತಂಗಳೊಳ್ ಪಾಳಿಯೇ. ಜಟಮಟಿಸಿಕೊಂಡು ನಿಮ್ಮ ಕೌರವರ್ಕಳೊಳ್ ಈ ಘಟಿಯಿಸುವ ಈ ಸಂಧಿ, ಘಟಿತ ಜರಾಸಂಧ ಉರಸ್ತಟ ಸಂಧಿವೋಲ್ ಒಂದೆ ಪೊಳ್ತಱೊಳ್ ಎನ್ನಿನ್ ವಿಘಟಿಸದೇ. **"ಒರ್ವನ ಒಳ್ಗರುಳನ್ ಉರ್ವಿಗೆ ತೋಡುವೆನ್. ನೆತ್ತರನ್ ಎಯ್ದೆ ಪೀರ್ದು ವಿರ್ದಾಡುವೆನ್. ಒರ್ವನ ಊರುಗಳನ್ ಎನ್ನ ಗದಾಶನಿ ಘಾತದಿಂದೆ ನುರ್ಗಾಡುವೆನ್"** ಎಂದು ಲೋಕಮ್ ಅಱಿಯುತ್ತಿರೆ ಪೂಣ್ದ ಎನಗೆ, ಅಂತೆ ಸಂತಸಮ್ ಮಾಡದೆ ಸಂಧಿ ಮಾಡಿ ಕುರುಪುತ್ರರೊಳ್ ಎನ್ನನೇ ಜೋಡುಮಾಳ್ಪಿರೇ.

(ಎಂದು ಮಸಗಿದ ಮದಾಂಧಗಂಧ ಸಿಂಧುರದಂತೆ ದೆಸೆಗೆ ಮಸಗಿದ ವಾಯುಪುತ್ರನನ್ ಧರ್ಮಪುತ್ರನ್ ಸಂತೈಸಿ)

**ಧರ್ಮರಾಯ: ಮತ್ತು ಕೃಷ್ಣ** ಬಕ... ಕಿಮ್ಮೀರ... ಜಟಾಸುರ... ಉದ್ಧತ ಜರಾಸಂಧರ್ಕಳನ್... ಸಂದ ನೂರ್ವರುಮನ್ ಕೀಚಕರನ್ ಪಡಲ್ವಡಿಸಿದ ತ್ವಚ್ಚಂಡದೋರ್ದಡಮ್, ಉಗ್ರ ಕುರುಕ್ಷ್ಮಾಪ ಮಹೀರುಹ ಪ್ರಕರಮನ್ ಮತ್ತೇಭವಿಕ್ರೀಡಿತಕ್ಕೆ ಕರಮ್ ಪೋಲ್ವೆಗೆ ವಂದು ಭೀಮರಣದೊಳ್ ನುರ್ಗಾಡದೆ ಪೋಕುಮೇ ಏನ್.

(ಎಂದು ನಾರಾಯಣನುಮ್ ಧರ್ಮಪುತ್ರನುಮ್ ವೃಕೋದರನಮನಮನ್ ಆರೆ ನುಡಿದು, ಮತ್ತಮ್ ನಾರಾಯಣಂಗೆ ಯುಧಿಷ್ಠಿರನ್ ನಿಶ್ಚಿತ ಕಾರ್ಯಮನ್ ಅನುಷ್ಠಿಸಲೆಂದು ಇಂತು ಎಂದನ್.)

**ಧರ್ಮರಾಯ:** ಅವನೀನಾಥನ ಗೆಯ್ದ ಪೊಲ್ಲಮೆಗಮ್, ಎನ್ನ ಒಳ್ಪಿಂಗಮ್ ನೀನ್ ಸಕ್ಕಿಯಾಗಿ ಅವನ್ ಈವಂತುಟನ್ ಈಯದಂತುಟನ್ ಅದನ್ ನೀನ್ ಬಲ್ಲಂತೆ ಕಾಲ್ಗುತ್ತಿ ನೋಡು. ಅವನೀ ಭಾಗದೊಳ್ ಎನ್ನ ಭಾಗಮನ್ ಅದನ್ ತಾನ್ ಈಯದಿರ್ದಾಗಳ್, ಎನ್ನ ಅವನೀ ರಕ್ಷಣ ದಕ್ಷ ದಕ್ಷಿಣ ಭುಜಸ್ತಂಭಮ್ ಕೊಲಲ್ ಸಾಲದೇ

(ಎಂದು ಧರ್ಮರಾಜನ್ ರಾಜರಾಜನಲ್ಲಿಗೆ ನಿರ್ವ್ಯಾಜದಿನ್ ದಿತಿಜಕುಳ ವಿಜಯಿಯಪ್ಪ ಅಜಿತನನೆ ದೂತಕಾರ್ಯಕ್ಕೆ ಅಟ್ಟಿದೊಡೆ, ಅಸುರ ವಿಜಯಿಯುಮ್ ಕತಿಪಯ ಪ್ರಯಾಣಂಗಳಿನ್ ಮದಗಜೇಂದ್ರಪುರಮನ್ ಎಯ್ದಿ...)



# ೫೪. ಹಸ್ತಿನಾವತಿಗೆ ಕೃಷ್ಣನ ಆಗಮನ

(೨೬ ನೆಯ ಗದ್ಯದಿಂದ ೨೮ ನೆಯ ಪದ್ಯ)

## ಪಾತ್ರಗಳು

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ವಿದುರ: ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ.

ಕುಂತಿ: ಪಾಂಡವರ ತಾಯಿ.

ಮಹಾಪ್ರತಿಹಾರ: ಅರಮನೆಯ ದ್ವಾರಪಾಲಕ

# ಹಸ್ತಿನಾವತಿಗೆ ಕೃಷ್ಣನ ಆಗಮನ

ಅಸುರ ವಿಜಯಿಯುಮ್ ಕತಿಪಯ ಪ್ರಯಾಣಂಗಳಿನ್ ಮದಗಜೇಂದ್ರ ಪುರಮನ್ ಎಯ್ದಿ, ತುರಂಗಮ ಹೇಷಿತ ಘೋಷದೊಳ್ ಪೊದಳ್ದು, ಮದಗಜ ಬೃಂಹಿತ ಧ್ವನಿ ಒದವೆ, ಗಭೀರ ಧೀರ ಮುರಜ ಧ್ವನಿ, ಯೌವನ ಮತ್ತ ಕಾಮಿನೀ ಮೃದು ಪದ ನೂಪುರ ಕ್ವಣಿತದೊಳ್ ಪೆಣೆದು ಒಂದಿರೆ, ಪೊಳಲ್ ಸುರಾದ್ರಿ ಮಥಿತ ಅಂಬುಧಿ ಜಾತ ನಿನಾದ ಶಂಕೆಯನ್ ಚಕ್ರಿಗೆ ಉಂಟುಮಾಡಿದುದು.

ಅಂತು ನಾಗಪುರಮನ್ ಇಳಿಸುವ ನಾಗಪುರಮನ್ ಆ ನಾಗಶಯನನ್ ಪೊಕ್ಕು, ವಿದುರನ್ ಪಾಂಡವ ಪಕ್ಷಪಾತಿಯಪ್ಪುದಱಿಂದ ಆತನ ಮನೆಗೆ ವರೆ, ತನಗೆ ಇದಿರ್ವಂದ ಕೊಂತಿಗೆ ಅಸುರಾಂತಕನ್ ಎಱಗಿ, ತನಗೆ ಎಱಗಿದ ವಿದುರನನ್ ಪರಸಿ, ರಥದಿಂದಮ್ ಇಳಿದು, ಮಣಿಮಯ ಪೀಠದೊಳ್ ಕುಳ್ಳಿರ್ದು, ಪಾಂಡುತನೂಜರ ಕುಶಲವಾರ್ತೆಯನ್ ಅಱಿಪೆ, ತದನಂತರಮ್ ವಿದುರನ್ ಅಜರನನ್ ಏಗೆಯ್ವ ತೆಱನುಮನ್ ಅಱಿಯದೆ, ತೀವಿದ ಮಜ್ಜನದಿನ್, ಸದ್ಭಾವದಿನ್ ಒಸೆದು ಎತ್ತಿದ ಒಂದು ಬೋನದೊಳಮ್, ನಾನಾ ವಿಧದ ಪದೆಪಿನೊಳ್ ಹರಿಗೆ ಪಥಪರಿಶ್ರಮಮೆಲ್ಲಮ್ ಆವಗಮ್ ಆಱಿದುದು.



# ೫೫. ಕೃಷ್ಣ ಸಂಧಾನ

(೨೮ ನೆಯ ಗದ್ಯದಿಂದ ೬೦ ನೆಯ ಗದ್ಯ)

## ಪಾತ್ರಗಳು

ವಿದುರ: ವ್ಯಾಸ ಮತ್ತು ಅಂಬಿಕೆಯ ದಾಸಿಯ ಮಗ.

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ದುರ್ಯೋಧನ: ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

# ಕೃಷ್ಣ ಸಂಧಾನ

ಅಂತು ವಿದುರನ್ ಅಜರನನ್ ಉಚಿತ ಪ್ರತಿಪತ್ತಿಗಳಿಮ್ ಸಂತಸಮ್ ಪಡಿಸಿ, ಬಂದ ಬರವನ್ ಆಗಳೆ ಸುಯೋಧನಂಗೆ ಅಱಿಪುವುದುಮ್, ರಾಜರಾಜನು ಉಱದೆ ಕಿಱುನಗೆ ನಕ್ಕು...

**ದುರ್ಯೋಧನ:** ನಾಳಿನ ಓಲಗದೊಳ್ ತಂದು ಕಾಣಿಸು.

(ಎಂಬುದುಮ್, ಮಱುದಿವಸಮ್ ನೇಸಱು ಮೂಡಿದಾಗಳ್ ಆದಿತ್ಯನಂತೆ ಅನೇಕ ಮಣಿಮಯೂಖ ವಿಜೃಂಭಮಾಣ ಆಖಂಡಳ ವಿಳಂಬಿತ ಆಭೀಳ ಕೋದಂಡ ವಿಳಾಸ ವಿಭ್ರಮ ಸಿಂಹಾಸನಾ ಆಸೀನನುಮ್, ಪ್ರಮದಾ ಹಸ್ತ ವಿನ್ಯಸ್ತ ವಾಮಕ್ರಮ ಕಮಳನುಮ್, ಅನವರತ ಸ್ಫುರಿತ ತಾರಕಾಕಾರ ಮುಕ್ತಾಭರಣ ಕಿರಣ ನಿಕರ ವಿಳಸಿತ ವಿಶಾಲೋರಸ್ಥಳನುಮ್, ಅನಂತ ಸಾಮಂತ ಮಕುಟ ಮಾಣಿಕ್ಯ ಮಯೂಖ ಮಂಜರೀಜಾಳ ಪಲ್ಲವಿತ ಆಸ್ಥಾನಮಂಟಪನುಮಾಗಿ ಸಭಾಮಂಟಪದೊಳ್ ಒಡ್ಡೋಲಗಮ್ ಕೊಟ್ಟೊಡೆ, ಎಡೆವಱಿಯದೆ ಅವರವರ ಪಡೆದ ಪ್ರತಿಪತ್ತಿಗಳನ್ ಅಱಿದು ಇಕ್ಕಿದ ಲೋಹಾಸನಂಗಳೊಳಮ್, ಮಣಿಖಚಿತ ಕನಕಪೀಠಂ ಗಳೊಳಮ್, ಕಟ್ಟಿದ ಚೀನದ ಬೊಂದರಿಗೆಯೊಳಮ್ ಭೀಷ್ಮ ದ್ರೋಣ ಅಶ್ವತ್ಥಾಮ ಕೃಪ ಕೃತವರ್ಮ ಶಲ್ಯ ಶಕುನಿ ಬಾಹ್ಲೀಕ ಸೋಮದತ್ತ ಭಗದತ್ತ ಭೂರಿಶ್ರವಃ ಪ್ರಭೃತಿಗಳನ್ ಇರಿಸಿ, ಮತ್ತಮ್ ಅನೇಕ ದೇಶಾಧೀಶ್ವರರ್ ಎಲ್ಲರುಮನ್ ಎಡೆಯಱಿದು ಕುಳ್ಳಿರಿಸಿ, ಪೆಂಡವಾಸದ ಒಳ್ವೆಂಡಿರನ್ ಎರಡು ಓಳಿಯೊಳಮ್ ಇರಿಸಿ, ನೂರ್ವರ್ ತಮ್ಮಂದಿರುಮನ್ ಪಿಂತಿರಿಸಿ,

ಲಕ್ಕಣನ್ ಮೊದಲಾಗೆ ನೂರ್ವರ್ ಮಕ್ಕಳುಮನ್ ಮುಂತಿರಿಸಿ, ಯುವರಾಜನಪ್ಪ ಅಣುಗ ದುಶ್ಶಾಸನನುಮ್ ಅನಂಗರಾಜನಪ್ಪ ಅಣುಗಾಳ್ ಕರ್ಣನುಮ್ ಎರಡುಮ್ ಕೆಲದೊಳಮ್ ತೊಡೆ ಸೋಂಕೆ ಕುಳ್ಳಿರಿಸಿ, ನನೆಯಂಬನ್ ಮಸೆದನ್ನರಪ್ಪ ಪಲರ್ ಒಳ್ವೆಂಡರ್ ಮನಂಗೊಂಡು ಒಱಲ್ವಿನಮ್ ಪಾಡೆ, ಜೇನ ಮಳೆ ಕೊಂಡಂತಪ್ಪ ಗೇಯಮ್ ಎತ್ತಮ್ ಕೊಳೆ, ಮನಕ್ಕೆ ನೆಲಕ್ಕೆ ಇಟ್ಟಳಮಾಗೆ, ಸಂದ ರಥಿಕರ್ ಕಣ್ಗೊಳ್ವಿನಮ್, ತತ್ ಸುಯೋಧನನ ಒಡ್ಡೋಲಗಮ್ ಇಂದ್ರನ ಓಲಗಮುಮನ್ [illegible] ಕೀಳ್ಮಾಡಿ ಕಣ್ಗೊಪ್ಪುಗುಮ್. ಅಂತು ಪಿರಿದು ಓಲಗಮ್ ಕೊಟ್ಟಿರ್ಪನ್ನೆಗಮ್ ಮುನ್ನಮೆ ಮೂಱನೆಯ ಬಾಗಿಲೊಳ್ ಬಂದಿರ್ದ ಅನಂತನ ಬರವನ್ ಪಡಿಯಱನ್ ಬಿನ್ನಪಮ್ ಗೆಯ್ಯೆ, ಕುರುರಾಜನ್ ಸಿಂಧುತನೂಜನ ಮೊಗಮನ್ ನೋಡಿ...)

**ದುರ್ಯೋಧನ:** ಲೋಕಗುರು, ಶಂಖಚಕ್ರ ಗದಾಕರನ್, ಅತಿಶಯ ಚತುರ್ಭುಜನ್ ಜನಜನಿತ ವ್ಯಾಕುಳದೆ ಬಂದನ್ ಎಂದೊಡೆ, ಇನ್ ಲೋಕದೊಳ್ ಎನ್ನ ದೊರೆಗೆ ಪಿರಿಯರುಮ್ ಒಳರೇ.

(ಎಂದು ತನ್ನ ಬೆಸನನೆ ಪಾರ್ದು, ಲಲಾಟ ತಟ ಘಟಿತ ಮುಕುಳಿತ ಕರಕಮಳನ್ ಆಗಿರ್ದ ಮಹಾಪ್ರತಿಹಾರನ ಮೊಗಮನ್ ನೋಡಿ...)

**ದುರ್ಯೋಧನ:** ಬರವೇಳ್.

(ಎಂಬುದುಮ್, ಅಂಜನಾಚಲದವೊಲ್ ಕಣ್ಗೊಪ್ಪಿ ಬರ್ಪ ಅಂಬುಜೋದರನನ್ ಮೆಲ್ಲನೆ ನೋಡಿ, ಮೈಯಲಸಿದಂತೆ ಕೇಸರಿ ಪೀಠಾಗ್ರದಿನ್ ಎಂತಾನುಮ್ ಎಳ್ದು ಅಪ್ಪಿಕೊಂಡು ಪೊಡೆವಟ್ಟು, ಉಚ್ಚಾಸೀನನಾಗಿ ಇರವೇಳ್ದು, ಅರ್ಘ್ಯಮನ್ ಇತ್ತು, ದುರ್ಯೋಧನನ್ ಅನಂತರಮೆ ತಾನ್ ಕುಳ್ಳಿರ್ದ ಅಂತು ಮಧುಕೈಟಭಾರಾತಿಯ ಮೊಗಮನ್ ನೋಡಿ...)

**ದುರ್ಯೋಧನ:** ಕಂಸಾರಿ, ನೀನ್ ಬರೆ ಸಂಸಾರದೊಳ್ ಇನ್ ಎನ್ನವೊಲ್ ಸೈಪನ್ ಪಡೆದರ್ ಒಳರೇ. ಪೆಱತೇನ್ ಆನ್ ಯುಷ್ಮತ್ವದ

ಪಾಂಸುಗಳಿಂದೆ ಪವಿತ್ರಗಾತ್ರನೆನ್ ಆದೆನ್. ಬಂದ ಬರವು ಆವುದು. ಇದು ಬಿಸವಂದಮ್. ಬೆಸನಾವುದು. ಆವ ಬೆಸನನ್ ಬೆಸಸಲ್ ಬಂದಿರ್. ಈಗಳ್ ಎನಗಮ್ ಬರವಿನೊಳ್ ಅಗುಂದಲೆಯಾಯ್ತು.

(ಎಂಬುದುಮ್ ಆ ಸಭೆಯೊಳ್ ಹರಿ ಕರವಿನ್ಯಾಸಂಗಳ್ ನುಡಿಯನ್ ಅಡಕುವಂತಿರೆ, ದಂತಪ್ರಭೆಗಳ್ ಪಾಸುಮ್ ಪೊಕ್ಕುಮ್ ಪರೆದು ಸಭಾಸದನಮ್ ತೊಳಗಿ ಬೆಳಗೆ ನುಡಿದನ್.)

**ಕೃಷ್ಣ:** ಅಯ ನಯ ಪರಾಕ್ರಮ ಉಪಾಶ್ರಯಂಗಳಮ್ ಶ್ರೀಗೆ ಅಡರ್ಪು ಮಾಡಿದ ನಿನ್ನ ಇಂದ್ರಿಯ ಜಯಮೆ ಲೋಕತ್ರಯದಿನ್ ಕೂಡೆ ಇಂತು ಪೊಗಳಿಸಿದುದು. ಇಂತು ಪಿರಿಯರುಮ್ ಒಳರೇ. ಉನ್ನತನೆ ಆಗಿಯುಮ್, ನುಡಿ ನನ್ನಿಯನ್ ಅಳವು ಅಣ್ಮನ್ ಅಱಿವು ವಿನಯಮನ್, ಆದಮ್ ಮನ್ನಣೆ ಗುರುಜನಮನ್ ನೆಱಿ ಮನ್ನಿಸಿದುದು. ಪಿರಿಯ ಸಿರಿಯೊಳ್ ಏನ್ ಸುಜನತೆಯೋ.

ಕುವಳಯ ಬಾಂಧವನ್ ಕುವಳಯಮನ್ ಬೆಳಗಿ ಕುವಳಯಮ್ ಪೊಱಗು ಎನೆ ನೃಪತೀ, ಪಾಂಡವರೆ ಪೊಱಗಾಗೆ ನಿನಗೆ ಈ ಕುವಳಯಪತಿ ಎಂಬ ಪೆಂಪು ಒಡಂಬಡೆ. ಮನಕತದಿಂದೆ ಒಂದೊರ್ವರನ್ ಇನಿಸನ್ ಅಗಲ್ದು ಇರ್ದಿರ್. ಇನಿಸೆ, ನಿಮಗಮ್ ತಮಗಮ್ ಮುನಿಸುಂಟೆ. ಕುರುರಾಜಾ, "ಕಾಯ್ದ ಬೆನ್ನೀರ್ ಮನೆ ಸುಡದು" ಎಂಬ ಒಂದು ನುಡಿಯವೋಲ್. ಕುರುಕುಳಾಂಬರಭಾನೂ, ಪಾಂಡವರನ್ ಗೆಡೆಗೊಳೆ ನಿನಗೆ ಪೊಂಗುವ ಮಲೆಪರ ಮಲೆಗಳ ಡಂಗಂಗಳ್ ಮಲೆವ ಮಂಡಲಂಗಳ್ ಪ್ರತ್ಯಂತಂಗಳ್ ಎನಲ್ ಒಳವೇ. ಪಟ್ಟದ ಮೊದಲಿಗರ್ ಆಜಿಗೆ ಜೆಟ್ಟಿಗರ್.

ಅವರ್ ಎಂದುಮ್ ಆಳ್ವ ಮುನ್ನಿನ ನೆಲನನ್ ಬಳಿಯಟ್ಟು. ನಿನಗೆ ಒಡವುಟ್ಟಿದರ್ ಆ ದೊರೆಯರಾಗೆ ತೀರದುದು ಉಂಟೇ. **"ಎಮಗೆ ಮುನ್ನಿನ ನೆಲನನ್ ಕುಡುಗೆ"** ಎಂದು ಎನ್ನರ್. **'ದಾಯಿಗರೆಮ್'** ಎನ್ನರ್. **'ಅಂತಲ್ತು ಇಂತಲ್ತು ಎನ್ನರ್'.**

"ಕರುಣಿಸಿ ದಯೆಯಿಂದೆ ಇನ್ ಇತ್ತುದೆ ಸಾಲ್ಗುಮ್ ಎಂಬರ್" ಎಂಬುದನ್ ಎಂಬರ್. ಕರಿಕಳಭ ಪ್ರಚಂಡ ಮೃಗರಾಜ ಕಿಶೋರ ಕಠೋರ ಘೋರ ಹೂಂಕರಣ ಭಯಂಕರ ಆಟವಿಯೊಳ್ ಇನ್ನೆವರಮ್ ನೆಲಸಿರ್ದ ಸೇದೆ, ನೀನ್ ಕರುಣಿಸಿದಾಗಳಲ್ಲದೆ ಅವರ್ಗೆ ಆಱದು. ಕೆಮ್ಮಗೆ ನಾಡ ಚಲ್ಲವತ್ತರ ನುಡಿಗೊಳ್ಳದಿರ್. ನಿನಗೆ ಪಾಂಡವರಪ್ಪುದನ್ ಆರುಮ್ ಅಪ್ಪರೇ.

ಅವರ್ಗೆ ಒಂದುಮ್ ಒಡಂಬಡುಮ್ ಪೊರೆಯುಮ್ ಇಲ್ಲ ಎಂಬುದನ್ ಎಯ್ದೆ ನಂಬಿ, ಪೆಱತೇ ಪಡೆಮಾತೊ. ನಾಡನ್ ದಯೆಗೆಯ್ದು ನೀನ್ ಕುಡುವಿನಮ್ ಒಳ್ಪು ನಿಲೆ, ಕಂಚಿ... ನೆಗಳ್ತೆಯ ವಾರಣಾಸಿ... ಕಾಕಂದಿ... ಕುರುಸ್ಥಳಮ್... ವರವೃಕಸ್ಥಳಮ್ ಅಯ್ದು ಬಾಡಮನ್ ಇವನ್ ಅವರ್ಗೆ ಪಳ್ಳಿರಲ್ಕೆ ಎಂದು ಈವುದು.

(ಎಂಬುದುಮ್, ಸುಯೋಧನನ್ ಕ್ರೋಧಾನಲ ಉದ್ದೀಪಿತ ಹೃದಯನಾಗಿ ಶೌರ್ಯಮದಾಡಂಬರದೊಳ್ ಅಂಬರಂಬರಮ್ ಸಿಡಿಲ್ದು...)

**ದುರ್ಯೋಧನ:** ಗೋವು ಕಾದ ಕಿಱಿಯಂದಿನ ಗೋವಿಕೆ ತೊಲಗದೆ ನಿನ್ನ ಚಿತ್ತದೊಳ್ ನೆಲಸಿದುದಕ್ಕುಮ್. ಅಗ್ಗಳದ ವೈಷ್ಣವ ಮೋಹಮೆ ನಿನ್ನ ಮೆಯ್ಯೊಳ್ ಜಡಧಿ ಸಂಗತಿಯಿಮ್ ಜಡಬುದ್ಧಿ ಅಗ್ಗಲಿಸಿದುದಕ್ಕುಮ್. ಬುದ್ಧಿಯನ್ ತೊಲಗಿಸಿತಕ್ಕುಮ್. ಅಲ್ಲದೊಡೆ ನೀನ್ ಇನಿತನ್ ಪಳಾಳಮನ್ ನುಡಿವಯ್. ಪಱಿಪಟ್ಟ ಪಗೆವರನ್ ನೆಱೆ ಪಱಿಪಡಲ್ ಅಣಮ್ ಈಯದೆ, ಅವರನ್ ಅವರ್ಗಳ ಬಾಳೊಳ್ ಏಳ್ಗೆಯ ನಿಱಿಸಲ್ ಬಗೆದಯ್. ನಿನ್ನ ಪೇಳ್ದ ಧರ್ಮಶ್ರವಣಮ್ ಕರಮ್ ಎನಗೆ ಉಱದೆ ಇರ್ಕುಮೆ.

ಭಾಗಮನ್ ಆಸೆಪಟ್ಟು ಅಳಿಪಿ ಬೇಳ್ಪುದು ನಿನ್ನಯ ಕಲ್ತ ವಿದ್ದೆ. ಅಣ್ಣ, ನೀನ್ ಆಗಳುಮ್ ಬೇಡಿದಪೆ. ಎನಗೆ ಈಗಳ್ ಇಳಾಲತಾಂಗಿ ಸಜ್ಜನದಂತೆ ಎಕ್ಕಬಾಗೆ ನೋಡ. ಪುದುವಲ್ಲಳ್. ಅದು ಎಂತೆನೆ ಮುನ್ನ ನೂಲ ತೋಡಾಗದೆ. ಕೆಟ್ಟುವೋದವರನ್

ಇನ್ ಮಗುಳ್ದುಮ್ ನಿಱಿಪಂತು ಬೆಳ್ಳನೇ. ಗೋವುಳಿಗನಪ್ಪನ್ ವಿಜಿಗೀಷುತ್ವದೊಳ್ ಒಂದಿ ಮತ್ಸ್ಯನಾಳಾಗಿ, ವಾರಿಜನಾಭನ್ ಹರಿ ಎಂಬ ದೊಡ್ಡಿವೆಸರನ್ ಪೊತ್ತಿರ್ದ ನೀನ್ ಮಂತ್ರಿಯಾಗೆ, ಆ ಗಂಡರ್ ಜಯೋದ್ಯೋಗಮನ್ ಎತ್ತಿಕೊಂಡು, ಈ ಗಂಡರನ್ ಒಟ್ಟಜೆಯಿಂದೆ ಅಂಜಿಸಿ, ರಣದೊಳ್ ನೆಟ್ಟನೆ ಭೂಭಾಗಮನ್ ಸಮಂತು ಕೊಳ್ಳದೆ ಇರ್ಪಿರೆ. ಪುಸಿಯೆನೆ ಸಾಮಮನ್ ನುಡಿದು, ಭೇದಮನ್ ಉಂಟೊಡೆತಾಗೆ ಮಾಡಿ, ಛಿದ್ರಿಸಲ್ ಒಳಪೊಕ್ಕು, ಮಿಕ್ಕು ನೆಗಳ್ದ ಉಗ್ರವಿರೋಧಿಗಳ್ ತಾವ್ ಎತ್ತಮ್ ಎಯ್ದೆ ಬಂಚಿಸಿ ಪೊಱಗಣ್ಗೆ ಸಯ್ದರೆನೆ, ತವೆ ಒಳಗಮ್ ತೋಡಿ ತಿಂದು ರಕ್ಕಸಿಯರ ಕಂಡ ಕುಂಬಳದ ಮಾಳ್ಕೆವೊಲ್ ಆಗಿರೆ ಮಾಡದಿರ್ಪಿರೇ.

ನಾಮೆಲ್ಲಮ್ ಒಂದೆ ಗರುಡಿಯೊಳ್ ಓದಿದ ಮಾನಸರೆವು. ಎಮ್ಮನ್ ನಿಮ್ಮಡಿ ಕೆಮ್ಮನೆ ಬಳಲಿಸಲ್ವೇಡ. ಬಂದ ಬಟ್ಟೆಯಿನೆ ಬಿಜಯಮ್ ಗೆಯ್ಯಿಮ್...

(ಎನೆ ಮುರಾಂತಕನ್ ಅಂತಕನಂತೆ ಮಾಮಸಕಮ್ ಮಸಗಿ ದುರ್ಯೋಧನನ್ ಇಂತು ಎಂದನ್.)

**ಕೃಷ್ಣ:** ಸೀತೆಯ ದೂಸಱಿಂದೆ ಅಳಿದ ರಾವಣನಂತಿರೆ ನೀನುಮ್ ಈಗಳ್ ಈ ಸೀತೆಯ ದೂಸಱಿಂದೆ ಅಳಿಯಲ್ ಆಟಿಸಿದಯ್. ನಿನಗೆ ಅಂತು ಸೀತೆ ಸೀತೆಯೇ ಕಡಂಗಿ ಕಾಯ್ದು ಕಡೆಗಣ್ಚಿದಳ್ ಅಪ್ಪೊಡೆ, ಧಾತ್ರನಿನ್ ಪಾಂಡವರ ಕೆಯ್ಯೊಳೆ ನಿನ್ನ ನಿಸೇಕಮ್ ಆಗದೇ. ತೊದಳ್ವಾತಿನೊಳ್ ಏನೊ. ಪಾಂಡವರೊಳ್ ಕಡುಕೆಯ್ದು ಆಂತು ಇಱಿಯಲ್ ನೆಱೆವನ್ನರ್ ಆರ್. ಇಂತು ಇದು ಏತರ್ಕೆ ಬಿಗುರ್ತಪಯ್.

ನೆಲನನ್ ಒಪ್ಪಿಸಿ ತಪ್ಪದೆ ಬಾಳ್ವೆನ್ ಎನ್ನದೆ ಈ ಉರ್ಕಿನೊಳ್ ನಿಂದು ಸೆಣಸಲ್ ಎಂತು ಬಗೆ ಬಂದುದು. ನಿನ್ನ ಮೆಯ್ಯ ನೆತ್ತರ್ ಕುದಿದುರ್ಕಿ, ಸಾವ ಬಗೆಯಿನ್ ಸೆಣಸಲ್ ಬಗೆ ಬಂದುದಾಗದೇ. ಯುಧಿಷ್ಠರನನ್ ಮುಳಿಯಿಸಿ ಬರ್ದುಂಕಲಾದನುಮ್ ಒಳನೆ. ಅಮಳರ ಅಳವು ಎಂಬುದು

ಭೂಭುವನ ಪ್ರಸಿದ್ಧಮ್. ಅವರ್ ಇಱಿಯೆ ಪೆಳಱೆವು ಎಂಬ ಅರಿನೃಪ ಬಲಂಗಳ್ ಒಳರೇ. ಭೀಮಸೇನನ್ ಗಜೆಗೊಳೆ ಇದಿರಾಂತು ಬರ್ದುಂಕುವ ವೈರಿಭೂಭುಜ ಧ್ವಜಿನಿಗಳ್ ಇಲ್ಲದು.

ಅಲ್ಲದೆಯುಮ್ ಈ ಯುವರಾಜನ ನೆತ್ತರನ್ ಕುರುಧ್ವಜಿನಿಯೆ ನೋಡೆ ಪೀರ್ದು, ಭವತ್ ಊರುಯುಗಂಗಳನ್ ಆಜಿರಂಗದೊಳ್ ಗಿಜಿಗಿಜಿ ಮಾಡಲೆಂದು, ಅವನ ಪೂಣ್ದುದು ನಿಕ್ಕುವಮ್ ಆಗದಿರ್ಕುಮೇ. ಅದಲ್ಲದೆಯುಮ್ ರಾಜಸೂಯ ವ್ಯತಿಕರದೊಳ್ ದಿಗ್ವಿಜಯಮ್ ಗೆಯ್ದು, ಲಂಕೆಯ ವಿಭೀಷಣನನ್ ಒಂದೆ ದಿವ್ಯಾಸ್ತ್ರದೊಳ್ ಎಚ್ಚು ಕಪ್ಪಂಗೊಂಡ ವಿಕ್ರಮಾರ್ಜುನನ ವಿಕ್ರಮುಮನ್; ಕಾಪಿನ ದೇವರ್ ಒಂದು ಪೊಳ್ತುಮ್ ಅಗಲದ ನೂಱು ಯೋಜನದ ಅಳವಿಯ ಖಾಂಡವವನಮನ್ ಅನಲಂಗೆ ಊಡಿದ ಅರಾತಿಕಾಳಾನಳನ ಅಳವುಮನ್; ಜವನನ್ ಅವಯವದೊಳ್ ಗೆಲ್ದು ಪಾರ್ವರ ಪಿಳ್ಳೆಯ ಪೋದ ಪ್ರಾಣಮನ್ ತಂದ ಸಾಹಸಾಭರಣನ ಸಾಹಸಮುಮನ್; ಇಂದ್ರಕೀಲ ನಗೇಂದ್ರದೊಳ್ ಇಂದ್ರನ ಬೆಸದೊಳ್ ತಪೋವಿಘಾತಮ್ ಮಾಡಲೆಂದು ಬಂದ ಪುರಂದರನ ಗಣಿಕೆಯರ ಕಡೆಗಣ್ಣ ನೋಟಕ್ಕಮ್ ಕಾಟಕ್ಕಮ್ ಅಳ್ಕದ ಶೌಚಾಂಜನೇಯನ ಶೌಚಮುಮನ್;

ದಾನವಾಧಿಪನಪ್ಪ ಮೂಕದಾನವ ಸೂಕರನನ್ ಒಂದೆ ಸೂಳ್ ಅಂಬಿನೊಳ್ ಎಚ್ಚು ಕೊಂದ ಪರಾಕ್ರಮಧವಳನ ಪರಾಕ್ರಮಮುಮನ್; ತ್ರಿಣೇತ್ರನೊಳ್ ಕಾದಿ ಪಾಶಪತಾಸ್ತ್ರಮನ್ ಪಡೆದ ಕದನತ್ರಿಣೇತ್ರನ ಗಂಡಗರ್ವಮುಮನ್; ಇಂದ್ರಲೋಕಕ್ಕೆ ಪೋಗಿ ದೇವೇಂದ್ರನ ಪಗೆವರಪ್ಪ ನಿವಾತಕವಚ ಕಾಳಕೇಯ ಪೌಲೋಮ ತಳತಾಳುಕರ್ ಎಂಬ ದೈತ್ಯರನ್ ಪಡಲ್ವಡಿಸಿದ ಪಡೆಮೆಚ್ಚೆ ಗಂಡನ ಗಂಡುಮನ್; ದೇವೇಂದ್ರನೊಳ್ ಅರ್ಧಾಸನಮ್ ಏಱಿದ ಗುಣಾರ್ಣವನ ಮಹಿಮೆಯುಮನ್; ಚಳುಕ್ಯಕುಳತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜನ್ ಮುಳಿಯೆ, ತಳರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ

ಪೆಂಪುಮನ್; ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಬೆಸಸೆ ದಂಡುವಂದ ಮಹಾಸಾಮಂತರನ್ ಮರಲಿಱಿದು ಗೆಲ್ದ ಸಾಮಂತ ಚೂಡಾಮಣಿಯ ಬೀರಮುಮನ್;

ಅತಿವರ್ತಿಯಾಗಿ ಮಾರ್ಮಲೆವ ಚಕ್ರವರ್ತಿಯನ್ ಕಿಡಿಸಿ, ತನ್ನ ನಂಬಿ ಬಂದ ಬದ್ದೆಗ ದೇವಂಗೆ ಸಕಳ ಸಾಮ್ರಾಜ್ಯಮನ್ ಓರಂತು ಮಾಡಿ ನಿಱಿಸಿದ ಅರಿಕೇಸರಿಯ ತೋಳ್ವಲಮುಮನ್; ಸಮದಗಜ ಘಟಾಟೋಪಮ್ ಬೆರಸು ನೆಲನ್ ಅದಿರೆ ವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನ್ ಅಂಕಕಾಱನನ್ ಒಂದೆ ಮದಾಂಧಗಂಧಸಿಂಧುರದೊಳ್ ಓಡಿಸಿದ ವೈರಿಗಜಘಟಾ ವಿಘಟನನ ಅದಟುಮನ್; ಪರಚಕ್ರಂಗಳನ್ ಅಂಜಿಸಿದ ಪರಸೈನ್ಯ ಭೈರವನ ಮೇಗಿಲ್ಲದ ಬಲ್ಲಾಳತನಮುಮನ್ ಕಂಡುಮ್ ಕೇಳ್ದುಮ್ ನಿನಗೆ ಸೆಣಸಲ್ ಎಂತು ಬಗೆ ಬಂದಪುದು.

ದಶಕಂಧರನ್ ಆಡಿಪಾಡಿ ನೆಟ್ಟನೆ ಬೂತು ಕೊಳ್ವ ತೆಱದಿನ್ ಬರಂಗಳ ಈಶ್ವರನಲ್ಲಿ ನಾಣ್ಗೆಟ್ಟಿರೆ ಕೊಂಡನಲ್ಲದೆ, ಒಟ್ಟಜೆಯಿಂದ ಕೊಂಡನೆ ಪೇಳಿಮ್ ಎನುತುಮ್, ವಿಜಯನ್ ನೆಲಕಿಕ್ಕಿ ಗಂಟಲಮ್ ಮೆಟ್ಟದೆ ಇಂದ್ರಕೀಲದೊಳ್ ಹರನ ಪಾಶುಪತಾಸ್ತ್ರಮನ್ ಕೊಂಡನೇ. ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನ ಅಣುಗಾಳ್ ನೋಡೆ, ನಿನ್ನ ಅಂಗನೆಯರ್ ತೊವಲ್ಗೊಳೆ ಭಯಂಗೊಳೆ, ಚಿತ್ರಾಂಗದನ್ ಕೋಡುಗಗಟ್ಟು ಕಟ್ಟಿ ನಿನ್ನನ್ ಉಯ್ಯೆ, ಎಡೆಮಾಡದೆ ಅಸುಂಗೊಳೆ ಕಾದಿ ತಂದ ವೀರಂಗೆ ಅರಿಗಂಗೆ ಸುಯೋಧನಾ, ನೀನ್ ಮಲೆದು ನಿಲ್ವುದು ಪಾಳಿವಲಮ್.

ನಿನ್ನನ್ ಕುರುರಾಜ, ಗಂಧರ್ವರ್ ಉಯ್ವಂದು ಗುರುವಿಲ್ಲಾ... ಕರ್ಣನಿಲ್ಲಾ... ಗುರುವಿನ ಮಗನಿಲ್ಲಾ... ಕೃಪಾಚಾರ್ಯನಿಲ್ಲಾ... ನಿನ್ನ ಇನಿಬರೊಳ್ ತಮ್ಮಂದಿರೊಳ್ ಆರ್ ಇಲ್ಲ... ಗಾಂಗೇಯನಿಲ್ಲಾ... ಮರುಳೇ, ಗಾಂಡೀವಿ ಆರ್ ಎಂದು ಇಳಿಸಿ ನುಡಿವೆ. ನೆರೆದ ಕುರುಬಲಮ್ ಕರುವಿಟ್ಟಂತೆ ಇರ್ದುದಲ್ಲಾ... ತಂದವನ್ ಪಾರ್ಥನಲ್ಲಾ... ಅಮೋಘಮ್ ಬವರಂಗೆಯ್ವಮ್ ಎಂಬ ಬಗೆಯಿನ್ ನೀಮೆಲ್ಲಮ್ ಆದಮ್ ರಣೋತ್ಸವದಿನ್

ನಿನ್ನೆಯೆ ಪೋದ ಗೋಗ್ರಹಣದಂದು ಏನಾದಿರ್. ಅಂತು ಆ ಪರಾಭವಮ್ ಚಿ: ಮಱೆದಿರ್ದಿರ್ ಅಪ್ಪೊಡೆ, ಅದೇನ್ ಏವೋದುದು. ಇನ್ನುಮ್ ಗುಣಾರ್ಣವನಿನ್ ಮಹಾ ಗಾಂಡೀವ ನಿರ್ಘೋಷಮನ್ ನಾಳೆಯೆ ಕೇಳದೆ ಇರ್ಪಿರೆ. ಸುರಿವ ಸರಲ್. ನರಲ್ವ ಭಟರ್. ಎತ್ತಮು ಉರುಳ್ವ ದಳಮ್. ಪೊರಳ್ವ ಸಿಂಧುರ ಘಟೆ. ಬರ್ಪ ನೆತ್ತರ ಕಡಲ್. ಕುಣಿವ ಅಟ್ಟೆಗಳ್. ಆಜಿಯೊಳ್ ಭಯಂಕರತರಮ್ ಅಪ್ಪಿನಮ್ ಪಗೆವರ ಒಕ್ಕಲೊಳ್ **'ಓ ಎನಲ್'** ಒರ್ವರ್ ಇಲ್ಲದಂತಿರೆ ತವೆ ಕೊಲ್ಗುಮ್. ಅಂತುಮ್ ಅರಿಕೇಸರಿಗೆ ಆಂತು ಬರ್ದುಂಕಲ್ ಅಕ್ಕುಮೇ.

(ಎಂದು ಕಾಳನೀಳಮೇಘದಂತು ಮಸಗಿ ಗರ್ಜಿಸುವ ಅಸುರಕುಳವಿಳಯಕೇತುಗೆ ಫಣಿಕೇತು ಮುಳಿದು ತಳಮಳಿಸಿ ಕಣ್ಣಾಗಣದೆ...)

**ದುರ್ಯೋಧನ:** ಎಳ್ಪೋಗು. ದೂತನಪ್ಪನ ಬೆಳ್ಪನ ನುಡಿಗೇಳ್ದು ಮುಳಿಯಲಾಗದು. ನೀನುಮ್ ಮೆಳ್ಪಟ್ಟು ವಿದುರನೆಂಬ ಈ ತೊಳ್ಪಟ್ಟಿಯ ಮನೆಯ ಕೂಳೆ ನುಡಿಯಿಸೆ ನುಡಿದಯ್.

(ಎನೆ, ವಿದುರನ್ ಅತಿಕುಪಿತ ಮನನಾಗಿ...)

**ವಿದುರ:** ಭೀಮಸೇನನ್ ಕಡುಮುಳಿದು ನಿನ್ನ ತೊಡೆಗಳನ್ ಉಡಿವ ಎಡೆಯೊಳ್, ಆ ಪದದೊಳ್ ಆನ್ ಇದನ್ ಪಿಡಿಯಲ್ಕೆ ಎಂದು ಇರ್ದೆನ್. ಪಿಡಿಯೆನ್ ಪೋಗು.

(ಎಂದು ಸಭೆಯೊಳ್ ಬಿಲ್ಲನ್ ಉಡಿದನ್. ಅಂತು ವಿದುರನ್ ವಿಚ್ಛಿದುರಮನನಾಗಿ ಬಿಲ್ಲನ್ ಉಡಿವುದುಮ್, ಸುಯೋಧನನ್ ತನ್ನ ಬಲದ ತೋಳ್ ಉಡಿದಂತಾಗಿ ಸಿಗ್ಗಾಗಿ ಬಾಳನ್ ಕಿಳ್ತು ಒದಱಿ, ಮನದೊಳ್ ಆದ ಏವದಿನ್ ದೇವಕೀನಂದನನ ಮೇಲೆ ಪಾಯ್ವುದುಮ್, ನಂಜಿನ ಮೇಲೆ ಪಾಯ್ವ ನೊಳವಿನಂತೆ ಉರುಳ್ತರೆ ಪಾಯ್ದು ಮುರಾಂತಕನ್ ವೈಷ್ಣವದಿನ್ ಇರ್ದರನ್ ನೆಱೆಯೆ ಮೋಹಿಸಿ ನೆಲನೆಲ್ಲಮನ್ ಮೂಱಡಿ ಮಾಡಿದಂದು ಆ ಬಲಿಗಾದ ರೂಪಮನ್ ತೋಱಿದನ್. ಈ ಜಗತ್ರಯಮನ್ ಒರ್ಮೆಯೆ ನುಂಗುವ

ಕಾಲರೂಪಮನ್ ಒರ್ಮೆಯೆ ವಿಶ್ವರೂಪಮನ್ ತೋಱಿದನ್. ಅಂತೆ ರೌದ್ರತರ ರೂಪಮನ್ ತೋಱಿದನ್.

ಆಗಳ್ ಧೃತರಾಷ್ಟ್ರನ್ ಬಂದು, ಮುಕುಂದನನ್ ಅನೇಕ ಸ್ತುತಿ ಶತಸಹಸ್ರಂಗಳಿನ್ ಸ್ತುತಿಯಿಸಿದೊಡೆ, ಆತಂಗೆ ವರದನಾಗಿ ದಿವ್ಯ ದೃಷ್ಟಿಯನ್ ದಯೆಗೆಯ್ದು, ಮುನ್ನಿನಂತೆ ಮನುಷ್ಯ ದೇಹಮನ್ ಕೆಯ್ಕೊಂಡು, ತ್ರೈಲೋಕ್ಯ ಗುರು ಗುರುತನೂಜನ ಕೆಯ್ಯನ್ ಪಿಡಿದು ಅರಮನೆಯನ್ ಪೊಱಮಟ್ಟು, ಕಪಟಪ್ರಪಂಚದಿಂದೆ ಆತನುಮನ್ ತನಗೆ ಮಾಡಿ, ಬೀಡಿಂಗೆ ವಂದು ಕುಂತಿಗೆ ಏಕಾಂತದೊಳ್ ಇಂತು ಎಂದನ್...)



## ೫೬. ಕೃಷ್ಣನ ಕುಟಿಲೋಪಾಯ

(೬೦ ನೆಯ ಗದ್ಯದಿಂದ ೬೩ ನೆಯ ಗದ್ಯ)

### ಪಾತ್ರಗಳು

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

**ಕುಂತಿ:** ಪಾಂಡವರ ತಾಯಿ.

# ಕೃಷ್ಣನ ಕುಟಿಲೋಪಾಯ

ತ್ರೈಲೋಕ್ಯ ಗುರು ಗುರುತನೂಜನ ಕೆಯ್ಯನ್ ಪಿಡಿದು ಅರಮನೆಯನ್ ಪೊಱಮಟ್ಟು, ಕಪಟ ಪ್ರಪಂಚದಿಂದೆ ಆತನುಮನ್ ತನಗೆ ಮಾಡಿ, ಬೀಡಿಂಗೆ ವಂದು ಕುಂತಿಗೆ ಏಕಾಂತದೊಳ್ ಇಂತು ಎಂದನ್.

**ಕೃಷ್ಣ:** ಗುರು ಕೃಪ ಶಲ್ಯ ಸಿಂಧುಸುತರಪ್ಪೊಡೆ ನಮ್ಮಯ ಪಕ್ಷಮ್. ಗುರುಸುತನ್ ಈಗಳ್ ಎಮ್ಮೊಳ್ ಒಂದಿದನ್. ಅಖಿಳಾಸ್ತ್ರ ವಿಶಾರದನಪ್ಪನುಮ್ ಗೆಲಲ್ಕೆ ಅರಿಯನುಮ್ ಒಂದಿಬಾರದನುಮ್ ಅಂಕದ ಕರ್ಣನೆ. ಸಮಸ್ತ ಧಾತ್ರಿಯೊಳ್ ಆತನಿನ್ ಬೀರಮ್ ಉರಿವರಿದತ್ತು. ಅವನಿಂದೆ ಚಾಗಮ್ ಎಸೆದತ್ತು. ಎಂತು ಎನೆ ವಜ್ರಿ ವಜ್ರಕವಚಕ್ಕೆ ನಿಜೋಜ್ವಲ ಕುಂಡಲಕ್ಕೆ ಕೈಯಾಂತಡೆ, ಪಾಂಡುಪುತ್ರರನೆ ಕಾದು ಎರೆವಂದು ಉಗಿವನ್ ದಲ್ ಎಂದು ಮಂತಣದಿಂದೆ ಇನನ್ ಬಾರಿಸೆಯುಮ್, ಎಂದುದನ್ ಎನ್ನದೆ ಮೀಱಿ ಒಡಲೊಳ್ ತೊಡರ್ದಾ ತನುತ್ರಮನ್ ಬಿಡೆ ನೇರ್ದು ಜಸಕ್ಕೆ ನೋಂತು ಓರಂತು ಕೊಟ್ಟನ್. **"ಬೇಡಿದರ್ಗೆ ಬರವನ್ ಈವ ದೇವನೆ ವಲಮ್ ನಾಣ್ಗೆಟ್ಟು ಬಂದು ಎನ್ನನ್ ಇಂತು ಎರೆದನ್ ಬರ್ದರೊಳ್ ಆನೆ ಬರ್ದನ್"** ಎನುತುಮ್ ನೇರ್ವಲ್ಲಿ ಕೆನ್ನೆತ್ತರುಮ್ ಬಿರಿಕಂಡಂಗಳೆ ಬೀಳಲುಣ್ಮೆ, ಮನದ ಒಂದು ಅಣ್ಮು ಇಟ್ಟಳಮ್ ಪೊಣ್ಮೆ, ಆ ಕರ್ಣನಾ ಕವಚಂಗೊಂಡಂದಮ್ ನೋಡೆ ವೀರರಸಕ್ಕೆ ಆಗರಮಾಯ್ತು. ಅಂತು ಸಹಜ ಕವಚ ರತ್ನಕುಂಡಲಂಗಳನ್ ನೆತ್ತರ್ ಪನಪನ ಪನಿಯೆ ತಿದಿ ಉಗಿವಂತೆ ಉಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನ್ ಆತಂಗೆ ಅಮೋಘ ಶಕ್ತಿಯನ್ ಇತ್ತನ್. ಆತನನ್ ನಾನುಮ್ ಎನ್ನ ಬಲ್ಲ ಮಾಳ್ಕೆಯಿನ್ ಭೇದಿಸದಪ್ಪೆನ್. ನೀಮುಮ್ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುವನ್ ಸೂರ್ಯದಿನದಂದು ಕಂಡು ಕಾರ್ಯ ಸಿದ್ಧಿಯನ್ ಮಾಡಿ ಬನ್ನಿಮ್.

(ಎಂದು ಕೊಂತಿಯನ್ ಬೀಳ್ಕೊಂಡು...) 

# ೫೭. ಕೃಷ್ಣನ ಕುಟಿಲತೆ... ಕರ್ಣನ ಅಳಲು

(೬೩ ನೆಯ ಗದ್ಯದಿಂದ ೭೧ ನೆಯ ಗದ್ಯ)

## ಪಾತ್ರಗಳು

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ, ಪಾಂಡವರ ಹಿತಚಿಂತಕ.

ಕರ್ಣ: ಅಂಗರಾಜ್ಯದ ಒಡೆಯ.

## ಕೃಷ್ಣನ ಕುಟಿಲತೆ... ಕರ್ಣನ ಅಳಲು

ಕೊಂತಿಯನ್ ಬೀಳ್ಕೊಂಡು ಪರಕೆಯನ್ ಕೈಕೊಂಡು ರಥಾಂಗಧರನ್ ರಥಮನ್ ಏಱಿ ಕರ್ಣನ ಮನೆಯ ಮುಂದನೆ ಬಂದು, ಮೇಲೆ ಬಿಳ್ದು...

**ಕೃಷ್ಣ:** ಎಮ್ಮನ್ ಕಿಱಿದು ಅಂತರಮ್ ಕಳಿಪಿ. ಮಗುಳ್ವೆ ಬಾ... ಪೋಪಮ್.

(ಎಂದು ತನ್ನೊಡನೆ ರಥಮನ್ ಏಱಿಸಿಕೊಂಡು ಪೋಗಿ ಮುಂದೊಂದು ಎಡೆಯೊಳ್ ನಿಂದು...)

**ಕೃಷ್ಣ:** ಕರ್ಣ, ಭೇದಿಸಲೆಂದೆ ನುಡಿದರ್ ಎನ್ನದಿರ್. ಒಯ್ಯನೆ ಕೇಳ, ನಿನ್ನಾದಿಯೊಳ್ ಅಬ್ಬೆ ಕೊಂತಿ. ನಿನಗೆ ಅಮ್ಮನ್ ಅಹರ್ಪತಿ. ಪಾಂಡುನಂದನರ್ ಸೋದರರ್. ಆನ್ ಎಯ್ದೆ ಮಯ್ದುನನೆನ್. ಪೆಱತೇನ್ ಪಡೆಮಾತೊ. ನಿನ್ನದು ಈ ಮೇದಿನಿ. ಪಟ್ಟಮುಮ್ ನಿನತೆ. ನೀನಿರೆ ಮತ್ತೆ ಪೆಱರ್ ನರೇಂದ್ರರೇ...

ಉತ್ತುಂಗಸ್ತನಿ ಕೆಯ್ಯೆಡೆ ಎಂದು ಗಂಗೆಗೆ ಕೊಟ್ಟು ಪೋಗೆ, ಸೂತನ್ ಕಂಡು ಆತ್ಮಾಂಗನೆಗೆ ರಾಧೆಗೆ ಇತ್ತು ಮನಂಗೊಳೆ, ರಾಧೇಯನ್ ಎನಿಸಿ ಸೂತಜನಾದಯ್. ನಿನ್ನ ಉತ್ಪತ್ತಿಯನ್ ಇಂತೆಂದು ಎನ್ನರುಮ್ ಅಣಮ್ ಅಱಿಯರ್. ಆನ್... ಅಱಿವೆನ್. ಸಹದೇವನ್, ಪನ್ನಗಕೇತು, ದಿನೇಶನ್ ನಿನ್ನ ಅಂಬಿಕೆ ಕುಂತಿ... ಇಂತಿವರ್ ನೆಱೆ ಬಲ್ಲರ್.

ದುರ್ಯೋಧನನ್ ನಿನ್ನನ್ ಏತಱೊಳ್ ನಂಬಿದನ್ ಎಂದೊಡೆ, ನೀನುಮ್ ತಾನುಮ್ ಒರ್ಮೆ ಗಂಗಾನದೀ ತೀರದೊಳ್ ಬೇಂಟೆಯಾಡುವಲ್ಲಿ, ತತ್ಸಮೀಪದ ತಾಪಸಾಶ್ರಮದೊಳ್ ಸತ್ಯಂತಪರೆಂಬ ದಿವ್ಯಜ್ಞಾನಿಗಳನ್ ಕಂಡು ಪೊಡೆವಟ್ಟ ಇರ್ವರುಮನ್ ಪರಸಿ, ನಿನಗೆ ಮುನ್ನಮ್ ಏಱಿಲ್ ತರಿಸಿದೊಡೆ, ಸುಯೋಧನನ್ ಏವಯಿಸಿ ನಿನ್ನನ್ ಪೋಗಳ್ ಪೇಳ್ದು **"ಆನ್ ಇರೆ ನೀಮ್ ಮೀಂಗಲಿಗಂಗೆ ಇದೇಕೆ ದಯೆಗೆಯ್ದಿರೊ ಪೇಳಿಮ್"**

ಎಂದ ಆ ನರನಾಥನನ್ ತನ್ನುನಿ ತಿಳಿಪೆ, ಭೂಭುಜನ್ ಎಯ್ದೆ ನಂಬಿ ಕಾನೀನ, **"ಒಯ್ಯನೆ ಮುಳ್ಳೊಳೆ ಮುಳ್ಳನ್ ಸಮಂತು ಪಾಟಿಸುವೆನ್"** ಎಂದು ತಾನ್ ಈ ನಯದಿಂದೆ ಪೆರ್ಚಿ ಪೊರೆದು ಅಂದು ಅಳ್ಕಱೊಳ್ ಒಡನುಂಡನಲ್ಲನೇ...

(ಎನೆಯೆನೆ, ಬಾಷ್ಪವಾರಿ ಪುಳಕಮ್ ಬೆರಸು ಒರ್ಮೆಯೆ ಪೊಣ್ಮೆ...)

**ಕರ್ಣ:** ನೆಗಳ್ತೆ ಪೊಗಳ್ತೆಯನ್ ಆಂಪಿನಮ್ ಮುನ್ನೆ ನೀವ್ ಇದನ್ ಎನಗೇಕೆ ಪೇಳ್ದಿರೊ. ಸುಯೋಧನನ್ ಎನಗೆ ಒಳ್ಳಿಕೆಯ್ದ ಕೃತಮನ್ ಪೆಱಗಿಕ್ಕಿ, ನೆಗಳ್ತೆ ಮಾಸೆ, ನಣ್ಪಿನ ನೆವದಿಂದೆ ಆನ್ ಪಾಂಡವರನ್ ಒಳವೊಕ್ಕಡೆ ನೀಮೆ ಪೇಸಿರೇ.

ಭಾನುಮತಿ ನೆತ್ತಮನಾಡಿ ಸೋಲ್ತೊಡೆ, **'ಸೋಲಮನ್ ಈವುದು'** ಎಂದು ಕಾಡುತ್ತಿರೆ, ಲಂಬಣಮ್ ಪಱಿಯೆ, ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ, ಏವಮಿಲ್ಲದೆ **"ಇವನ್ ಆಯ್ವುದೊ ತಪ್ಪದೆ ಪೇಳಿಮ್"** ಎಂಬ ಭೂಪೋತ್ತಮನನ್ ಬಿಸುಟ್ಟು, ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ.

(ಎಂಬುದುಮ್, ಕರ್ಣನ್ ತನಗೆ ಎಂತುಮ್ ಒಡಂಬಡದುದನ್ ನಿರ್ಣಯಮಾಗಱಿದು ಮಗುಳಲ್ ಪೇಳ್ದು, ನಾರಾಯಣನ್ ಪೋದನ್. ಇತ್ತಲ್ ಅಂಗರಾಜನುಮ್ ಆತ್ಮಾಲಯಕ್ಕೆ ವಂದು ಚಿಂತಾಕ್ರಾಂತನಾಗಿ...)

**ಕರ್ಣ:** (ತನ್ನಲ್ಲಿಯೇ)

ಕುರುಪತಿಗೆ ದೈವಬಲಮ್ ಇಲ್ಲ. ಗುರು ಗುರುಪುತ್ರ ಸಿಂಧು ಸುತರ್ ಆಗಳುಮ್ ಆಜಿಗೆ ಮೇಲ್ಮಲೆಗೆಯ್ವರ್. ಆಳ್ದನುಮ್ ಎನ್ನನೆ ನಚ್ಚಿ ಪೆರ್ಚಿ ಮುನ್ ಪೊರೆದನ್. ಇದಿರ್ಚಿ ಕಾದುವರುಮ್ ಎನ್ನಯ ಸೋದರರ್. ನೋಡಿ, ಎಂತು ಕೊಕ್ಕರಿಸದೆ ಕೊಲ್ವೆನ್. ರಣರಂಗಭೂಮಿಯೊಳ್ ಆನ್ ಎನ್ನೊಡಲನ್ ತವಿಪೆನ್. ಪಾಂಡವರನ್ ಸೋದರರೆಂದು ಅಱಿದೆನ್. ಎಂತು ಎನ್ನರನ್ ಕೊಲ್ವೆನ್. ಅಳ್ಕಱೊಳ್ ಎನ್ನನ್ ಪೊರೆದು ಎಯ್ದೆ ನಂಬಿದ ನೃಪಂಗೆ ಆಜಿಯೊಳ್ ಎಂತು ತಪ್ಪುವೆನ್. ತಱಿಸಂದು ಉದ್ಧತವೈರಿ ಭೂಪ ಬಲದ ಒಡ್ಡು ಅಳ್ಕಾಡೆ ಲೆಕ್ಕಕ್ಕೆ ತಳ್ತಿಱಿದು, ಎನ್ನ ಆಳ್ದನಿನ್ ಮುಂಚೆ ಕಟ್ಟಾಯಮನ್ ಕೈಕೊಂಡು ನಿಱಿಪೆನ್.

(ಎಂದು ಮುಂತಪ್ಪ ಕಜ್ಜಮನ್ ತನ್ನೊಳೆ ಬಗೆದು...)



# ೫೮. ಕರ್ಣ ಕುಂತಿಯ ಪುನರ್ ಮಿಲನ

(೭೨ ನೆಯ ಗದ್ಯದಿಂದ ೮೭ ನೆಯ ಗದ್ಯ)

## ಪಾತ್ರಗಳು

**ಕರ್ಣ:** ಕುಂತಿಯ ಮೊದಲನೆಯ ಮಗ. ಸೂರ್ಯ ದೇವತೆಯ ಅಂಶದಿಂದ ಹುಟ್ಟಿದವನು.

**ಕುಂತಿ:** ಕರ್ಣ ಮತ್ತು ಪಾಂಡವರ ತಾಯಿ.

**ಗಂಗಾದೇವಿ:** ದೇವತೆ.

**ಸೂರ್ಯದೇವ:** ದೇವತೆ.

# ಕರ್ಣ ಕುಂತಿಯ ಪುನರ್ ಮಿಲನ

ಜಗನ್ಮಂಗಳ ಗಂಗಾವಾರಿಯೊಳ್ ಅನಿವಾರಿತ ಪರಾಕ್ರಮನ್ ಅಘಮರ್ಷಣ ಪೂರ್ವಕಮ್ ಮಿಂದು, ಕನಕಪಾತ್ರದೊಳ್ ತೆಕ್ಕನೆ ತೀವಿದ ಕನಕ ಕಮಳಂಗಳಿಂದೆ ಆದಿತ್ಯತೇಜನ್ ಆದಿತ್ಯಂಗೆ ಅರ್ಘ್ಯಮೆತ್ತಿ, ಸೂರ್ಯಜನ್ ಸೂರ್ಯಮಂತ್ರಗಳನ್ ಓದಿ, ನೀರನ್ ಸೂಸಿ ತ್ರಿಪದಕ್ಷಿಣಮ್ ಗೆಯ್ದಾಗಳ್, ಸಂಗತ ತರಂಗಯುತೆಯನ್ ಮಂಗಳ ಲಕ್ಷಣೆಯನ್ ಗಂಗಾಂಗನೆಯನ್ ಕಾಣ್ಬವೊಲ್ ಆಗಳ್ ಮುಂದೆ ನಿಂತ ಕೊಂತಿಯನ್ ಅಂಗನೃಪನ್ ಅಂದು ಭೋಂಕನೆ ಕಂಡನ್. ಅಂತು ಕಂಡು ಮನದೊಳಾದ ಎಱಕದಿನ್ ಸಾಷ್ಟಾಂಗಮ್ ಎಱಗಿ ಪೊಡೆವಟ್ಟ ನಿಜನಂದನನನ್ ಅಳ್ಕಿಱಿಂದೆ ಅಪ್ಪಿಕೊಂಡು, ಪರಮ ಆಶೀರ್ವಚನಂಗಳಿಮ್ ಪರಸಿ, ತೊರೆದ ಕುಚಯುಗಳಮ್ ಅಂದು ಮೊಲೆವಾಲನ್ ಅಂಬಿರಿವಿಡೆ, ಅಳ್ಕಱಿಂದಮ್ ಮೆಯ್ಯಂಕುರಿಸೆ, ಸುರಿವ ಅಶ್ರುಜಲಮ್ ಉಬ್ಬರಿಸಿ ಪೊನಲ್ ಪೊನಲನ್ ಅಟ್ಟೆ, ಆಗಳ್ ಜನನುತೆಗೆ ಆಗಳೆ ಮಗನನ್ ಪೆತ್ತವೊಲಾಗಿ, ಲತಾಲಲಿತೆ ನೊಸಲ ಕಣ್ಬೆತ್ತವೊಲ್ ಅಂತು ಆಗಡೆ ರಾಗಕ್ಕೆ ಆಗರಮಾಗೆ ದಿನಾಧಿಪ ತನೂಜನ್ ಒಸೆದು ಇರ್ಪನೆಗಮ್, ಗಂಗಾದೇವಿಯುಮ್ ದಿವ್ಯಮೂರ್ತಿಯನ್ ಕೆಯ್ಕೊಂಡು ಬಂದು...

**ಗಂಗಾದೇವಿ:** (ಕುಂತಿಯನ್ನು ಕುರಿತು)

ಕೆಯ್ಯೆಡೆಯೆಂದು ಅಪ್ಪೈಸಿದ ನಿನ್ನ ಮಗನನ್ ಈಗಳೆ ನಿನಗೆ ಒಪ್ಪಿಸಿದೆನ್.

(ಎಂದು ಅಪ್ಪೈಸಿ ಗಂಗೆ ಪೋಪುದುಮ್, ದಿನಪನ್ ಒಪ್ಪುವ ನಿಜಬಿಂಬದೊಳಗಣಿಂದಮ್ ಪೊಱಮಟ್ಟು ಬರಲು, ತನ್ನಡಿಗೆ ಎಱಗಿದ ನಿಜಸುತನನ್ ಅಳ್ಕಱಿನ್ ಪರಸಿ, ಮನಮ್ ಮಱುಗಿ ರವಿ ನುಡಿದನ್...)

**ಸೂರ್ಯದೇವ:** ಎನ್ನುಮನ್ ಉಱಿದೆ... ಮರುಳ್ ಮಗನೆ... ಹರಿಗೆ ಕವಚಮನ್ ಇತ್ತಯ್. ಅದನ್ ನುಡಿಯೆನ್. ಪಡೆಮಾತೇನ್, ಹರಿಯ ಮತದಿನ್ ನಿನ್ನಂಬಿಕೆ ಕೊಂತಿ ಸುತರನ್ ಕಾಯಲ್ಕೆ ಒಡರಿಸಿ ಬಂದಳ್. ಎನಿತು ಲಲ್ಲೈಸಿದೊಡಮ್ ಪುರಿಗಣೆಯನ್ ಕುಡದಿರ್.

(ಎಂದು ಅರವಿಂದಪ್ರಿಯಸಖನ್ ಅಂದು ಅಂಬರತಳಮನ್ ಅಡರ್ವುದುಮ್, ಕೆಯ್ ಮುಗಿದು ಕುಂತಿಯನ್ ಇಂತು ಎಂದನ್.)

**ಕರ್ಣ:** ಅಬ್ಬೆ, ಈಗಳ್ ಎನಗೆ ಸಯ್ಪು ಬರ್ಪಂತೆ ಅದು ಏವಂದಿರ್ಪುದು. ನಿಮ್ಮ ಕರುಣಾಬಲದಿನ್ ನೀವ್ ಎನ್ನನ್ ಇಂದು ಮಗನ್ ಎಂದುದಱಿನ್, ಚಲಮುಮ್ ಚಾಗಮುಮ್ ಅಳವುಮ್ ಕಲಿತನಮುಮ್ ಕುಲಮುಮ್ ಎನ್ನಯ ಮೆಯ್ಯೊಳ್ ಈಗಳ್ ನೆಲಸಿದುವು. ಒಡಲನ್ ಪ್ರಾಣಮುಮನ್ ತಾಯುಮ್ ತಂದೆಯುಮ್ ಪಡೆದರ್. ಅವು ಅವರವು. ಕೆಯ್ಯೆಡೆಯನ್ ಕುಡುವುದು ಅರಿದಾಯ್ತೆ. ನೀಮ್ ಎಡೆಮಡಗದೆ ಬೆಸೆಪ ತೊಳ್ತುವೆಸನನ್ ಎನಗೆ ಬೆಸಸಿಮ್.

**ಕುಂತಿ:** ಕಂದಾ, ಮನಮ್ ಬೆಳಱಿದೆ ನೀನುಮ್ ಇತ್ತೆ. ಆನುಮ್ ಪೆತ್ತೆನ್. ನಂಬಿದ ನಿನ್ನ ಅನುಜರ್ ನಿನ್ನನ್ ಬೆಸಕೆಯೆ, ನೀನೆ ನೆಲನನ್ ಆಳ್ವುದು. ನಿನ್ನ ಅನುಜರ್ ದುರ್ಯೋಧನನ ಒಲವನ್ ಮುಂದುಗೆಯ್ದು, ನಿನಗಪ್ಪ ಅರಸಮ್ ಬೆಸಕೆಯ್ವರೆ. ಎರಳ್ದೆಸೆಗಮ್ ಕಿಸುರ್ ಇನಿಸಾಗದು. ಮಗನೆ, ನೀನ್ ಒಡಂಬಡವೇಳ್ಕುಮ್.

(ಎಂಬುದುಮ್ ಅದೆಲ್ಲಮನ್ ಕೇಳ್ದು ಕರ್ಣನ್ ಮುಗುಳ್ನಗೆ ನಕ್ಕು...)

**ಕರ್ಣ:** ಭಯಮುಮ್ ಲೋಭಮುಮ್ ಎಂಬ ತಮ್ಮುತೆರಡುಮ್ ಪಾಪಕ್ಕೆ ಪಕ್ಕಾಗೆ, ಪಾಳಿಯನ್ ಒಕ್ಕು, ಆಳ್ದನ ಗೆಯ್ದ ಸತ್ಕೃತಮುಮನ್ ಪಿಂತಿಕ್ಕೆ, ಜೋಳಕ್ಕೆ ತಪ್ಪಿಯುಮ್ ಇನ್ ಬಾಳ್ವುದೆ. ಅಬ್ಬೆ, ಈ ಒಡಲ್ ನಿಲ್ಲದಿಕೆಯಿನ್ ಪೂಣ್ದು, ವಿಖ್ಯಾತಕೀರ್ತಿಯವೋಲ್ ಬಾಳ್ವಂತು ಎನಗೇನ್ ಕಲ್ಪಾಂತರಸ್ಥಾಯಿಯೇ ಪೇಳಿಮ್.

ಮೀಂಗುಲಿಗನೆನ್ ಆಗಿಯುಮ್ ಆನ್ ಅಣಮ್ ಗುಣಮನೆ ಬಿಸುಟೆನಿಲ್ಲ. ನಿಮಗಮ್ ಮಗನಾದಂಗೆ ಎನಗೆ ಬಿಸುಡಲಕ್ಕುಮೆ. ನೀಮ್ ಇನ್ ಎನ್ನೆಡೆಯೊಳ್ ಪಂಬಲನೆ ಬಿಸುಡಿಮ್ ಗಳ.

(ಎಂಬುದುಮ್ ಕೊಂತಿ ಭೋಂಕನೆ ಎರ್ದೆ ತೆಱೆದು...)

**ಕುಂತಿ:** ಅಳಿದೆನ್. ನೆಟ್ಟನೆ ಬೆಟ್ಟನೆ ಇಂತು ನುಡಿವಯ್ ಕಂದ. ನೀನ್ ಪೋಗು. ಸೋಮವಂಶ ಕೆಟ್ಟು ಅಳಿದತ್ತಾಗದೆ. ಎನಗಿನ್ ಬಾಳ್ವಾಸೆ ಎಲ್ಲಿತ್ತೊ. ಮತ್ತಿನ ಮಕ್ಕಳಾಸೆಯುಮನ್ ಬಿಟ್ಟುಳಿದೆನ್.

(ಎಂದಳ್ಗೆ ಕರ್ಣನ್ ಶೋಕಾಗ್ನಿ ಪೊಂಪುಳಿವೋಗುತ್ತಿರೆ...)

**ಕರ್ಣ:** ಅಬ್ಬೆ, ಇನಿತು ಚಿಂತಾಂತರಮ್ ಏನ್ ಪೇಳ್. ನರನ್ ಎಡೆಗೋದೊಡಮ್ ಪುರಿಗಣೆಯನ್ ಪಿಡಿಯೆನ್. ಇನ್ ಏರ್ದೊಡಮ್ ಉಳಿದ ನಿನ್ನ ಮಕ್ಕಳನ್ ಅಳಿಯೆನ್. ಪೆರ್ಜಸಮನೆ ಪಿಡಿದು ಎನ್ನನೆ ರಣದೊಳ್ ಅಳಿವೆನ್ . ಇರದೆ ಅಡಿಯೆತ್ತಿಮ್.

(ಎಂದು ಕೊಂತಿಯನ್ ವಿಸರ್ಜಿಸಿ, ಚಲದ ಚಾಗದ ಕುಲದ ನನ್ನಿಯನ್ ಆವರ್ಜಿಸಿ, ರಾಧೇಯನ್ ಒಳ್ಪಿಂಗೆ ಆಧೇಯಮಾಗಿ ಇರ್ದನ್.)



# ೫೯. ಯುದ್ಧಸಿದ್ಧತೆಯಲ್ಲಿ ಧರ್ಮರಾಯ

(೮೭ ನೆಯ ಗದ್ಯದಿಂದ ೯೩ ನೆಯ ಗದ್ಯ)

## ಪಾತ್ರಗಳು

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

**ಸಂಜಯ:** ಹಸ್ತಿನಾವತಿಯಿಂದ ಬಂದಿರುವ ದುರ್ಯೋಧನನ ದೂತ.

**ಭೀಮ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

# ಯುದ್ಧಸಿದ್ಧತೆಯಲ್ಲಿ ಧರ್ಮರಾಯ

ಇತ್ತ ಪುರುಷೋತ್ತಮನುಮ್ ಕತಿಪಯ ಪ್ರಯಾಣಂಗಳಿಮ್ ವಿರಾಟಪುರ ನಿಕಟವರ್ತಿಯಪ್ಪ ದಿವಿಜಾಪಗಾ ತಟದ ಉಪವನದೊಳ್ ಅರಿನೃಪವನಕ್ಕೆ ಉಪದ್ರವಕಾರಿಯಾಗಿ ನೆಲನ್ ಮೂರಿವಿಟ್ಟಂತೆ ಬಿಟ್ಟಿರ್ದ ಅಜಾತಶತ್ರುವನ್ ಅವನತ ಉತ್ತಮಾಂಗನಾಗಿ ಕಂಡು, ಹಿಮಕೃದ್ವಂಶಜರಪ್ಪ ಪಾಂಡುಸುತರನ್ ಕೆಯ್ಕೊಂಡು...

**ಕೃಷ್ಣ:** **"ನಿನ್ನ ಅಯ್ದು ಬಾಡಮನ್ ಇತ್ತುಮ್ ನಡಪು"** ಎಂದು ಸಾಮಮನೆ ಮುನ್ ಮುಂತಿಟ್ಟೊಡೆ, ಆತನ್ ಪರಾಕ್ರಮಮನ್ ತೋಱಿ ಸಿಡಿಲ್ದು ಪಾಯ್ದು ಅಸುಂಗೊಳ್ವನ್ನೆಗಮ್ ಆನ್ ವಿಶ್ವರೂಪಮನ್ ತೋಱಿದೆನ್. ಇನ್ ಕಡಂಗಿ ರಣದೊಳ್ ನಿನ್ನ ಆರ್ಪುಮನ್ ನೀನ್ ತೋಱು.

(ಎಂಬನ್ನೆಗಮ್, ದುರ್ಯೋಧನನ್ ಅಟ್ಟಿದ ದೂತನ್ ಸಂಜಯನ್ ಎಂಬನ್ ಬಂದು, ಸಕಲ ಸಾಮಂತ ಮಣಿಮಕುಟ ಮರೀಚಿ ಮಸೃಣಿತ ಚರಣಾರವಿಂದನಪ್ಪ ಧರ್ಮನಂದನನ್ ಕಂಡು...)

**ಸಂಜಯ:** ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನ್ ಎಂಬುದನ್, ಇಂದ್ರಜಾಲಮನ್ ತೊಟ್ಟನೆ ತೋಱಿ ಬಂದು ಬರ್ದುಕಾಡಿದನ್. ಇನ್ ಅಳಿಪಿಂದಮ್ ಅಟ್ಟುವ ಅಟ್ಟಟ್ಟಿಗಳನ್ ಬಿಸುಳ್ಪುದು. ಎಮಗಮ್ ತಮಗಮ್ ಮುಳಿಸಿಂದಮ್ ಈಗಳ್ ಅಟ್ಟಟ್ಟಿಗಳ್ ಅಪ್ಪುವು ಎಂದು, ಇದನೆ ದಲ್ ಎಮ್ಮ ಭೂಭುಜನ್ ನುಡಿದು ಅಟ್ಟಿದನ್. ಬಳಸಂಪನ್ನರನ್ ಆಸೆಗೆಯ್ಗೆ. ಚತುರಂಗ ಆನೀಕಮನ್ ಕೂಡಿ, ಕೊಳ್ಗುಳಮನ್ ಗಂಡುಮನ್ ಅಪ್ಪುಕೆಯ್ಗೆ. ಮನಮನ್ ಬಲ್ಲಿತ್ತು ಮಾಳ್ಕೆ ಎಂದು, ಆನ್ ಎಳೆಯನ್ ಕಾದಿದೊಡಲ್ಲದೆ ಈಯೆನ್ ಅಱಿದಿರ್ಕೆ ಎಂದು. ಆ ಕುರುಕ್ಷೇತ್ರಮನ್ ಕಳವೇಳ್ದು ಅಟ್ಟಿದನ್.

ಅಣ್ಮಿ ಸಾಯಿಮ್. ನಿಮ್ಮ ಒಂದು ಬಾಳ್ವಾಸೆಯನ್ ಉಳಿಯಿಮ್..
(ಎಂಬುದುಮ್ ವೃಕೋದರನ್ ಮುಳಿದು ಆಸ್ಫೋಟಿಸಿ...)

**ಭೀಮ:** ಎನಗಮ್ ತನಗಮ್ ವಿಸಸನರಂಗಮ್ ದೊರೆಯಪ್ಪುದು. ತನ್ನೊಳಮ್ ಎನ್ನೊಳಮ್ ಕಾಯ್ಪುಮ್ ಏವಮುಮ್ ಪಸರಿಸಿ ಪರ್ವಿ ಅದಿರ್ದುದು. ಭೀಮನೆಂದೊಡೆ ಆ ಪೆಸರನೆ ಕೇಳ್ದು ಸೈರಿಸದ ನಿನ್ನ ಅರಸನ್ ಕಲಿಯಾಗಿ ನಾಳೆ ವೈರಿಭೂಪ ರುಧಿರ ಆರ್ದ್ರ ಮದೀಯ ಗದಾಭೀಘಾತಮನ್ ಸೈರಿಸುಗುಮೆ.

(ಎಂಬುದುಮ್ ಪರಾಕ್ರಮಧವಳನ್ ಇಂತು ಎಂದನ್.)

**ಅರ್ಜುನ:** ಕಱುಪುಮ್ ಕಾಯ್ಪುಮನ್ ಉಂಟುಮಾಡಿ ದುರ್ಯೋಧನನ್ ತಾಗಿ ತಳ್ತಿಱಿದಂದಲ್ಲದೆ ನೆಲನನ್ ಕೂಡನ್. ಆಜಿಭರಮುಮ್ ಸಾರ್ಚಿತ್ತು. ಮುನ್ನ ಅಱಿದಿಂಗಳ್ ಅದೇನೆಂದು ಜಱುಚುತ್ತುಮ್ ಇರ್ಪುದೆ. ರಣಕ್ಕೆ ಆರ್ ಎನ್ನರ್. ಇಂದು ಈಗಳ್ ಎಂತಱಿಯಲ್ ಬರ್ಕುಮೆ. ಕುರುಕ್ಷೇತ್ರದೊಳ್ ಬರ್ಕೆ. ಬಂದೊಡೆ ಅಱಿಯಲಕ್ಕುಮ್.

(ಎಂಬುದುಮ್ ಯಮನಂದನನ್ ಇಂತು ಎಂದನ್.)

**ಧರ್ಮರಾಯ:** ದುರ್ಯೋಧನನ್ ತಳ್ತಿಱಿಯದೆ ಎಳೆಯನ್ ಕುಡೆನ್ ಎಂದಟ್ಟೆ, ಕಾದಲ್ಕಮ್ ಈಗಳ್ ಕುರುಕ್ಷೇತ್ರಮನ್ ಕಳನಮ್ ಪೇಳ್ದನ್ ಎನೆ, ತಡವಿನ್ನಾವುದು. ಉಗ್ರ ಆಜಿಯೊಳ್ ದೋರ್ವಳದಿಂದಮ್ ತನ್ನ ಮಚ್ಚನ್ ಸಲಿಸಿಯೆ ನೆಲನನ್ ಕೊಳ್ವೆನ್. ಇನ್ ತಳ್ವೆನ್. ಎಮ್ಮೊಳ್ ಕಳನಮ್ ಬೇಡಿ ಎಯ್ದೆ ಕೇಳ್ದನ್. ಬಗೆಯನ್ ಅಱಿಯಲಾಯ್ತು. ಏಳಿಮ್ ಅಂತೆಂದೆ ಪೇಳಿಮ್.

(ಎಂದು ಅಜಾತಶತ್ರು ಶತ್ರುಪಕ್ಷಕ್ಷಯಮ್ ಮಾಡುವ ಉದ್ಯೋಗಮನ್ ಎತ್ತಿಕೊಂಡು ಪ್ರಯಾಣ ಭೇರಿಯನ್ ಪೊಯ್ಸಿದಾಗಳ್...)



# ೬೦. ದ್ರೋಣ ಮತ್ತು ದುರ್ಯೋಧನರ ಮಾತು

(೧ ನೆಯ ಪದ್ಯದಿಂದ ೫ ನೆಯ ಗದ್ಯ)

**ಪಾತ್ರಗಳು**

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ದ್ರೋಣ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

## ದ್ರೋಣ ಮತ್ತು ದುರ್ಯೋಧನರ ಮಾತು

ಶ್ರೀನಾರೀವಲ್ಲಭನ್ ಅಭಿಮಾನಧನನ್ ಹರಿಗನ್ ಆ ಕುರುಕ್ಷೇತ್ರದೊಳ್ ಅಂತೇನು ಮಾಣದೆ ಬಿಟ್ಟುದನ್ ಆ ನೆಗಳ್ದ ಸುಯೋಧನಂಗೆ ಚರರ್ ಅಱಿಪುವುದುಮ್, ಗುರು ಗುರುಸುತ ಶಕುನಿ ಕೃಪ ಅಂಗರಾಜರನ್ ಬರಿಸಿ ಅವನಿಪನ್ ನುಡಿದನ್.

**ದುರ್ಯೋಧನ:** ಪಾಂಡುಸುತರ ಮುನಿಸಿನ ತಱಿಸಲವಿನ ಚಲದ ಬಲದ ಕಲಿತನದ ಅಳವನ್ ಏನ್ ಕೇಳ್ದಿರೆ. ಬಂದು ಕುರುಕ್ಷೇತ್ರದೊಳ್ ಅಳವೊಂದಿರೆ ನಮ್ಮೊಳ್ ಮಿಗೆ ಕಡಂಗಿ ತಳ್ತಿಱಿಯಲ್ಕೆ ಎಂದಾನುಮ್ ಬಂದಿರ್ದರ್. ಇದೇನ್ ದಾಯಿಗತನಮನ್ ಎಮಗೆ ಅವರ್ ತೋಱಿದಪರ್. ಆ ಬಲಕ್ಕೆ ಪಡೆವಳ್ಳನ್ ದಲೆ ಆ ಧೃಷ್ಟದ್ಯುಮ್ನನ್ ಎಂಬ ಒಳ್ಳೆ ಗಡಮ್; ಆ ಪಡೆಯೊಳ್ ಗಂಡನುಮ್ ಆ ಮೊಲನ್ ದ್ರುಪದನುಮ್; ಪೇರೊಟ್ಟೆ ಆ ಮತ್ಸ್ಯನುಮ್; ಅಂತು ಆ ಬಲಕೆ ಆಳ್ದನ್ ಗಡ ಧರ್ಮಜ್ಞನ್ ಆ ಧರ್ಮಜನ್; ಏನ್ ಅಱಿಯಿರೇ ನಾಯಕರ್ ಒಳ್ಳಿದರ್; ಮತ್ ಸೈನ್ಯದೊಳ್ ಕಾದಲ್ಕೆ ಏನ್ ನೆರೆದರೋ ಗಡಮ್.

(ಎಂಬುದುಮ್ ಕುಂಭಸಂಭವನ್ ಇಂತು ಎಂದನ್.)

**ದ್ರೋಣ:** ಕುರುಭೂಮಿಯನ್ ಕಳವೇಳ್ದೈ. ಎಂದಂತೆ ಕಳಕೆ ಅವರ್ ವಂದಿರ್ದರ್. ದೋರ್ವಳ ಚಾತುರ್ವಳ ತತ್ ಸುಹೃದ್ಬಳಮನ್ ಇನ್ನು ಏನ್ ಕೇಳ್ದಪಯ್. ಪಾಂಡವರ್ ಬಳಸಂಪನ್ನರ್. ಉದಗ್ರ ದೈವ ಸಂಪನ್ನರ್. ಇನ್ ಮರುಳ್ ಮಾತನ್ ಉಳಿ. ಸುಯೋಧನಾ, ಗಾಂಗೇಯರ ಪೇಳ್ದ ಅದೊಂದು ತೆಱದಿನ್ ನೀನ್ ಕಾದು.

(ಎಂಬುದುಮ್ ಆ ಮಾತನ್ ಮನದೆಗೊಂಡು ಅಂತೆ ಗೆಯ್ವೆನ್ ಎಂದು ಅನಿಬರುಮನ್ ವಿಸರ್ಜಿಸಿ...)

# ೬೧. ಭೀಷ್ಮ ಮತ್ತು ದುರ್ಯೋಧನರ ಭೇಟಿ

(೫ ನೆಯ ಗದ್ಯದಿಂದ ೧೪ ನೆಯ ಪದ್ಯ)

## ಪಾತ್ರಗಳು

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

# ಭೀಷ್ಮ ಮತ್ತು ದುರ್ಯೋಧನರ ಭೇಟಿ

ನಿಶಾಸಮಯದೊಳ್ ಪತ್ತೆಂಟು ಕೆಯ್ದೀವಿಗೆಗಳ ಬೆಳಗಿನೊಳಮ್ ಕತಿಪಯ ಪರಿಜನ ಪರಿವೃತನಾಗಿ ರಾಜರಾಜನ್ ಸಿಂಧುಜನ ಅರಮನೆಗೆ ವಂದು, ವಾಹನದಿಂದಮ್ ಇಳಿದು ಕುರುಪಿತಾಮಹಂಗೆ ಎಱಗಿ ಪೊಡೆವಡುವುದುಮ್, ಪರಸಿ ಮಂಚದೊಳ್ ಏಱಲ್ ಕರೆದೊಡೆ...

**ದುರ್ಯೋಧನ:** ಒಲ್ಲೆನ್... ಮಹಾಪ್ರಸಾದಮ್ ಇಂತು ಇರ್ಪೆನ್.

(ಎಂದು ಮಣಿಮಯ ಹೇಮಾಸನದೊಳ್ ಕುಳ್ಳಿರ್ದನನ್ ನೋಡಿ...)

**ಭೀಷ್ಮ:** ಕಜ್ಜಮ್ ಪುಟ್ಟಿದೊಡೆ ಎಮಗೆ ಬಳಿಯಟ್ಟದೆ ಈ ಪೊಳ್ತು ಇದಾವುದು ಮನೆವಾಳ್ತೆಗೆ ಎಯ್ತಂದೆ.

(ಎಂದೊಡೆ, ಸುಯೋಧನನ್ ಇಂತು ಎಂದನ್.)

**ದುರ್ಯೋಧನ:** ಹರಿಬಲದಿನ್ ಪಾಂಡವರ್ ಎನ್ನೊಳ್ ಅನುವರಮನ್ ಪೊತ್ತಿಸಿದರ್. ಆನ್ ಕರಮ್ ಅಱಿದು ಅಂದು ಆ ಹರಿಯನ್ ಕೋಡಗಗಟ್ಟಾಗಿರೆ ಕಟ್ಟಿದೊಡೆ ನೀಮೆ ಬಿಡಿಸಿದರಲ್ತೇ. ಕರಿಗಮ್ ಪರಮಾಣುಗಮ್ ಅಂತರಮ್ ಆವುದೊ. ನಿಮಗಮ್ ಅಸುರ ವೈರಿಗಮ್ ಏನ್ ಅಂತರಮ್. ಅಂತೆ ಅಗ್ಗದ ಪರಶುಧರನ್ ನಿಮ್ಮೊಳ್ ಪೊಣರ್ದು, ತಾನ್ ಅದು ಅಂದು ಏನಾದನ್. ಅವರ್ ಅಸುರ ವೈರಿಯನ್ ಒಡಂಬಡಿಮ್ ಪಿಡಿದರ್. ಆನ್ ನಿಮ್ಮಡಿಯನ್ ತೊಳ್ತುವೆಸದಿನ್ ಪಿಡಿದೆನ್. ಅದೇನ್ ತಾನ್ ಎಚ್ಚುಮ್ ಪಿಡಿದೊಡೆ ಅವರ್ ವಂದು ಪಿಡಿದರ್ ಎನ್ನರೆ. ಗೆಲ್ಲಮ್ ನಿಮ್ಮ ದಯೆಯಿನ್ ಶ್ರೀ ಕೊರಲೊಳ್ ಕಟ್ಟಿದ ದೇವಿಯಂತಿರೆ ತೊಟ್ಟಿಲೊಳ್ ತೊಟ್ಟು ಅನಂತರಮ್ ಉರದೊಳ್ ನೆಲಸಿತ್ತು.

ನಿಮ್ಮನ್ ಕರಮ್ ನಚ್ಚಿ ಬಲ್ಲಿದರೊಳ್ ಸಂಗರಮನ್ ಪೊಣರ್ಚಿದೆನ್. ಅದರ್ಕೆ ರಣಾಜಿರದೊಳ್ ರಣಶ್ರೀ ಮಾಣದೆ ಎನ್ನೊಳೆ ಪೊರ್ದುವಂತೆ ನಿಮ್ಮೊಂದು ಅಭಿಪ್ರಾಯಮನ್ ಬೆಸಸಿಮ್.

(ಎಂದು ನುಡಿದ ತನ್ನ ಮೊಮ್ಮನ ನಯದ ವಿನಯದ ನುಡಿಗಳ್ಗೆ ಕರುಣಿಸಿ ಕುರುವೃದ್ಧನ್ ಇಂತು ಎಂದನ್.)

**ಭೀಷ್ಮ:** ನೀನ್ ಪೃಥಾಸುತರನ್ ನೋಯಿಸಲಾಗದು ಎಂದು ಧೃತರಾಷ್ಟ್ರನ್ ನುಡಿದು ಆರ್ತನೇ. ಹರಿ ಭರಂಗೆಯ್ದು ಆರ್ತನೇ. ಆಮ್ ನುಡಿದು ಏನ್ ಆರ್ತೆಮೇ. ನಿನ್ನ ಒರಂಟುತನಮ್ ಕೆಯ್ಗಗ್ಗಳಿವಾಯ್ತು. ಅದಪ್ಪೊಡೆ ಮಹಾಭಾರಾವತಾರಮ್ ರಣೋದ್ಯತನಾಗು ಎಂಬುದನ್ ಎಮ್ಮನ್ ಅನ್ಯರವೊಲ್ ಏನ್ ನೀನ್ ಪ್ರಾರ್ಥಿಲ್ವೇಳ್ಪುದೇ.

(ಎಂಬುದುಮ್)

**ದುರ್ಯೋಧನ:** ಮಹಾಪ್ರಸಾದಮ್.

(ಎಂದು ದುರ್ಯೋಧನನ್ ಪೋದನ್. ಇತ್ತ ಗಾಂಗೇಯನ್ ತನ್ನ ಅಂತರ್ಗತದೊಳ್...)

**ಭೀಷ್ಮ:** ಅಣಿಯರಮ್ ಒದವಿದ ಮುಳಿಸಿನೊಳ್ ಅವರ್ ಅಣಮ್ ಉಱದವರ್ ಎಂದು ರಣದೊಳೆ ಜಯಿಸಲ್ ನಾರಾಯಣನೊಳಮ್ ಉದಾತ್ತನಾರಾಯಣನೊಳಮ್ ಇಂತು ಎತ್ತಿಕೊಂಡ ಗಂಡರುಮ್ ಒಳರೇ. ಎನ್ನನೆ ನಚ್ಚಿದನ್. ಅನುವರಕೆ ಎನ್ನನೆ ಪೂಣಿಸಿದನ್. ಎನಗೆ ಎರಳ್ತಂಡಮುಮ್ ಓರನ್ನರೆ ದಲ್. ಎನ್ನಯ ಮಕ್ಕಳೊಳಮ್ ಮೊಮ್ಮಕ್ಕಳೊಳಮ್ ಎಂತು ಕಾದುವೆನ್. ಮಕ್ಕಳ ಮೊಮ್ಮಕ್ಕಳ ರಥಮ್ ಎಕ್ಕೆಯಿನ್ ಎಡೆಗೊಂಡಡೆ, ಓವದೆ ರಣದೊಳ್ ಮಕ್ಕಳನ್ ಆನ್ ಕೊಂದೊಡೆ, ಪಾವು ತನ್ನಿಕ್ಕಿದ ತತ್ತಿಯನೆ ನೊಣೆವಂತಕ್ಕುಮ್. ಎನ್ನನ್ ಧುರದೊಳ್ ಮಾರ್ಕೊಳ್ವರ್ ನರನಾರಾಯಣರ್ ಇರ್ವರೆ. ಒರ್ವನ್ ಮೊಮ್ಮನ್, ಒರ್ವನ್ ಪರಮಗುರು. ಅವರ್ ಇರ್ವರುಮನ್ ಕಾದು. ಉಳಿದ ರಿಪು ನೃಪಬಲಮನ್ ಅಳಿವೆನ್. (ಎಂದು ತನ್ನೊಳ್ ಬಗೆಯುತ್ತ ಇರ್ಪಿನಮ್...) ❖

## ೬೨. ಭೀಷ್ಮರಿಗೆ ಸೇನಾಧಿಪತಿ ಪಟ್ಟ

(೧೪ ನೆಯ ಗದ್ಯದಿಂದ ೨೫ ನೆಯ ಗದ್ಯ)

### ಪಾತ್ರಗಳು

ದುರ್ಯೋಧನ: ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

ಭೀಷ್ಮ: ಶಂತನು ಮತ್ತು ಗಂಗಾದೇವಿಯ ಮಗ.

ಕರ್ಣ: ಅಂಗರಾಜ್ಯದ ಒಡೆಯ.

ದ್ರೋಣ: ಕೌರವರ ಮತ್ತು ಪಾಂಡವರ ವಿದ್ಯಾಗುರು.

# ಭೀಷ್ಮರಿಗೆ ಸೇನಾಧಿಪತಿ ಪಟ್ಟ

ದುರ್ಯೋಧನನ್ ಸಹಸ್ರ ಕಿರಣೋದಯದೊಳ್ ಅನೇಕ ಸಹಸ್ರ ನರಪತಿ ಪರಿವೃತನುಮಾಗಿ ಮಂದಾಕಿನೀತನೂಜಂಗೆ ಬಳಿಯನಟ್ಟಿ ಬರಿಸಿ, ಮಣಿಮಯ ಪೀಠದೊಳ್ ಕುಳ್ಳಿರಿಸಿ, ದೇವಾಸುರಯುದ್ಧದೊಳ್ ಗುಹಂಗೆ ವೀರಪಟ್ಟಮನ್ ಕಟ್ಟುವ ಪುರಂದರನ ಅಂದಮನೆ ಪೋಲ್ತು. ತುಂಗ ಮೃದಂಗ ಶಂಖಪಟಹ ಧ್ವನಿ ದಿಕ್ತಟದ ಅಂತಮ್ ಎಯ್ದೆ, ವಾರಾಂಗನೆಯರ್ ಚಳಲ್ಲುಳಿತ ಚಾಮರಮನ್ ನೆರೆದು ಇಕ್ಕೆ, ಪಂಚರತ್ನಂಗಳುಮನ್ ಪುದುಂಗೊಳಿಸಿ, ಪೊಂಗಳಸಂಗಳೊಳಿರ್ದ ಪುಣ್ಯ ತೋಯಂಗಳೊಳ್ ಅಳ್ಕಱಿನ್ ಮಿಸಿಸಿ, ಆ ವಿಭು ವೀರಪಟ್ಟಮನ್ ಕಟ್ಟಿದನ್. ಅಂತು ಪರಶುರಾಮನನ್ ಅಂಜಿಸಿದ ವೀರಂಗೆ ವೀರಪಟ್ಟಮನ್ ಕಟ್ಟಿ...

**ದುರ್ಯೋಧನ:** ಪಗೆವರನ್ ಎನ್ನ ಮಂಚದ ಕಾಲೊಳ್ ಕಟ್ಟಿದೆನ್.

(ಎಂದು ಪೊಟ್ಟಳಿಸುವ ಸುಯೋಧನನ ನುಡಿಯನ್ ಅವಕರ್ಣಿಸಿ, ಕರ್ಣನ್ ಇಂತು ಎಂದನ್.)

**ಕರ್ಣ:** ಭಗವತಿಯ ಏಱುವೇಳ್ವ ತೆಱದಿನ್ ಇವರ ಏಱು ಕಥೆಯಾಯ್ತು. ನೀನ್ ಇದನ್ ಬಗೆದು, ಇವರ್ ಇನ್ನುಮ್ ಆಂತು ಇಱಿವರ್ ಎಂದು ವಿಮೋಹಿಸಿ ವೀರಪಟ್ಟಮನ್ ಬಗೆಯದೆ ಕಟ್ಟಿದೈ. ಗುರುಗಳನ್ ಕುಲವೃದ್ಧರನ್ ಆಜಿಗೆ ಉಯ್ದು, ಕೆಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡಡೆ... ಸುಯೋಧನಾ, ಬಂದಪುದೇನ್. ಕಣ್ಗೆಟ್ಟ ಮುದುಪಂಗೆ ಕಟ್ಟಿದ ಪಟ್ಟಮೆ ನೆಟ್ಟನೆ ಸರವಿಗೆ ದೊರೆ. ಪಿಡಿದ ಬಿಲ್ಲೆ ದಂಟಿಂಗೆ ಎಣೆ. ಪಗೆವರ ನಿಟ್ಟೆಲ್ವನ್ ಮುಱಿವೊಡೆ ಎನಗೆ ಪಟ್ಟಂಗಟ್ಟಾ. ಆದಿಯೊಳ್ ಅವರನ್ ಪಿರಿದು ಒಂದು ಆದರದಿನ್ ನಡಪಿದ ಅಜ್ಜರಪ್ಪುದಱಿಂದಮ್, ಇವರ್ ಅವರೊಳ್ ಕಾದರ್.

ಅವರುಮ್ ನೆರೆದು ಇವರೊಳ್ ಕಾದರ್. ನೃಪತೀ ಎಂತು ನಂಬುವೆ.

(ಎಂಬುದುಮ್, ಆ ನುಡಿಗೆ ಸಿಡಿಲ್ದು ಕುಂಭಸಂಭವನ್ ಇಂತು ಎಂದನ್.)

**ದ್ರೋಣ:** ಅಂಗಾಧಿಪತೀ, ವನಮಾತಂಗಗಳಿನ್ ಸಿಂಗದ ಮುಪ್ಪುಮ್, ಅಸುಹೃತ್ ಚತುರಂಗಬಲಂಗಳಿನ್ ನೆಗಳ್ದ ಈ ಗಾಂಗೇಯರ ಮುಪ್ಪುಮ್ ಅದೆಂತು ಇಳಿಕೆವಡೆಗುಮೆ.

ಕುಲಜರನ್ ಉದ್ಧತರನ್ ಭುಜಬಲಯುತರನ್ ಹಿತರನ್ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿನ್ ನಾಲಗೆ ಕುಲಮನ್ ತುಬ್ಬುವವೊಲ್ ಉಱದೆ ನೀನ್ ಕೆಡೆನುಡಿವೈ.

(ಎಂದು ನುಡಿದ ಗುರುವಿನ ಕರ್ಣಕಠೋರ ವಚನಂಗಳ್ಗೆ ಕರ್ಣನ್ ಕಿನಿಸಿ...)

**ಕರ್ಣ:** ಕುಲಮನೆ ಮುನ್ನಮ್ ಉಗ್ಗಡಿಪಿರೇನ್ ಗಳ. ಆಂತು ಮಾರ್ಮಲೆವನನ್ ನಿಮ್ಮ ಕುಲಂಗಳ್ ಅಟ್ಟಿ ತಿಂಬುವೆ. ಕುಲಮ್ ಕುಲಮಲ್ತು; ಚಲಮ್ ಕುಲಮ್; ಗುಣಮ್ ಕುಲಮ್; ಅಭಿಮಾನವೊಂದೆ ಕುಲಮ್; ಅಣ್ಮು ಕುಲಮ್. ಅಣ್ಣ, ಬಗೆವಾಗಳ್ ಈಗಳ್ ಈ ಕಲಹದೊಳ್ ನಿಮ್ಮ ಕುಲಮ್ ಆಕುಲಮನ್ ನಿಮಗೆ ಉಂಟುಮಾಡುಗುಮ್. ಗಂಗಾಸುತನ್ ಪೃಥಾಸುತರನ್ ಗೆಲ್ದೊಡೆ, ತಪಕೆ ಪೋಪೆನ್. ಅವರ್ಗಳ ಕೆಯ್ಯೊಳ್ ಗಾಂಗೇಯನ್ ಅಳಿದೊಡೆ, ಅಹಿತರನ್ ಆನ್ ಗೆಲೆ ತಳ್ತಿಱುವೆನ್. ಅನ್ನೆಗಮ್ ಬಿಲ್ವಿಡಿಯೆನ್.

(ಎಂದು ಕರ್ಣನ್ ಪ್ರತಿಜ್ಞೆಗೆಯ್ವುದುಮ್ ಸಿಂಧುತನೂಜನ್ ಇಂತು ಎಂದನ್.)

**ಭೀಷ್ಮ:** ಕಲಿತನದ ಉರ್ಕು... ಜವ್ವನದ ಸೊರ್ಕು... ನಿಜೇಶನ ನಚ್ಚು... ಮಿಕ್ಕ ತೋಳ್ವಲದ ಪೊಡರ್ಪು. ಕರ್ಣ, ನಿನಗೆ ಉಳ್ಳನಿತು... ಏನ್ ಎನಗೆ ಉಂಟೆ. ಭಾರತಮ್ ಕಲಹಮ್. ಇದಿರ್ಚುವನ್ ಹರಿಗನಪ್ಪೊಡೆ, ನೀನ್ ಏಕೆ ಮೊಕ್ಕಳಮ್ ಪಳಂಚಿ ಅಲೆದಪೆ. ಅಣ್ಣ, ಮಹಾಜಿರಂಗದೊಳ್ ಸೂಳ್ಪಡೆಯಲಪ್ಪುದು ಕಾಣ.

(ಎಂದು ಮತ್ತಮ್ ಇಂತು ಎಂದನ್)

ಮುದುಪರ ಬಿಲ್ಬಲ್ಮೆಯುಮ್, ಇಱಿವ ಅದಟುಮ್ ಬಗೆವಾಗಳ್ ಅಣ್ಣನ್ ಎಂದಂತುಟೆ ತಪ್ಪದು. ಕದನದೊಳ್ ಕರಮೆ ತುಚ್ಛಮಕ್ಕುಮ್. ಇನ್ ಎನ್ನ ನುಡಿದ ನುಡಿಯನ್ ಕೇಳಿಮ್. ಚಕ್ರಮನ್ ಪಿಡಿಯೆನ್ ಎಂಬ ಚಕ್ರಿಯನ್, ಇಳಾಚಕ್ರಮ್ ಭಯಂಗೊಳ್ವಿನಮ್ ಕರಚಕ್ರಮನ್ ಪಿಡಿಯಿಪ್ಪೆನ್. ನರರಥಮ್ ಆ ಕುರುಕ್ಷೇತ್ರದಿನ್ ತೂಳ್ದು, ಪಡುವು ಎಣ್ಗಾವುದು ಪೋಗೆ... ಪೋ... ಗಡ... ಇಸುವೆನ್. ನಿಚ್ಚಮ್ ಪಯಿಂಛಾಸಿರ್ವರನ್ ಧರಾಧೀಶರನ್ ಓವದೆ ಯುದ್ಧದೊಳ್ ಪಡಲ್ವಟ್ಟಂತಿರೆ ಮಾಳ್ಪೆನ್.

(ಎಂದು ಮಹಾಪ್ರತಿಜ್ಞಾರೂಢನಾದ ಗಾಂಗೇಯನ ಅಳವನ್ ಅಳವಲ್ಲದೆ ಪೊಗಳ್ದು, ಅವರನ್ ಬೀಡಿಂಗೆ ಬಿಜಯಮ್ ಗೆಯ್ಯಿಮ್ ಎಂದು ಕಳಿಪಿ, ಮಱುದಿವಸಮ್ ಯುದ್ಧಸನ್ನದ್ಧರಾಗಿ ಪ್ರಯಾಣಭೇರಿಯನ್ ಪೊಯ್ಸಿದಾಗಳ್...)



# ೬೩. ಯುದ್ಧಕ್ಕೆ ದುರ್ಯೋಧನ ಮತ್ತು ಧರ್ಮರಾಯನಿಂದ ವೀಳ್ಯ

(೩೧ ನೆಯ ಗದ್ಯದಿಂದ ೩೪ ನೆಯ ಗದ್ಯ)

## ಪಾತ್ರಗಳು

| | |
|---|---|
| ಉಳೂಕ: | ದುರ್ಯೋಧನನ ದೂತ |
| ಧರ್ಮರಾಯ: | ಪಾಂಡುರಾಜ ಮತ್ತು ಕುಂತಿಯ ಮಗ. |
| ಕೃಷ್ಣ: | ದ್ವಾರಾವತಿ ಪಟ್ಟಣದ ಒಡೆಯ, ಪಾಂಡವರ ಹಿತಚಿಂತಕ. |
| ದುರ್ಯೋಧನ: | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ |
| ಶ್ವೇತ: | ವಿರಾಟರಾಜ ಮತ್ತು ಸುರಥಾದೇವಿಯ ಮಗ. |

# ಯುದ್ಧಕ್ಕೆ ದುರ್ಯೋಧನ ಮತ್ತು ಧರ್ಮರಾಯನಿಂದ ವೀಳ್ಯ

ಅಂತು ದುರ್ಯೋಧನನ್ ತನ್ನ ಬಲದ ಕರಿಘಟೆಗಳ ಕರ್ಣ ತಾಳಾಹತಿಯಿನ್ ಕುಲಗಿರಿಗಳ್ ಅಳ್ಳಾಡೆಯುಮ್, ತನ್ನ ಬಲದ ಪದಾಭಿಘಾತದೊಳಮ್ ಕುಲಗಿರಿಗಳ್ ಜೀಱಿಳ್ದು ಪಾಱೀಳಿಯುಮ್, ತನ್ನ ಬಲದ ಪದೋತ್ಥಿತ ರಜಮೆ ಮಹಾಸಮುದ್ರಂಗಳನ್ ತೆಕ್ಕನೆ ತೀವೆಯುಮ್ ನಿಚ್ಚವಯಣದಿನ್ ಬಂದು, ಕುರುಕ್ಷೇತ್ರದ ಪೂರ್ವ ದಿಗ್ಭಾಗದೊಳ್ ಪ್ರಳಯಮ್ ಮೂರಿವಿಟ್ಟಂತೆ ಬೀಡಮ್ ಬಿಟ್ಟು, ಧರ್ಮಪುತ್ರನಲ್ಲಿಗೆ ಉಳೂಕನೆಂಬ ದೂತನನ್ ಇಂತೆಂದು ಅಟ್ಟಿದನ್.

(ದುರ್ಯೋಧನನು ಹೇಳಿ ಕಳುಹಿಸಿದ್ದ ಮಾತುಗಳನ್ನು, ಅದೇ ರೀತಿ ಮತ್ತೆ ದೂತನು ಹೇಳುತ್ತಾನೆ)

**ಉಳೂಕ:** **"ಉಳ್ಳ ಕೈದುಗಳನ್ ಮಸೆಯಿಸುಗೆ; ಆನೆಗಳನ್ ಅರ್ಚಿಸುಗೆ; ವಿಶುದ್ಧವಾಜಿಗಳನ್ ತಗುಳ್ದು ಪೂಜಿಸುಗೆ; ಆಜಿಗೆ ಜೆಟ್ಟಿಗರಾಗಿ ಕೊಳ್ಳಿವೀಸಿಸುಗೆ; ನಿರಂತರಮ್ ರವಳಿ ಘೋಷಿಸುಗೆ; ಇಂದೆ ಕಡಂಗಿ ಸಾರ್ಚಿ ಬಿಟ್ಟು, ಉಸಿರದೆ ನಿಲ್ವ ಕಾರಣಮ್ ಅದಾವುದೊ. ನೆಟ್ಟನೆ ನಾಳೆ ಕಾಳಗಮ್."**

(ಎಂದು ಆ ದೂತನ್ ಆ ಮಾಳ್ಕೆಯೊಳೆ ಬಂದು ಪೇಳೆ, ಕೇಳ್ದು ಯಮನಂದನನ್ ಇಂತು ಎಂದನ್.)

**ಧರ್ಮರಾಯ:** ಪಗೆ ಮಸೆದಂದೆ ಕೆಯ್ದು ಮಸೆದು ಇರ್ದುವು; ಪೂಜಿಸುವ ಅಂಕದಾನೆ ವಾಜಿಗಳ್ ಎಮಗಿಲ್ಲ; ಜೆಟ್ಟಿಗರೆ ಎನ್ನವೊಡವುಟ್ಟಿದರ್ ನಾಲ್ಕುಮ್ ಆನೆಗಳ್ ಅಲ್ತೆ; ಇವನ್ ಆನ್ ದಲ್... ಈ ರಣದೊಳ್ ಅರ್ಚಿಸಿ ಬಿಟ್ಟಪೆನ್; ಏಕೆ ಮಾಣ್ಬೆನ್. ಇದನ್

ಆವಗಮ್ ಇಂತೆ ನೆಱೆಯೆ ಪೇಳ್. ನಾಳೆಯೆ ಕಾಳೆಗಮ್. ಅಂತೆ ಗೆಯ್ವಮ್ ಆಮ್.

(ಎಂದು ಆ ದೂತನನ್ ವಿಸರ್ಜಿಸಿ, ಪುಂಡರೀಕಾಕ್ಷಂಗೆ ಬಳಿಯನಟ್ಟಿ ಬರಿಸಿ...)

**ಧರ್ಮರಾಯ:** ನಮ್ಮ ಪಡೆಯೊಳ್ ಆರ್ಗೆ ವೀರಪಟ್ಟಮನ್ ಕಟ್ಟುವಮ್ ಪೇಳಿಮ್.

(ಎನೆ)

**ಕೃಷ್ಣ:** ಮಾತಂಗಾಸುರವೈರಿಯಲ್ಲಿ ಬಿಲ್ಲನ್ ಪಡೆದನ್. ಧನುರ್ವಿದ್ಯೆಗೆ ಅಂತು ಆತಂಗೆ ಅಗ್ಗಳಮ್ ಆರುಮ್ ಇಲ್ಲ. ಅದಱಿನ್ ಆ ಶ್ವೇತಂಗಮ್, ಅಂತು ಆ ನದೀಜಾತಂಗಮ್ ಯುದ್ಧಮ್ ದೊರೆ.

(ಎಂದು ಅಱಿದು ಭೂಲೋಕ ವಿಖ್ಯಾಂತಗೆ, ತತ್ ಶ್ವೇತಂಗೆ ಉದಾರನ್ ಧರ್ಮಜನ್ ಅಗ್ಗಳ ವೀರಪಟ್ಟಮನ್ ಕಟ್ಟಿದನ್. ಅಂತು ವಿರಾಟನಂದನನನ್ ಧರ್ಮನಂದನನ್ ಸೇನಾ ನಾಯಕನನ್ ಮಾಡೆ..)

**ಧರ್ಮರಾಯ:** ನಾಳೆ ಕಾಳಗಮ್ ಎಂದು ಪಡೆವಳರ್ ಪೋಗಿ ಸಾಱಿಮ್. (ಎಂಬುದುಮ್ ಅವರ್ ಬೀಡುವೀಡುಗಳ್ಗೆಲ್ಲಮ್ ಸಾಱಿದಾಗಳ್...)



# ೭೪. ಸೇನಾ ಶಿಬಿರದಲ್ಲಿ ಕೇಳಿ ಬಂದ ಸೈನಿಕರ ಮಾತು

**(೩೭ ನೆಯ ಪದ್ಯದಿಂದ ೪೬ ನೆಯ ಪದ್ಯ)**

ಧೃತಧವಳ ವಸನರ್, ಆರಾಧಿತ ಶಿವರ್, ಅರ್ಚಿತ ಸಮಸ್ತ ಶಸ್ತ್ರರ್, ನೀರಾಜಿತ ತುರಗರ್, ಕೆಲರ್ ಅತಿರಥ ಸಮರಥ ಮಹಾರಥ ಅರ್ಧರಥರ್ಕಳ್ ಒಪ್ಪಿದರ್. ಉಡಲುಮ್ ತುಡಲುಮ್ ವಸ್ತ್ರಮ್ ತುಡುಗೆಯನ್, ಆನೆಯುಮನ್ ಅರ್ಥಿಸಂತತಿಗೆ ಈಯಲ್ ಬಿಡುವೊನ್ನುಮನ್ ಆಳ್ಗೆ ಅಟ್ಟುವ ತೊಡರೊಳ್ ಕೆಲಬರ್ ಅರಸು ಮಕ್ಕಳ್ ತೊಡರ್ದು ಇರ್ದರ್.

## ಸೇನಾ ಶಿಬಿರ–೧

**ಪಾತ್ರಗಳು**

೧. ಸೈನಿಕ

೨. ರಾಜ

ಆ ಪ್ರಸ್ತಾವದೊಳ್ ಒರ್ವನ್ ತನ್ನ ದೋರ್ವಲದ ಅಗುರ್ವಿನೊಳ್ ಉರ್ವೀಪತಿಯನ್ ಇಂತು ಎಂದನ್.

**ಸೈನಿಕ:** ವಿರೋಧಿ ಸಾಧನ ಘಟಾಘಟಿತ ಆಹವದಲ್ಲಿ ನಾಳೆ ನಿನ್ನ ಕಟ್ಟಾಳಿರೆ ಮುಂಚೆ ತಾಗದೊಡಮ್, ಅಳ್ಕುಱಿ ತಾಗಿ ವಿರೋಧಿ ಸೈನ್ಯ ಭೂಪಾಳರನ್ ಒಂದೆ ಪೊಯ್ಯದೊಡಮ್, ಈ ತಲೆ ಪೋದೊಡಮ್, ಅಟ್ಟೆ ಕಟ್ಟಾಳನೆ ಅಟ್ಟಿ ಮುಟ್ಟಿ ತಳ್ತಿಱಿಯದಿರ್ದೊಡಮ್, ಮಹೀಪತೀ ಆನ್ ಅಂಜಿದೆನ್.

(ಎಂದು ತನ್ನ ಮನದ ಪೊಡರ್ಪುಮನ್ ಕೂರ್ಪುಮನ್ ಉಂಟುಮಾಡಿ ನುಡಿದನ್.)

## ಸೇನಾ ಶಿಬಿರ–೨

**ಪಾತ್ರಗಳು**

೧. ಸೈನಿಕ

೨. ರಾಜ

ಮತ್ತೊರ್ವನ್ ತನ್ನನ್ ಆಳ್ದನ್ ಪೆರ್ಚಿ ಪೊರೆದುದರ್ಕೆ ಕರಮ್ ಮೆಯ್ವೆರ್ಚಿ ನುಡಿದನ್..

**ಸೈನಿಕ:** ಒದವಿದ ನಿನ್ನದೊಂದು ದಯೆ ಪಿರಿದೋ... ಮೇಣ್ ನೆಗಳ್ದ ಎನ್ನ ಗಂಡುಮ್ ಆದ ಅದಟುಮ್ ಅಳುರ್ಕೆಯುಮ್ ಪಿರಿದೊ... ಸಂದೆಯಮ್ ಆದಪುದು. ಇಂತಿದು ಇಲ್ಲಿ ತೂಗಿದೊಡೆ ಅಱಿಯಲ್ಕೆ ಬಾರದು. ಅದು ಕಾರಣದಿನ್ ರಿಪುಭೂಪ ದಂತಿದಂತದ ತೋಲೆಯೊಳ್ ಭೂಪತಿ ಪರಾಕ್ರಮದಿನ್ ಎನ್ನನೆ ತೂಗಿ ತೋಱಿಸೇ..

(ಎಂದು ತನ್ನ ಸೆರಗುಮ್ ಬೆರಗುಮಿಲ್ಲದ ಕಲಿತನಮನ್ ಅಱಿಯೆ ನುಡಿದನ್.) ❖

## ಸೇನಾ ಶಿಬಿರ–೩

**ಪಾತ್ರಗಳು**

೧. ಸೈನಿಕ

೨. ರಾಜ

ಮತ್ತಮ್ ಒಂದೆಡೆಯೊಳ್ ಒರ್ವ ವೀರಭಟನ್ ಉದಾರ ವೀರ ರಸರಸಿಕನಾಗಿ..

**ಸೈನಿಕ:** ಕುದುರೆಯನ್ ಏಱಿದನ್ ಬೆರಸು ಸೌಳೆನೆವೋಗಿರೆ ಪೊಯ್ದುಮ್, ಎಯ್ದೆ ಕಟ್ಟಿದಿರೊಳೆ ನೂಂಕಿದ ಆನೆಗಳ ಕೋಡುಗಳನ್ ಬಳೆವೋಗೆ ಪೊಯ್ದುಮ್, ಆಂತ ಅದಟರನ್ ಒಂದೆ ಪೊಯ್ದುಮ್, ಎರಡುಮ್ ಬಲಮ್ ಎನ್ನನೆ ನೋಡೆ, ತಕ್ಕಿನ ಎನ್ನ ಅದಟುಮನ್ ಎನ್ನ ವೀರಮುಮನ್ ಆಜಿಯೊಳ್ ಎನ್ನ ಅರಸಂಗೆ ತೋಱುವೆನ್..

(ಎಂದು ಅತಿರಭಸ ರಣವ್ಯಸನಮನ್ ಆತ್ಮೀಯ ಶಾಸನಾಯತ್ತಮ್ ಮಾಡಿದನ್.) ❖

## ಸೇನಾ ಶಿಬಿರ–೪

**ಪಾತ್ರಗಳು**

೧. ಸೈನಿಕ

೨. ರಾಜ

ಮತ್ತೊರ್ವನ್ ಅತ್ಯುಗ್ರಮಂಡಳಾಗ್ರಮನ್ ಅನುಗೆಯ್ದು ವೀರಗ್ರಹಗ್ರಸ್ತನಾಗಿ...

**ಸೈನಿಕ:** ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ, ಬಾಳ್ ಬಾಳೊಳೆ ಪಳಂಚಿ ಮಾರ್ಕಿಡಿವಿಡೆ, ದೆಸೆದೇವತೆಗಳ್ ನೋಡಲಂಜಿ ಪೆಱಪಿಂಗೆ, ತೋಳತೀನ್ ಕಿಡೆ, ನಲಿದು ಒಂದೆರಳ್ಕುದುರೆ ಅಟ್ಟೆಯುಮ್ ಒಂದೆರಡಾನೆ ಅಟ್ಟೆಯುಮ್ ತೊಡರ್ದು ಒಡನೆ ಆಡೆ, ತಳ್ತು ಇಱಿಯದಿರ್ದೊಡೆ ಜೋಳಮನ್ ಎಂತು ನೀಗುವೆನ್.)

(ಎಂದು ನಿಜಭುಜವಿಜಯಮನ್ ಅಪ್ಪುಕೆಯ್ದು ನುಡಿದನ್...)



## ಸೇನಾ ಶಿಬಿರ–೫

**ಪಾತ್ರಗಳು**

೧. ಸೈನಿಕ

೨. ರಾಜ

ಅಲ್ಲಿಯೇ ಮತ್ತೊರ್ವನ್..

**ಸೈನಿಕ:** ಸುರಲೋಕಮ್ ದೊರೆಕೊಳ್ವುದು ಒಂದು; ಪರಮ ಶ್ರೀಲಕ್ಷ್ಮಿಯುಮ್ ಬರ್ಪುದು; ಆದರದಿನ್ ದೇವನಿಕಾಯದೊಳ್ ನೆರೆವುದು ಒಂದು; ಉತ್ಸಾಹಮುಮ್; ತನ್ನ ಮೆಯ್ಸಿರಿ ಭಾಗ್ಯಮ್ ನೆರಮಪ್ಪುದು; ಒಂದೆ ರಣದೊಳ್ ಆಜಿಯನ್ ಗೆಲ್ದು ಸಂಗರದೊಳ್ ತಳ್ತು ಜೋಳದ ಪಾಳಿಯನ್ ನೆರಪಿದನ್ ಗಂಡನ್. ಪೆಱನ್ ಗಂಡನೇ.

(ಎಂದು ನುಡಿದನ್.)



## ಸೇನಾ ಶಿಬಿರ–೬

**ಪಾತ್ರಗಳು**

೧. ಸೈನಿಕ

೨. ಶಿಬಿರದಲ್ಲಿರುವ ಸೈನಿಕರು

ಮತ್ತೊರ್ವನ್ ಆಸ್ಥಾನದೊಳ್....

**ಸೈನಿಕ:** ಮಾಱಾಂತ ಬಲಮ್ ತವೆ ಕಱುತ್ತು ಇಱಿದು, ತನ್ನಾಳ್ದನ್ ಕರಮ್ ಮೆಚ್ಚೆ ಗೆಲ್ದವನನ್, ಶ್ರೀವಧು ಪತ್ತುಗುಮ್. ಮಡಿದನನ್ ದೇವಾಂಗನಾನೀಕಮ್ ಉತ್ಸವದಿಂದೆ ಉಯ್ಯುಗುಮ್. ಎಂತುಮ್ ಸುಭಟಂಗೆ ಇಂಬು. ಇಂತಪ್ಪುದನ್ ಕಂಡು ಅಂಜುವನ್ ಏಕಂಜುವನ್.

(ಎಂದು ಪೆರ್ಚಿ ನುಡಿದನ್. ಅಂತು ನುಡಿದು ಎರಡುಮ್ ಬಲಂಗಳುಮ್ ತಂತಮ್ಮ ವೀರಮನ್ ಚಾಗಮನ್ ಮೆಱೆದು, ತಮ್ಮ ಕೆಯ್ದುಗಳನ್ ಅರ್ಚಿಸಿ, ದರ್ಭಶಯನಮ್ ಮಾಡಿ ಪಲ್ಲನ್ ಸುಲಿದು, ಶಸ್ತ್ರಸಂಗ್ರಹರಾಗಿ ಪಲರುಮ್ ವೀರಭಟರ್ ತಮ್ಮನ್ ತಾಮೆ ಪರಿಚ್ಛೇದಿಸಿರ್ದರ್.)



## ಸೇನಾ ಶಿಬಿರ–೭

**ಪಾತ್ರಗಳು**

೧. ಸೈನಿಕ

೨. ಸೈನಿಕನ ನಲ್ಲೆ

ಅತ್ತ ಮತ್ತಮ್ ಒರ್ವನ್ ತನ್ನ ನಲ್ಲಳೊಳ್ ಇಂತು ಎಂದನ್..

**ಸೈನಿಕ:** ಈ ಪೊಳ್ತೆ ಪೊಳ್ತು. ನಾಳೆ ದೇವಲೋಕದ ಕನ್ಯಕೆಯರ ಓಲಗದೊಳ್ ಇರ್ಪೆನ್.

(ಎಂದು ನುಡಿಯೆ..)

ನಲ್ಲೆ: ನೀನ್ ಎಂದ ಅಂತು ಪೋಗಲ್ ತೀರದು. ನಾಳೆ ಮಗುಳ್ದು ಬಂದು ಎನ್ನೊಳ್ ನೆರೆವೆ.

(ಎಂದು ಪೇಳೆ..)

ಸೈನಿಕ: ನಿನಗೆ ಅಱಿವುಂಟೆ..

(ಎಂದು ಕೇಳೆ)

ನಲ್ಲೆ: ಎನ್ನ ಓಲೆ ಭಾಗ್ಯಮ್ ಉಂಟು.

(ಎಂದಳ್)



## ಸೇನಾ ಶಿಬಿರ–೮

### ಪಾತ್ರಗಳು

೧. ಸೈನಿಕ

೨. ಸೈನಿಕನ ಹೆಂಡತಿ

ಮತ್ತಮ್ ಒಂದು ಎಡೆಯೊಳ್ ಒರ್ವಳ್ ದರ್ಭಶಯನಸ್ಥನಾದ ನಿಜಪ್ರಾಣೇಶ್ವರನ ಪರಿಚ್ಛೇದಮನ್ ಅಱಿದು ತನ್ನ ಸಾವನ್ ಪರಿಚ್ಛೇದಿಸಿ..

ಸೈನಿಕನ ಮಡದಿ: ತಾನ್ ಗಡ... ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದು ಇರ್ಪನ್. ಇಲ್ಲಿ ಮಾಣ್ದು ಆನ್ ಇರ್ಪೆನೆ ಗಡಮ್. ಅಂತು ಬೆಳ್ಳೆನೆ. ಮುನ್ನಮೆ ಪೋಗಿ, ದೇವಲೋಕದೊಳ್ ಅಧೀಶನನ್ ಆನ್ ಇದಿರ್ಗೊಳ್ವೆನ್. ಓವೊ... ಸಗ್ಗಂಗಳೊಳ್ ಇರ್ಪ ದೇವಡಿತಿ ತೊಳ್ತರೊಳ್ ಅಳ್ತಿಯನ್ ಆಗಲ್ ಈವೆನೇ.

(ಎಂದು ಕೈದವಮಿಲ್ಲದ ನಲ್ಮೆಯನ್ ನಾಲಗೆಯ ತುದಿಗೆ ತಂದು ನುಡಿದಳ್.)



## ಸೇನಾ ಶಿಬಿರ–೮

### ಪಾತ್ರಗಳು

೧. ಸೈನಿಕ

೨. ಸೈನಿಕನ ಹೆಂಡತಿ

ಮತ್ತೊರ್ವಳ್ ತನ್ನಾಣ್ಮನ ದೋರ್ವಲದ ಅಗುರ್ವನ್ ನೆಚ್ಚಿ ...

**ಸೈನಿಕನ ಮಡದಿ:** ಜಲಧಿಯೊಳಾದ ಮುತ್ತುಗಳ್ ಅವೇನ್ ಪೊಸತಾದುವೆ. ನಿನ್ನ ತೋಳ ಬಾಳೊಳೆ ಬಲಗರ್ವದಿನ್ ತೆಗೆದ ಉದಗ್ರ ವಿರೋಧಿ ಮದೇಭ ಮಸ್ತಕ ಸ್ಥಳ ಜಳರಾಶಿಯೊಳ್ ಬಳೆದ ನಿರ್ಮಳ ನಿರ್ವ್ರಣ ವೃತ್ತ ಮೌಕ್ತಿಕಾವಳಿಯನೆ ತರ್ಪುದು.

(ಎಂದು ಒರ್ವಳ್ ನಿಜೇಶನನ್ ನುಡಿದು ಅಳ್ಕಱೊಳ್ ಆಱಿಸಿದಳ್. ಅಂತು ಉಭಯ ಬಲಂಗಳೊಳಮ್ ವೀರಜನಜನಿತ ಆಳಾಪಂಗಳ್ ನೆಗಳೆ...)



# ೬೫. ಕೌರವ ಪಾಂಡವ ಸೇನೆಗಳ ರಚನಾ ವಿನ್ಯಾಸ

(೫೨ ನೆಯ ಗದ್ಯದಿಂದ ೫೯ ನೆಯ ಗದ್ಯ)

## ಪಾತ್ರಗಳು

**ಧರ್ಮರಾಯ :** ಪಾಂಡುರಾಜ ಮತ್ತು ಕುಂತಿಯ ಮಗ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

## ಕೌರವ ಪಾಂಡವ ಸೇನೆಗಳ ರಚನಾ ವಿನ್ಯಾಸ

ಆಗಳ್ ಕೌರವಬಲದ ಸೇನಾನಾಯಕನ್ ಗಾಂಗೇಯನ್ ಅಡ್ಡಮಾಗೆ ತನ್ನೊಡ್ಡಿದ ಮಕರವ್ಯೂಹದ ಮೊನೆಯೊಳ್ ಸುತ್ತಿಱಿದು, ಎತ್ತಿದ ಪೊನ್ನ ತೊಳಪ ಪಳಯಿಗೆಗಳುಮ್, ಮೆಱೆವ ಬೆಳ್ಳಿಯ ರಥಮುಮ್, ಆ ರಥದೊಳ್ ಒಡಂಬಡೆ ಪೂಡಿದ ಕುದುರೆಗಳುಮ್, ಜೋಲ್ದ ಪುರ್ವನ್ ಎತ್ತಿ ಕಟ್ಟಿದ ಲಲಾಟಪಟ್ಟದೊಳ್ ಇಟ್ಟಳಮ್ ಒಪ್ಪುವ ಬೀರವಟ್ಟಮುಮ್ ಅಸದಳಮ್ ಎಸೆಯೆ...

ದಿವ್ಯಕವಚಮನ್ ತೊಟ್ಟು **'ಪರಶುರಾಮನ್‌ಬಾಳ್ಗೆ'** ಎಂದು ಪ್ರಚಂಡ ಕೋದಂಡಮನ್ ಕೊಂಡು, ಪಾಂಡವಬಲಮನ್ ಮಾರ್ಕೊಂಡು ನಿಂದಾಗಳ್, ಶ್ವೇತನುಮ್ ಆ ವ್ಯೂಹಕ್ಕೆ ಪ್ರತಿವ್ಯೂಹಮಾಗಿ ಸೂಚೀವ್ಯೂಹಮನ್ ಒಡ್ಡಿ, ಕನಕಕವಚ ಅಲಂಕೃತ ಶರೀರನುಮ್, ಆರೂಢ ಸಮರರಸನುಮ್, ಉಪಾರೂಢ ಕನಕರಥನುಮ್ ಆಗಿ ಕೈಲಾಸವಾಸಿಗೆ ಪೊಡೆವಟ್ಟು ಬಿಲ್ಲನ್ ಕೊಂಡು ಗಂಗಾಸುತಂಗೆ ಅದಿರದೆ ಇದಿರ್ಚಿ ನಿಂದಾಗಳ್;

ಶ್ವೇತನ ಗಂಗಾಜಾತನ ಮಾತನೆ ಪಾರ್ದು ಎರಡುಮ್ ಒಡ್ಡಣಮ್ ಕಾದಲ್ಕೆಂದು ಈ ತೆಱದಿನ್ ಕೆಸಱ ಕಡಿತದ ತೆಱದಿನ್ ಭೂತಳಮ್ ಅಳ್ಳಾಡೆ ಒಡ್ಡಿ ನಿಂದುವು. ಆಗಳ್ ಧರ್ಮಪುತ್ರನ್ ಪುರುಷೋತ್ತಮನ ಮೊಗಮನ್ ನೋಡಿ...

**ಧರ್ಮರಾಯ:** ಕೌರವ ಬಲದ ಒಡ್ಡಣದ ನಾಯಕರ್ ಇವರ್ ಆರ್.

(ಎಂದು ಬೆಸಗೊಳೆ...)

**ಕೃಷ್ಣ:** ಮಕರ ಮಸ್ತಕ ಭೂಮಿಯೊಳ್ ಯುದ್ಧಸನ್ನದ್ಧನಾಗಿ, ನಿಜ ರಜತರಥಮ್ ಕೆಂಬಣ್ಣದ ಕುದುರೆಗಳೊಳ್ ಒಡಂಬಡೆ ಅಗುರ್ವು ಉರ್ವರೆಯನ್ ತಿಂಬೆ, ಕಳಶ ಧ್ವಜಮ್ ಮಿಳಿರ್ದು ಅಂಬರಮನ್ ಬಳಸೆ ನಿಂದನ್ ಆತನ್ ದ್ರೋಣನ್; ಆತನ ಸಾರೆ ಕಮಂಡಲು ಕೇತನಮ್ ಅಂಬರಮನ್ ಅಡರೆ ಚತುರಂಗ

ಬಲೋಪೇತನ್, ಅತಿಧವಳರಥನ್, ಅಭಿಜಾತನ್, ಕ್ಷತ್ರಿಯರನ್ ಉಱದ ಆತನ್ ಕಲಿಕೃಪನ್; ಮತ್ತೆ ಇತ್ತ ಗಾಂಗೇಯನ ದಕ್ಷಿಣೋಪಾಂತದೊಳ್ ಕರ್ಗನೆ ಕನಿತ ಸಮದ ಗಜಘಟಾಟೋಪದ ನಡುವೆ ಸರದದ ಮುಗಿಲನೆ ಬಿಡದೆ ಅನುಕರಿಸುವ ಧವಳಾಶ್ವದಿಂದಮ್ ಎಸೆದು ಲೋಹರಥಮದುಮ್ ಪುಲಿಯ ಪಳಯಿಗೆವೆರಸು ತಳತ್ತಳಿಸೆ ನಿಂದನ್ ಆತನ್ ಶಲ್ಯನ್: ಮತ್ತೆ ಇತ್ತ ಗಂಗಾಸುತನ ವಾಮಭಾಗದೊಳ್ ಅಂಬರಭಾಗಮ್ ಆ ತಟ್ಟಿ ಮೆಡಱಿದಂತಾಗಿ ತನ್ನ ರಥದೊಳ್ ಒಟ್ಟಿದ ಕೆಯ್ದುಗಳ ಬೆಳಗೆ ಬೆಳಗಾಗೆ, ಕಱೆ ಕೊರಲೊಳ್ ಕಣ್ ನೊಸಲೊಳ್ ಪೆಱೆ ಮಕುಟಾಗ್ರದೊಳ್ ಉಗ್ರಧನು ಕರಾಗ್ರದೊಳ್ ಇರೆ ಹರಿಕೇತು ನಭದೊಳ್ ಅಳ್ಳಿಱಿಯೆ ಮಿಱುಗುವ ಚೆಂಬೊನ್ನ ರಥದನ್ ಅಶ್ವತ್ಥಾಮನ್;

ಆ ರುದ್ರವತಾರನ ಕೆಲದೊಳ್ ಕಿಕ್ಕಿಱಿಗಿಱಿದ ತಳೆದುಱುಗಲ ನಡುವೆ ಪೊನ್ನರಥಮನ್ ಏಱಿ ನಿಂದನ್ ಭೂರಿಶ್ರವನ್; ಆತನ ಕೆಲದೊಳ್ ಜಾಳಪಟಮ್ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರಣಿಯ ನಡುವೆ ಪೊನ್ನ ರಥಮನ್ ಏಱಿ ನಿಂದಾತನ್ ಎನ್ನ ತಮ್ಮನ್ ಕೃತವರ್ಮನ್; ಆತನ ಕೆಲದೊಳ್ ಒಂದು ಅಕ್ಷೋಹಿಣೀ ಬಲಮ್ ಬೆರಸು ಸುತ್ತಿಱಿದು ಕನಕ ದಂಡ ಮಂಡಿತ ವಿಚಿತ್ರ ಆತಪತ್ರಂಗಳ ನಡುವೆ ಮಣಿಮಕುಟ ಮರೀಚಿಗಳ್ ಪೊಳೆಯೆ ನಾನಾ ವಾಹನಂಗಳನ್ ಏಱಿ ನಿಂದರ್ ಜಯತ್ಸೇನ ಕಾಂಭೋಜ ಸುದಕ್ಷಿಣ ದಂಡಧಾರ ಶತದಂಡಧರರ್; ಅವರ ಕೆಲದೊಳ್ ನೀಳ ಶ್ರುತಾಯುಧ ನಿಯುತಾಯುಧ ಅಚ್ಯುತಾಯುಧರ್ ಎಂಬರ್;

ಅವರ ಕೆಲದೊಳ್ ನಿಲೆ ಬಲದ ಸೆಱೆಕೋಲೊಳ್ ಒಂದು ಅಕ್ಷೋಹಿಣೀಬಲಮ್ ಬೆರಸು ಅಯ್ವತ್ತುಸಾಸಿರ ಮದದಾನೆವೆರಸು ನಿಂದನ್ ಸುಯೋಧನನ ಅಣುಗ ಮಯ್ದುನನ್ ಸಿಂಧುದೇಶಾಧೀಶ್ವರನ್ ಜಯದ್ರಥನ್; ಆತನ ಕೆಲದೊಳ್ ಮಕರಮಸ್ತಕಭೂಮಿಯೊಳ್ ಕರಟತಟಗಳಿತ ಮದಜಳ ಧಾರಾಪೂರ ಪರಿಪ್ಲಾವಿತ ಸಕಳ ಭೂತಳಮಪ್ಪ ನಾಲ್ಕು ಲಕ್ಕ

ಭದ್ರಹಸ್ತಿಯುಮನ್ ಒಂದುಮಾಡಿ ಘಟೆಯ ಮೊನೆಯೊಳ್ ದಿಗ್ಗಜೇಂದ್ರಮ್ ಎನಿಸಿದ ಸುಪ್ರತೀಕಗಜೇಂದ್ರಮನ್ ಏಱಿ ನಿಂದಾತನ್ ಇಂದ್ರನ ಕೆಳೆಯನ್ ಭಗದತ್ತನ್; ಆತನ ಕೆಲದೊಳ್ ಒಂದು ಲಕ್ಕ ಕುದುರೆಯುಮ್ ಅಱುವತ್ತು ಸಾಸಿರ ರಥಮುಮ್ ಒಂದು ಅಕ್ಷೋಹಿಣಿಯ ಕಾಲ್ವಾಳ್ವೆರಸು ನಿಂದರ್ ಸೋಮದತ್ತ ಬಾಹ್ಲೀಕರ್;

ಅವರ ಕೆಲದೊಳ್ ದೇವೇಂದ್ರಂಗೆ ಪಗೆವರಾಗಿ ವಿಕ್ರಮಾರ್ಜುನನ ಕೆಯ್ಯೊಳ್ ಸತ್ತ ನಿವಾತಕವಚ ಕಾಳಕೇಯ ಪೌಳೋಮ ತಳತಾಳುಕರೆಂಬ ದೈತ್ಯರ್ ವೃದ್ಧ ವೈರಮನ್ ನೆರೆದು ತ್ರಿಗರ್ತಾಧೀಶ ಸುಶರ್ಮ ಪ್ರಭೃತಿಗಳುಮ್ ಸಂಸಪ್ತಕರುಮಾಗಿ ಪುಟ್ಟಿ ಮೂರುಕೋಟಿಯುಮ್ ಅಱುವತ್ತು ಸಾಸಿರ ದೈತ್ಯಪ್ರಧಾನ ನಾಯಕರುಮ್ ಅರ್ಜುನನೊಳ್ ಕಾದುವ ಬೆಸನನ್ ದುರ್ಯೋಧನನೊಳ್ ಬೇಡಿ ಪಡೆದು ಪದಿನೆಂಟು ಕೋಟಿ ರಥಂಬೆರಸು ಬೇಱೊಡ್ಡಿ ನಿಂದರ್; ಮತ್ತೆ ಇತ್ತ ಚತುರಂಗ ಬಳಜಳನಿಧಿಯ ನಡುವೆ ಕಳಿಂಗರಾಜ ವಂಗ ಕೊಂಗ ದೇಶಾಧೀಶ್ವರರ್ ಎಣ್ಬತ್ತು ಸಾಸಿರ ಗಜಘಟೆಗಳುಮ್ ಮೂಱು ಲಕ್ಕ ರಥಮುಮ್ ಅಱುವತ್ತು ಕೋಟಿ ಪದಾತಿಯುಮ್ ಬೆರಸು ನಿಂದರ್;

ಮತ್ತಮ್ ಕ್ಷೇಮಧೂರ್ತಿಯುಮ್ ಭೀಮಸೇನನ ಕೆಯ್ಯೊಳ್ ಸತ್ತ ಬಕಾಸುರ ಜಟಾಸುರನ ಮಕ್ಕಳ್ ಅಳಂಭೂಷ ಹಲಾಯುಧ ಮುಸಲಾಯುಧ ಕಾಳ ನೀಳ ಪ್ರಮುಖ ರೂಕ್ಷರಾಕ್ಷಸಬಲಮ್ ಬೆರಸು ಸುತ್ತಿಱಿದು ಬಳಸಿಯುಮಿರೆ, ದುಶ್ಶಾಸನನ್ ಮೊದಲಾಗೆ ನೂರ್ವರ್ ತಮ್ಮಂದಿರುಮ್, ಲಕ್ಕಣನ್ ಮೊದಲಾಗೆ ನೂರ್ವರ್ ಮಕ್ಕಳುಮ್, ಅಱುವತ್ತು ಸಾಸಿರ ರಥಮುಮ್, ಪದಿನೆಂಟು ಸಾಸಿರ ಮದಾಂಧಗಂಧ ಸಿಂಧುರಂಗಳುಮ್ ಬೆರಸು ಪೊಯ್ವ ಪಂಚಮಹಾಶಬ್ದಂಗಳ್ ಕಾಳನೀಳಜಳಧರಂಗಳ್ ಮೊಳಗುವಂತೆ ಮೊಳಗೆ, ಗಗನತಳಮ್ ತಳಿರ್ತಂತೆ ಪೊಳೆದು ಮಿಳಿರ್ವ ಪಾಳಿಮಹಾಧ್ವಜಂಗಳುಮ್ ಗಗನಸಿಂಧು ಫೇನ ಪಟಳ ಶಂಖ ಸಂಕಾಶ ಪಾಂಡುಛತ್ರಚಾಮರಂಗಳುಮ್ ಪೆಱವುಮ್

ರಾಜಚಿಹ್ನೆಂಗಳುಮ್ ಎಸೆಯೆ ಕನಕಗಿರೀಂದ್ರ ರುಂದ್ರ ಶಿಖರಸ್ಥಿತ ಬಾಳದಿನೇಶಬಿಂಬಮಮ್ ನೆನೆಯಿಸೆ, ತನ್ನ ಪೊನ್ನರಥದೊಳ್ ನೆಲಸಿರ್ದು ವಿಳಾಸದಿಂದೆ ಭೀಮನ ಮೊನೆಯನ್ ಆರಯಲ್ ವನೀಪಕರನ್ ಅಟ್ಟಿ ಫಣೀಂದ್ರ ಕೇತನನ್ ಯುಗಾಂತವಾರ್ಧಿ ಘೋಂಕನೆ ತಳರ್ವದಂದದಿನ್ ತಳರಳ್ ಅಟ್ಟಿಪನಲ್ತೆ ಸೆಱೆಕೋಲ್ ಸೆಱೆಕೋಲಿನ್ ಪತ್ತಱುಗಾವುದದ ಬಲದ ಪವಣಿನ್ ಅನಿತು ಇನಿತೆಂದು ಆನ್ ಅಱೆಯೆನ್. ಅವನಿಪತೀ, ದೇವಾಸುರದೊಳಮ್ ಆನ್ ಇನಿತು ಬಲಮನ್ ಅಱೆಯೆನ್. ನಾಮುಮ್ ನಮ್ಮ ಬಲದ ನಾಯಕರನ್ ಎಡೆಯಱೆದು ಒಡ್ಡುವಮ್.

(ಎಂದು, ದ್ರೋಣನ ಮೊನೆಗೆ ಅಱುವತ್ತು ಸಾಸಿರ ರಥಮ್ ಬೆರಸು ಧೃಷ್ಟದ್ಯುಮ್ನನುಮನ್; ಅಶ್ವತ್ಥಾಮನ ಮೊನೆಗೆ ನಾಲ್ವತ್ತು ಸಾಸಿರ ರಥಮ್ ಬೆರಸು ಶಿಖಂಡಿಯುಮನ್; ಕೃತವರ್ಮನ ಮೊನೆಗೆ ಒಂದು ಅಕ್ಷೋಹಿಣೀ ಬಲಮ್ ಬೆರಸು ಸಾತ್ಯಕಿಯುಮನ್; ದುರ್ಯೋಧನನ ಮೊನೆಗೆ ಒಂದು ಕೋಟಿ ರಥಮುಮ್ ಒಂದು ಲಕ್ಕ ಭದ್ರಹಸ್ತಿಯುಮ್ ಬೆರಸು ಭೀಮನುಮನ್; ಬೃಹದ್ಬಳನ ಮೊನೆಗೆ ಮೂವತ್ತು ಸಾಸಿರ ರಥಮ್ ಬೆರಸು ಅಭಿಮನ್ಯುವುಮನ್; ದುಶ್ಶಾಸನನ ಮೊನೆಗೆ ನಾಲ್ವತ್ತು ಸಾಸಿರ ರಥಮ್ ಬೆರಸು ನಕುಲನುಮನ್; ಶಕುನಿಯ ಮೊನೆಗೆ ನಾಲ್ವತ್ತು ಸಾಸಿರ ರಥಮ್ ಬೆರಸು ಸಹದೇವನುಮನ್; ಕೃಪನ ಮೊನೆಗೆ ಒಂದು ಅಕ್ಷೋಹಿಣೀ ಬಲಮ್ ಬೆರಸು ಕೇಕಯರುಮನ್; ಸಿಂಧುರಾಜನ ಮೊನೆಗೆ ಒಂದು ಅಕ್ಷೋಹಿಣೀ ಬಲಮ್ ಬೆರಸು ದ್ರುಪದನುಮನ್; ಭಗದತ್ತನ ಮೊನೆಗೆ ಒಂದು ಅಕ್ಷೋಹಿಣೀ ಬಲಮ್ ಬೆರಸು ವಿರಾಟನುಮನ್; ಜಟಾಸುರ ಬಕಾಸುರರ ಮಕ್ಕಳ್ ಅಳಂಭೂಷ ಹಳಾಯುಧ ಮುಸಳಾಯುಧ ಕಾಳ ನೀಳ ನಕ್ತಂಚರರ ಮೊನೆಗೆ ಒಂದು ಅಕ್ಷೋಹಿಣೀ ಬಲಮ್ ಬೆರಸು ಘಟೋತ್ಕಚನುಮನ್; ವಿಂದನ ಮೊನೆಗೆ ಪದಿನೆಂಟು ಸಾಸಿರ ರಥಮುಮ್ ಒಂದು ಲಕ್ಕ ಮದದಾನೆಯುಮ್ ಬೆರಸು ಕೊಂತಿಯ ಮಾವನಪ್ಪ ಕೊಂತಿ ಭೋಜನುಮನ್;

ವಿಂದಾನುವಿಂದರ ಮೊನೆಗೆ ಅಱುವತ್ತು ಸಾಸಿರ ರಥಮ್ ಬೆರಸು ನಾಗಕುಮಾರನ ಅನಂತಬಲ ಸಮನ್ವಿತನ್ ಇಳಾವಂತನುಮನ್; ಭೂರಿಶ್ರವನ ಮೊನೆಗೆ ನಾಲ್ವತ್ತು ಸಾಸಿರ ರಥಮುಮ್ ನಾಲ್ವತ್ತು ಸಾಸಿರ ಮದಹಸ್ತಿಗಳುಮ್ ಬೆರಸು ಮದಗಜಾರೂಢನ್ ಉತ್ತರನುಮನ್; ಸುಯೋಧನನ ಮಕ್ಕಳ್ ಲಕ್ಕಣನ್ ಮೊದಲಾಗೆ ನೂರ್ವರ ಮೊನೆಗೆ ಅಱುವತ್ತು ಸಾಸಿರ ರಥಮ್ ಬೆರಸು ಸುತ ಸೋಮಕ ಪ್ರಮುಖರಪ್ಪ ಪಂಚಪಾಂಡವರುಮನ್ ಪೇಳ್ದು; ಕಾಂಭೋಜ ಸುದಕ್ಷಿಣ ದಂಡಧಾರರ್ ಎಂಬ ಮೂವರ್ ಅಕ್ಷೋಹಿಣೀಪತಿಗಳ ಮೊನೆಗೆ ಮೂಱುಕೋಟಿ ರಥಮ್ ಬೆರಸು ಪಾಂಡ್ಯ ಶ್ರೀಜಯ ಸೋಮಕರನ್ ಪೇಳ್ದು; ವೀರ ಪುಷ್ಕರ ಪಾರಿಯಾತ್ರ ಬರ್ಬರ ಶಬರ ನೇಪಾಳ ಮಹೀಪಾಳರ ಮೊನೆಗೆ ಎರಡು ಕೋಟಿ ರಥಮ್ ಬೆರಸು ಹೈಹಯರನ್ ಪೇಳ್ದು; ನೀಳನನ್ ಅಱುವತ್ತು ಸಾಸಿರ ಭದ್ರಹಸ್ತಿ ಬೆರಸು ತನ್ನ ಚಕ್ರರಕ್ಷೆಗೆ ಪೇಳ್ದು ; ಸಂಸಪ್ತಕರ ಪದಿನೆಂಟು ಕೋಟಿ ರಥಕ್ಕೆ ಅರಿಕೇಸರಿಯ ರಥಮನ್ ಒಂದನೆ ಪೇಳ್ದು; ಯುಧಿಷ್ಠಿರನ್ ಶಲ್ಯನ ಮೊನೆಗೆ ನೆಱೆದು ನಿಂದು ಕೆಯ್ವೀಸುವಾ ಪ್ರಸ್ತಾವದೊಳ್...)



# ೬೬.ಧರ್ಮರಾಯನು ಭೀಷ್ಮಾದಿಗಳಿಗೆ ನಮಸ್ಕರಿಸುವುದು

(೫೯ ನೆಯ ಗದ್ಯದಿಂದ ೬೪ ನೆಯ ಪದ್ಯ)

## ಪಾತ್ರಗಳು

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

ಭೀಷ್ಮ: ಶಂತನು ಮತ್ತು ಗಂಗಾದೇವಿಯ ಮಗ.

ದ್ರೋಣ: ಕೌರವರ ಮತ್ತು ಪಾಂಡವರ ವಿದ್ಯಾ ಗುರು.

## ಧರ್ಮರಾಯನು ಭೀಷ್ಮಾದಿಗಳಿಗೆ ನಮಸ್ಕರಿಸುವುದು

ಯುಧಿಷ್ಠರನ್ ಶಲ್ಯನ ಮೊನೆಗೆ ನೆಱಿದು ನಿಂದು ಕೆಯ್ವೀಸುವಾ ಪ್ರಸ್ತಾವದೊಳ್ **'ಶೂರಂ ಭೇದೇನ ಯೋಜಯೇತ್'** ಎಂಬ ನಯಮನ್ ಕೆಯ್ಕೊಂಡು ವಿನಯಮನೆ ಮುಂದಿಟ್ಟು, ನರೇಂದ್ರ ಬಳಮ್ ಎರಡುಮ್ ತನ್ನನೆ ಮಿಳಮಿಳ ನೋಡೆ, ಒಂದೆ ರಥದಿಂದೆ ಅಸುಹೃತ್ ಬಳಮನ್ ಇರದೆ ಎಯ್ದಿ ಭೀಷ್ಮರ ಚರಣಯುಗಕ್ಕೆ ಎಱಗೆ..

**ಭೀಷ್ಮ:** ನಿನಗೆ ಜಯಮಕ್ಕೆ.

(ಎಂದು ಭೀಷ್ಮರ್ ತಮ್ಮ ಮೊಮ್ಮನ ವಿನಯಕ್ಕೆ ಮೆಚ್ಚಿ ಪರಸೆ, ಪರಕೆಯನ್ ಕೆಯ್ಕೊಂಡು ಗುರು ಕೃಪ ಗುರುಸುತ ಶಲ್ಯರ ಚರಣಂಗಳ್ಗೆ ಎಱಗಿ ಪೋಗಿ ಪೊಡೆವಡುವುದುಮ್, ಅವರ್ ಆ ನೃಪನನ್ ಆದರದಿಂದಮ್ ನಲ್ಮೆಯೊಳಮ್ ಪರಸಿ ಮನಂಗೊಂಡು ನುಡಿದರ್.)

**ಗುರು ಹಿರಿಯರು:** ನಿನ್ನ ಬರವಿಂದಮ್ ಎಮ್ಮ ಮನಮ್ ನಿನಗೆ ಎಱಗಿದುದು. ಎಮ್ಮ ಈ ದೆಸೆಯಿಂದಮ್ ಜಯಮುಮ್ ಸಾರ್ಗೆ ಪೋಗು.

(ಎನೆ, ಆಗಳ್ ಅಂತಕತನಯನ್ ಗುರುಜನಮನ್ ಮನ್ನಿಸಿ ಮಗುಳ್ದು ತನ್ನ ಒಡ್ಡಣಕ್ಕೆ ಬರುತ್ತುಮ್, ದುರ್ಯೋಧನನ ತಮ್ಮನಪ್ಪ ಯುಯುತ್ಸುವನ್ ಕಂಡು...)

**ಧರ್ಮರಾಯ:** (ತನ್ನಲ್ಲಿಯೇ)

ಪವನಜನಿಂದೆ ಕೌರವಕುಲಮ್ ಪಡಲಿಟ್ಟವೊಲಕ್ಕುಮಾದೊಡೆ, ಇನ್ ಅವರವರ್ ಆರುಮ್ ಇಲ್ಲ. ಅಣಮೆ ಸಂತತಿ ಕೆಟ್ಟಪುದು. ಈ ಬವರದೊಳ್ ಈಗಳ್ ಆನ್ ಇವನನ್ ಕಾವೆನ್.

(ಎಂದು ನೃಪನ್ ದಯೆಯಿಂದಮ್ ಆ ಯುಯುತ್ಸುವನ್ ಒಡಗೊಂಡು ಬಂದನ್. ಎನಿತಾದೊಡಮ್ ಏನ್ ಪ್ರಭು ಪೊಲ್ಲಕೆಯ್ಗುಮೇ. ಅಂತು ಆ ಯುಯುತ್ಸುವನ್ ಒಡಗೊಂಡು ಬಂದು, ಧರ್ಮಪುತ್ರನ್ ಉತ್ಸಾಹದೊಳಿರ್ಪ ಪದದೊಳ್, ವಿಕ್ರಮಾರ್ಜುನನ ಮನದೊಳಾದ ವ್ಯಾಮೋಹಮನ್ ಕಳೆಯಲೆಂದು ಮುಕುಂದನ್ ದಿವ್ಯಸ್ವರೂಪಮನ್ ತೋಱಿ...)

**ಕೃಷ್ಣ:** ಈ ಮಲೆದು ಒಡ್ಡಿದ ಚಾತುರಂಗಮ್ ಎಂಬುದು ಅದಿರದೆ ಇದಿರ್ಚಿ ಇಱಿಯಲ್ ನಿನಗೆ ಒಡ್ಡಿ ನಿಂದುದು. ಇದನ್ ಕೊಲ್ವೊಡೆ ನೀನುಮ್ ಎನ್ನ ಕಜ್ಜದೊಳ್ ಎಸಗು.

(ಎಂದು ಸೈತು ಅಜಿತನ್ ಕದನತ್ರಿಣೇತ್ರನನ್ ಆದಿಯ ವೇದರಹಸ್ಯದೊಳ್ ನಿರಂತರ ಪರಿಚರ್ಯೆಯಿನ್ ನೆಱೆಯೆ ಯೋಜಿಸಿದನ್.)



# ೬೭. ಕಾಳೆಗದಲ್ಲಿ ಭೀಮ ದುರ್ಯೋಧನರ ಮುಖಾಮುಖಿ

(೯೬ ಗದ್ಯದಿಂದ ೧೦೧ ನೆಯ ಗದ್ಯ)

### ಪಾತ್ರಗಳು

ಭೀಮ: ಪಾಂಡುರಾಜ ಮತ್ತು ಕುಂತಿಯ ಮಗ.

ದುರ್ಯೋಧನ: ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

## ಕಾಳೆಗದಲ್ಲಿ ಭೀಮ ದುರ್ಯೋಧನರ ಮುಖಾಮುಖಿ

ಅಂತು ಎರಡುಮ್ ಬಲದ ಕರಿಘಟೆಗಳ್ ಒಂದೊಂದಱೊಳ್ ತಾಗಿ ತಟ್ಟಿಱಿಯೆ, ಬಿಸುನೆತ್ತರ ಅರ್ಬಿಗಳ್ ಉರ್ವಿ ಪಾಯೆ, ಪೇರರ್ವಿಗಳ್ ಬೆರಸು ಜಾಜಿನ ಪರ್ವತಗಳಂತೆ ಕೆಡೆದು ಅಳ್ಗಿತಳ್ಗಿದಾಗಳ್...

**ಭೀಮ:** ಈ ನಾಲ್ಕುಮ್ ಬಲಮ್ ಆನ್ ಇರೆ ಇಱಿವುದು ಗಡಮ್. ಇದಲ್ತೆ ಪರಿಭವಮ್ ಎನಗೆ.

(ಎಂದು ಏನುಮ್ ಮಾಣದೆ ಅನೂನಬಲನ್ ಭೀಮನ್ ಕುರುಬಲದೊಳ್ ಬಂದು ತಾಗಿದನ್. ಅಂತು ಕುರುಬಲದ ಕರಿಘಟೆಗಳನ್ ನುಂಗುವಂತೆ ದೆಸೆದೆಸೆಗೆ ಮಿಳಿರ್ದು ಮಿಳ್ಳಿಸಿದ ಸಿಂಗದ ಪಳವಿಗೆಯುಮ್ ಕುರುಬಲಕ್ಕೆ ಮಿಳ್ತು ಪಲ್ಮೊರೆವಂತೆ ಮೊರೆದು. ಪರಿವ ತನ್ನ ಕಿಸುವೊನ್ನ ರಥಮುಮ್ ಭಯಂಕರ ಆಕಾರಮಾಗೆ, ಪಗೆವರ ಗಂಟಲನ್ ಒತ್ತುವಂತೆ ಪೌಂಡ್ರಮೆಂಬ ಶಂಖಮನ್ ಒತ್ತಿ, ಮುಂದೊಡ್ಡಿದ ಒಡ್ಡೆಲ್ಲಮನ್ ಅಂಬಿನ ಬಂಬಲೊಳೆ ಪಡಲ್ವಡಿಸುತ್ತುಮ್ ಬರ್ಪ ಭೀಮಸೇನಂಗೆ ದುರ್ಯೋಧನನ್ ಅದಿರದೆ ಇದಿರ್ ಆಂತಾಗಳ್...)

**ಭೀಮ:** ಎಂತು ಇದಿರ್ ಆಂತೆ. ಅಂತೆ ಕಲಿಯಾಗು ಒಳಸೋರದಿರ್..

(ಎಂದು ಭೀಮನ್ ಕನಲ್ದು ಓರಂತೆ ತಿಣ್ಣಮ್ ಇಸೆ, ಪಾಯ್ವ ಸರಲ್ಗಳನ್ ಎಯ್ದಲ್ ಈಯದೆ ಆಂತು ಆಂತು ನಿರಂತರಮ್ ತಱಿದು, ಸೂತನನ್ ಆತನ ವಾಜಿಯನ್ ಮಹೀಶನ್ ಅಚ್ಚ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಮ್ ತೆಗೆದು ಎಚ್ಚನ್. ಇಸೆ ಭೀಮನ್ ಮಸಗಿ ಈರಯ್ದು ಶಿತಾಸ್ತ್ರದಿನ್ ಸೂತನ್ ಉರುಳೆ, ರಥಮ್ ಉಡಿಯೆ, ಕುದುರೆ ಕೀಲಿಸೆ, ಪಳವಿಗೆ ಮುಱಿಯೆ, ಒಂದೆ ಸರಲೊಳ್ ಮಸಕದಿನ್ ನೊಸಲನ್ ಎಚ್ಚನ್. ಪಟ್ಟಂಗಟ್ಟಿದ ನೊಸಲನ್ ನಟ್ಟ ಸರಲ್ ಪಿಡಿದು ನೆತ್ತರ್

ಅಂಬಿರಿವಿಡೆ ಕಣ್ಗೆಟ್ಟಿರ್ದ ನೃಪನ ದುರ್ಯೋಧನನನ್ ಅಂಕದ ಕಟ್ಟಾಳ್ಗಳ್ ಕಾದು ಕಳಿಪೆ ಆಗಳ್ ಅವನ ಅನುಜರ್ ನೂರ್ವರುಮ್ ಬಂದು ತನ್ನನ್ ಒರ್ವನನ್ ತಾಗಿದೊಡೆ...)

**ಭೀಮ:** ಅನಿಬರುಮನ್ ವಿರಥರ್ ಮಾಡಿ ಭಾರತಮನ್ ಇಂದೆ ಸಮೆಯಿಸುವೆನ್.

(ಎಂದು ಕೋದಂಡಮನ್ ಬಿಸುಟು, ಗದಾದಂಡಮನ್ ಭುಜಾದಂಡದೊಳ್ ಅಳವಡಿಸಿಕೊಂಡು ಕುರುಬಲಮನ್ ಪಡಲ್ವಡಿಪ ತಕ್ಕಿನೊಳ್ ಎಯ್ತರೆ...)



# ೬೮. ಶ್ವೇತ ಮತ್ತು ಭೀಷ್ಮರ ಕಾಳೆಗ

(೧೧೭ ನೆಯ ಗದ್ಯದಿಂದ ೧೨೪ ನೆಯ ಗದ್ಯ)

**ಪಾತ್ರಗಳು**

**ಶ್ವೇತ:** ವಿರಾಟರಾಜನ ಎರಡನೆಯ ಮಗ.

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

# ಶ್ವೇತ ಮತ್ತು ಭೀಷ್ಮರ ಕಾಳೆಗ

ಶ್ವೇತನುಮ್ ಅನವರತ ಶರಾಸಾರದಿನ್ ಕುರುಬಲಮ್ ಎಲ್ಲಮನ್ ಅರೆದು ಸಣ್ಣಿಸಿದಂತೆ ಮಾಡಿ, ತವೆ ನೆರವಿಯನ್ ಎನಿತನ್ ಕೊಂದೊಡಮ್ ಏವಂದಪುದೆಂದು ಗಾಂಗೇಯಂಗೆ ಅದಿರದೆ ಇದಿರನ್ ಮಾರ್ಕೊಂಡು ಬಿಲ್ ಪೊಯ್ದು ನಿಂದಾಗಳ್, ಶ್ವೇತನ ಬಿಲ್ಲೊಳಿರ್ದ ಮದನಾರಿಯ ರೂಪು ಎರ್ದೆಗೊಳ್ವುದುಮ್, ನದೀಜಾತನ್ ಉದಾತ್ತ ಭಕ್ತಿಯೊಳೆ ಕೆಯ್ಮುಗಿದಾಗಳ್...

**ಶ್ವೇತ:** ಇದೆಂತೊ... ನಿಮ್ಮ ಪೆರ್ಮಾತಿನ ಬೀರಮ್ ಮುಪ್ಪಿನೊಳ್ ಈ ಎಡೆಗೆ ವಂದುದೆ. ಲೋಕವಿಖ್ಯಾತರಿರ್ ಆಗಿ ಕೆಯ್ದುವಿಡಿವಲ್ಲಿಯೆ ಕಾಲ್ವಿಡಿಯಲ್ಕೆ ತಕ್ಕುದೇ. ರಣಾಗ್ರದೊಳ್ ಪೊಣರ್ವೊಡೆ ಅಂಕದ ಪೊಂಕದ ಸಿಂಧುಪುತ್ರನ್ ಒರ್ವನೆ ಎನಗೆ ದೊರೆಯೆಂದು ನಿಮ್ಮೊಳೆ ತಱಿಸಂದು ಇಱಿಯಲ್ಕೆ ಆನ್ ಪೂಣ್ದೆನ್ ವಲಮ್. ಎನಗೆ ಇಱಿವ ಅಳ್ತಿಯನ್ ಕಿಡಿಸಿ, ನಿಮ್ಮಳವನ್ ಪೆಱಗಿಕ್ಕಿ, ನೀಮುಮ್ ಇಂತು ಇನಿತು ಎರ್ದೆಗೆಟ್ಟಿರ್. ಇನ್ ತುಳಿಲಸಂದರನ್ ಆರುಮನ್ ಎಂತು ನಂಬುವರ್.

(ಎಂದು ತನ್ನನ್ ನೋಯೆ ನುಡಿದೊಡೆ, ಸಿಂಧುಪುತ್ರನ್ ಇಂತು ಎಂದನ್.)

**ಭೀಷ್ಮ:** ಏನ್ ಎಂದೊಡಮ್ ಎಂದುದು ನಿನಗೆ ಒಪ್ಪಿದಪುದು. ಅಂತು ಏಕೆ ಎನ್ನ ನಿನ್ನ ಈ ಶರಾಸನದೊಳ್ ಶೂಲ ಕಪಾಲಪಾಣಿ ದಯೆಯಿನ್ ಬಂದು ಇರ್ದನ್. ಉಂತೆ ಆನುಮ್ ಇಂತು ಇನಿತನ್ ನೀನ್ ನುಡಿವನ್ನೆಗಮ್ ತಡೆವೆನೇ. ತ್ರೈಲೋಕ್ಯನಾಥನ್ ಕಣಾ, ವಿನಮನ್ಮಸ್ತಕನಾದೆನ್. ಅಣ್ಮುವೊಡೆ ನೀನ್ ಈ ದೇವನನ್ ತೋಱುವೈ. ನಿನಗೆ ಇಱಿವಂತು ಮನದೊಳ್ ತಱಿಸಲವುಂಟಪ್ಪೊಡೆ... ಎಲವೊ, ಈ ದೇವೇಶನನ್ ಏನ್ ಸೆಱೆವಿಡಿದೆ.

ದೇವನ ಮಱಿಯನ್ ತೊಲಗು. ಬಳಿಕ ಎನಗಮ್ ನಿನಗಮ್ ಅಱಿಯಲಕ್ಕುಮ್.

(ಎಂಬುದುಮ್ ಶ್ವೇತನ್ ಇಂತು ಎಂದನ್.)

**ಶ್ವೇತ:** ಕಾಗೆವೊಲ್ ಬಿಲ್ಗೆ ಕರಮ್ ಅಂಜುವಿರ್. ಇಂತು ಅಂಜಲಿಮ್. ಆ ತ್ರಿಣೇತ್ರನನ್ ಪೋ ಗೆಡೆಗೊಂಡು ಕಾದುವೆನೆ. ಕಾದೆನ್. ಹರನಿತ್ತುದು ಎಂದು ಇದನ್... ನೋಡ, ಆಗಡುಮ್ ಅಳ್ತಿಯಿಮ್ ಪಿಡಿವೆನ್. ಅಕ್ಕಟ, ನಿಮ್ಮನ್ ಅದಿರ್ಪುವಲ್ಲಿ ಚಾಪಾಗಮಮ್ ಏವುದು. ಅಂತೆನಗೆ ಬಿಲ್ವರಮ್ ಆಜಿಯೊಳ್ ಆಂಪ ಗಂಡರಾರ್ ಬಿಲ್ಲನ್ ಬಿಸುಟೆನ್ ಅದೇವುದು.

(ಎಂದು ಕಡುಪಿಂದೆ ಈಡಾಡಿ, ಸೂರ್ಯಪ್ರಭಾ ಪ್ರಸರಂಗಳ್ ಮಸುಳ್ವನ್ನೆಗಮ್ ಪೊಳೆವುದು ಒಂದು ಶಕ್ತಿಯನ್ ಕೊಂಡು ಅಗುರ್ವಿಸಿ ಗಾಂಗೇಯನನ್ ಇಟ್ಟನ್. ಇಟ್ಟೊಡೆ ಅದನ್ **"ಪೇರಾಳ್ ಈರಯ್ದು ಅಸ್ತ್ರದಿನ್ ಖಂಡಿಸಿ ತಿಱಿದಿಕ್ಕಿದಂತೆ ಆ ಶ್ವೇತನಾ ತಲೆಯನ್ ಪೋಗೆ ಎಚ್ಚನ್. ಶ್ವೇತನ ಉಪಮಾತೀತಮನ್ ಈ ಧರೆಗೆ ನೆಗಳೆ ನೆಗಳ್ದುದನ್ ಬೀರಮನ್ ನಾನ್ ಪಾತಾಳಕ್ಕೆ ಅಱಿಪುವೆನ್"** ಎಂಬೀ ತೆಱದೊಳೆ ಅಪರಜಳನಿಧಿಗೆ ದಿನಪನ್ ಇಳಿದನ್. ಆಗಳ್ ಎರಡುಮ್ ಪಡೆಯ ನಾಯಕರ್ ಅಪಹಾರತೂರ್ಯಂಗಳನ್ ಬಾಜಿಸಿ ತಮ್ಮ ತಮ್ಮ ಬೀಡುಗಳ್ಗೆ ಪೋದರ್.)



# ೬೯. ಧೃಷ್ಟದ್ಯುಮ್ನನಿಗೆ ಸೇನಾಧಿಪತಿ ಪಟ್ಟ

(೨ ನೆಯ ಗದ್ಯದಿಂದ ೬ ನೆಯ ಪದ್ಯ)

**ಪಾತ್ರಗಳು**

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ಧೃಷ್ಟದ್ಯುಮ್ನ: ಪಾಂಚಾಲ ರಾಜ ದ್ರುಪದನ ಮಗ.

## ಧೃಷ್ಟದ್ಯುಮ್ನನಿಗೆ ಸೇನಾಧಿಪತಿ ಪಟ್ಟ

ಇತ್ತಲ್ ಎರಡುಮ್ ಪಡೆಯ ನಾಯಕರ್ ಅಳಿಯೆ ನೊಂದ ತಮ್ಮ ಅಣುಗಾಳ್ಗಳ, ಕೊಂಡಾಟದ ಆನೆಗಳ, ನಚ್ಚಿನ ಕುದುರೆಗಳ ಪುಣ್ಗಳನ್ ಉಡಿಯಲುಮ್, ಓವಲುಮ್, ಮರ್ದು ಬೆಜ್ಜರಮನ್ ಅಟ್ಟುತ್ತುಮ್; ಇಕ್ಕಿದ ಸನ್ನಣಂಗಳನ್ ಗೆಲ್ದು ಕಣಕ್ ಎನೆ ಪೋಗುರ್ಚಿ ತಮ್ಮ ಮೆಯ್ಯೊಳ್ ಉಡಿದ ಅಂಬುಗಳುಮನ್, ಎಲ್ವನ್ ನಟ್ಟುಡಿದ ಬಾಳ ಕಕ್ಕಡೆಯ ಉಡಿಗಳುಮನ್ ಅಯಸ್ಕಾಂತಮನ್ ತೋಱಿ ತೆಗೆಯಿಸುತ್ತುಮ್; ವಜ್ರಮುಷ್ಟಿಯ ಪೊಯ್ಲೊಳಮ್, ಬಾಳ ಕೋಲೊಳಮ್ ಉಚ್ಚಳಿಸಿದ ಕಪಾಲದ ಓಡುಗಳನ್ ಗಂಗೆಗೆ ಅಟ್ಟುತ್ತುಮ್, ಉನ್ನತ ಮಸ್ತಕ ಸ್ಥಳದೊಳ್ ಅಂಬುಗಳ್ ಅಳ್ದು ಉಡಿದಿರ್ದೊಡೆ, ಅತ್ತಮ್ ಇತ್ತಮ್ ನೆರೆತಂದು ಬಲ್ಲಡಿಗರ್ ಇಳ್ಕುಳಿನೊಳ್ ಕಿಳೆ **"ನೊಂದೆನ್"** ಎನ್ನದೆ, **"ಅಃ... ಎನ್ನದೆ"**, ಅಣಮ್ ಮೊಗಮ್ ಮುರಿಯದೆ, ಅಳ್ಕದೆ, ಬೇನೆಗಳೊಳ್ ಮೊಗಂಗಳನ್ ಬಿನ್ನಗೆ ಮಾಡದೆ, ಅಳವು ಅಚ್ಚರಿಯಾಗೆ ಕೆಲರ್ ಮಹಾರಥರ್ ಇರ್ದರ್.

ರಸಮ್ ಒಸರ್ವನ್ನೆಗಮ್ ತಗುಳೆ ಪಾಡುವ ಗಾಣರ ಗೇಯಮ್ ಅಳ್ಕರನ್ ಪೊಸಯಿಸೆ; ಸೋಂಕುವ ಒಲ್ದು ಒಲಿಸುವ ಓಪಳ ಸೋಂಕು; ಪೊದಲ್ದ ಬಿರಿದ ಜಾದಿಯೊಳ್ ಮಸಗಿದ ಕಂಪು; ಕಂಪನ್ ಒಳಕೊಂಡು ಅಲೆವ ಒಂದು ಎಲರ್ ಎಂಬಿವು, ಉಗ್ರ ವೀರಭಟ ಆಹವ ಕೇಳಿ ಪರಿಶ್ರಮಂಗಳನ್ ಅಂದು ಪಾಱಿಸುವುವು. ಆಗಳ್ ಧರ್ಮನಂದನನ್ ಮುಕುಂದಂಗೆ ಬಳಿಯನಟ್ಟಿ ಬರಿಸಿ...

**ಧರ್ಮರಾಯ:** ನಮ್ಮ ಸೇನಾನಾಯಕನ್ ಉತ್ತಾಯಕನಾಗಿ ಗಾಂಗೇಯರಿಂದಮ್ ಅಳಿದನ್. ಇನ್ ಆರ್ಗೆ ವೀರಪಟ್ಟಮನ್ ಕಟ್ಟುವಮ್ ಪೇಳಿಮ್.

**ಕೃಷ್ಣ:** ಬೇಳ್ವೆಯ ಕೊಂಡದೊಳ್ ಉರ್ಚಿದ ಬಾಳ್ವೆರಸು ಅರಿಬಲಮನ್ ಅರಿಯಲೆಂದು ಅಂಕದ ಕಟ್ಟಾಳ್ ವೀರನ್ ಅತಿಬಲನ್ ಧೃಷ್ಟದ್ಯುಮ್ನನ್ ನಿನಗೆ ಆಳ್ವೆಸಕೆ ಎಂದು ಇರ್ದನಲ್ತೆ.

(ಎಂಬುದುಮ್)

**ಧರ್ಮರಾಯ:** ಈ ಕಜ್ಜಮ್ ಎನ್ನ ಮನದೊಳ್ ಒಡಂಬಟ್ಟ ಕಜ್ಜಮ್. ಆತನೆ ವೀರಪಟ್ಟಕ್ಕೆ ತಕ್ಕನ್.

(ಎಂದು ಧರ್ಮನಂದನನ್ ದ್ರುಪದ ನಂದನಂಗೆ ಬಳಿಯನಟ್ಟಿ ಬರಿಸಿ, ಪಿರಿದುಮ್ ಒಸಗೆ ಬೆರಸು ತಾನೆ ವೀರಪಟ್ಟಮನ್ ಕಟ್ಟಿ, ಆ ಸಮರಮುಖದೊಳ್ ಎಸೆವ ಅರಿಕೇಸರಿಯ ವಿರೋಧಿ ರುಧಿರ ಜಲನಿಧಿವೊಲ್ ಸಂಧ್ಯಾ ಸಮಯಮ್ ಎಸೆಯೆ, ತಳತಳ ನೇಸರ್ ಮೂಡುವುದುಮ್ ಒಡ್ಡಣಕ್ಕೆ ಎಳ್ತಂದರ್.)



# ೭೦. ಕುರುಕ್ಷೇತ್ರ ಕಾಳೆಗದ ಕಣ–ಒಂದು

(೮ ನೆಯ ಗದ್ಯದಿಂದ ೧೦ ನೆಯ ಪದ್ಯ)

## ಪಾತ್ರಗಳು

ಭೀಮ: ಪಾಂಡುರಾಜ ಮತ್ತು ಕುಂತಿಯ ಮಗ.

ಭೀಷ್ಮ: ಶಂತನು ಮತ್ತು ಗಂಗಾದೇವಿಯ ಮಗ.

# ಕುರುಕ್ಷೇತ್ರ ಕಾಳೆಗದ ಕಣ–ಒಂದು

ಅನ್ನೆಗಮ್ ವೃಕೋದರನ್ ಚತುರ್ದಶ ಭುವನಂಗಳೆಲ್ಲಮನ್ ತೆರಳ್ಚಿ ತೇರ್ರೈಸಿ ನುಂಗುವಂತು ಮಸಕದಿನ್ ಭಗದತ್ತನನ್ ಮಾರ್ಕೊಂಡು ಇಸುವುದುಮ್, ಎಚ್ಚ ಶಾತಶರಸಂತತಿಯನ್ ಭಗದತ್ತನ್ ಎಯ್ದೆ ಖಂಡಿಸಿ, ರಥಮನ್ ಪಡಲ್ವಡಿಸಿ, ಮಚ್ಚರದಿನ್ ಗಜೆಗೊಂಡು ತಾಗೆ, ಮಾಣಿಸಲ್ ಅಮರಾಪಗಾಸುತನ್ ಇದಿರ್ಚುವುದಮ್, ಪವನಾತ್ಮಜನ್ ರಥಮ್ ಅಳ್ಗೆ ಪೊಯ್ದು, ಶಂಕಿಸದೆ ಇದಿರಾಂತ ಸೈಂಧವನುಮನ್ ಓಡೆ ಕಾದಿದನ್. ಅಂತು ಕಾದೆ ಸಿಂಧುರಾಜನ ಬೆಂಬಲದೊಳ್ ಕಾದಲೆಂದು ಬಂದ ನೂರ್ವರ್ ಕೌರವರುಮ್ ಭೀಮನೊಳ್ ತಾಗೆ, ತಾಗಿದ ಬೇಗದಿನ್ ದುರ್ಧರ್ಷಣ ದುರ್ಮರ್ಷಣ ದೀರ್ಘಬಾಹು ಮಹಾಬಾಹು ಚಿತ್ರೋಪಚಿತ್ರ ನಂದೋಪನಂದರ್ ಮೊದಲಾಗೆ ಮೂವತ್ತು ಮೂವರನ್ ಜವಂಗೆ ಬಿರ್ದನ್ ಇಕ್ಕುವಂತೆ ಇಕ್ಕಿ, ಮತ್ತಿನ ಉಳಿದರುಮನ್ ಉಳಿಯಲ್ ಈಯದೆ ಬಳಿಸಂದಾಗಳ್...

**ಭೀಷ್ಮ:** ಕೌರವರನ್ ಕೊಲಲೆಂದು ಮೊದಲಿಟ್ಟನ್. ಆರ್ದು ಉರ್ಚಿ ಮುಕ್ಕದೆ ಇನ್ ಏಕಿರ್ಪನ್. ಇವಂಗೆ ಆನ್ ಕರಮ್ ಕೂರ್ಪೆನ್. ಇವರುಮ್ ಸತ್ತಪ್ಪರ್. ಇಂದಿಂಗೆ ಕಾವುದನ್ ಆನ್ ಕಾವೆನ್.

(ಎನುತ್ತೆ ಬೇಜಿ ರಥಮನ್ ಬಂದೇಱು...)

**ಭೀಷ್ಮ:** ಪೋ... ಪೋಗಲ್.

(ಎಂದು ಒದಱುತ್ತುಮ್ ಪರಿತಂದು, ಗಂಗಾಸುತನ್ ಭೀಮನನ್ ತಾಗಿ ತಗರ್ದನ್.)



# ೭೧. ಕುರುಕ್ಷೇತ್ರ ಕಾಳೆಗದ ಕಣ–ಎರಡು

(೧೦ ನೆಯ ಗದ್ಯದಿಂದ ೨೪ ನೆಯ ಗದ್ಯ)

## ಪಾತ್ರಗಳು

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

## ಕುರುಕ್ಷೇತ್ರ ಕಾಳೆಗದ ಕಣ–ಎರಡು

ಅನ್ನಗೆಮ್ ಅತ್ತ ಸಂಸಪ್ತಕ ಬಲಮ್ ಎಲ್ಲಮನ್ ಅಳಱೆ ಪೆಳಱೆ ಕಿವುಳೆದುಳಿದು ಕೊಲ್ವಲ್ಲಿ... ವಿಕ್ರಮಾರ್ಜುನನ್ ಮುರಾಂತಕನೊಳ್ ಇಂತು ಎಂದನ್.)

**ಅರ್ಜುನ:** ಪ್ರಳಯ ಪಯೋಧಿ ನಾದಮನೆ ಪೋಲ್ತು ರಣಾನಕರಾವಮ್ ಈಗಳ್ ಅಗ್ಗಳಮ್ ಎಸೆದಪ್ಪುದು. ಅತ್ತ ಕಱೆವ ಅಂಬಿನ ಬಲ್ಸರಿಯಿಂದಮ್ ಆ ದಿಶಾವಳಿ ಮಸುಳ್ದು ಇಂತು ನೀಳ್ದಪುದು. ಮುರಾಂತಕ, ನಿನ್ನ ಅಳಿಯನುಮ್ ಆ ವೃಕೋದರನುಮ್ ಅಲ್ಲದೆ ಪೆಱರ್ ಪೋಗದೆ ಕಾದುವ ಗಂಡರಿಲ್ಲ. ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರ್ ಎಂಬ ಸಂದ ಬೀರರೆ ಮಱುವಕ್ಕಮ್. ಅಣ್ಣನೊಡನೆ ಇರ್ವರೆ ಕೂಸುಗಳ್ ಎಂಬ ಶಂಕೆಯುಮ್ ಎನಗೆ ಈಗಳ್ ಪಿರಿದು ಆದಪುದು. ಮಾಣದೆ ಅತ್ತಲ್... ಅತ್ತ... ರಥಮನ್ ಚೋದಿಸು.

(ಎಂದು ಭೋರ್ಗರೆಯೆ ಅರಾತಿಗೆ ಮಿಳ್ತು ಬರ್ಪವೋಲ್ ಬಂದನ್. ಅಂತು ನೆಲನ್ ಅದಿರೆ ಬರ್ಪ ವಿಕ್ರಮಾರ್ಜುನನ ಬರವಿಂಗೆ ಕುರುಬಲಮೆಲ್ಲಮ್ ಒಲ್ಲನೆ ಉಲಿದು ಓಡಿ ಸುರಾಪಗಾನಂದನನ ಮರೆಯನ್ ಪೊಕ್ಕಾಗಳ್, ಎಡೆಗೋದ ಅಂಕದ ಶಲ್ಯ ಸೈಂಧವ ಕೃಪ ದ್ರೋಣರ್ಕಳುಮ್ ಸಾಯಕಂಗಿಡೆ, ತನ್ನೆಚ್ಚ ಶರಾಳಿಗಳ್ ವಿಲಯಕಾಲ ಉಲ್ಕಂಗಳ್ ಆ ತಾಗಿದಾಗಡೆ, ತತ್ ಸೂತ ರಥಾಶ್ವಕೇತನ ಶರವ್ರಾತಂಗಳುಮ್ ನುರ್ಗೆ, ನಮ್ಮ ಹರಿಗನ್ ಕಣ್ಗಿಡೆ, ಅಂತು ಬೆನ್ನಟ್ಟಿದನ್ ಹರಿಗನ್ ಗಂಡನ್ ಪೆಱರ್ ಗಂಡರೇ. ಅಂತು ಅತಿರಥ ಸಮರಥ ಮಹಾರಥ ಅರ್ಧರಥರ್ಕಳನ್ ಆನೆ ಮೆಟ್ಟಿದ ಕುಳುಂಪೆಯ ನೀರಂತೆ

ದೆಸೆದೆಸೆಗೆ ಕೆದಱುವನ್ನಮ್ ಎಳ್ಚಟ್ಟಿದಾಗಳ್, ಸೋಲ್ತ ತನ್ನ ಬಲಮನ್ ಅಳುಂಬಮಾದ ವಿಕ್ರಮಾರ್ಜುನನ ಭುಜಬಲಮುಮನ್ ಕಂಡು ಕನಕತಾಳಧ್ವಜಂಗೆ ಪನ್ನಗಧ್ವಜನ್ ಇಂತು ಎಂದನ್.)

**ದುರ್ಯೋಧನ:** ಅಜ್ಜ, ಮುಳಿಯೆ ಬಿನ್ನಪಮ್. ದಾಯಿಗರೊಳ್ ವಿರೋಧಮನ್ ಇಂತು ಬಳ್ವಳನೆ ಮಾಳ್ಪುದನ್ ನಿಮ್ಮನೆ ನಂಬಿ ಮಾಡಿದೆನ್. ಇಂತು ಗೋವಳಿಗನನ್ ಗೆಡೆಗೊಂಡು ಮುನ್ ಬಳೆದೊಟ್ಟ ಪೇಡಿಯೆ ನಿಮ್ಮನ್ ಇಂತು ಇಳಿಸಿ ಮದ್ಬಲಮೆಲ್ಲಮನ್ ಕೊಲೆ, ನೋಡುತಿರ್ಪುದು ಪಾಳಿಯೇ. **"ಮೇಳದೊಳ್ ಎಂತುಮ್ ಪೆಱರ ಆಳನ್ ಭಿದ್ರಿಸುವೆವು... ಪೋ"** ಎಂಬ ಪಾಂಡವರೊಳ್ ನೀಮ್ ಮೇಳಿಸಿ ನಣ್ಪನೆ ಬಗೆದಿರ್. ಜೋಳದ ಪಾಳಿಯುಮನ್ ಇನಿಸು ನಿಮ್ಮೊಳ್ ಬಗೆಯಿಮ್.

(ಎಂಬುದುಮ್ ಸಿಂಧುತನೂಜನ್ ಇಂತು ಎಂದನ್.)

**ಭೀಷ್ಮ:** ಕೇಳ್, ಒರ್ವನ್ ತ್ರಿಜಗಕ್ಕಮ್ ಗುರು ದೇವನ್ ಆದಿಪುರುಷನ್. ಒರ್ವನ್ ರಿಪುಧ್ವಜಿನೀ ಧ್ವಂಸಕನಾಗಿ ಸಂದ ಕಲಿಯುಮ್ ಬಿಲ್ಲಾಳುಮ್. ಇನ್ನೊಂದೆಡೆ ಜಗತ್ ಖ್ಯಾತರನ್ ಎಂತು ಏಳಿಪಯ್. ಮುನ್ ಪೂಣ್ದುದನ್ ಮಱೆವೆನೇ. ರಥಮ್ ಧ್ವಜಮ್ ಅಂಬು ಎಂಬಿವನ್ ಎಯ್ದೆ ಸಂಧಿಸು. ಜಸಮ್ ನಿಲ್ವನ್ನೆಗಮ್ ಕಾದುವೆನ್.

(ಎಂಬುದುಮ್ ಅನೇಕ ಶರಭರಿತ ಶಕಟಸಹಸ್ರಮನ್ ಒಂದು ಮಾಡಿ ಗಾಂಗೇಯನ ಪೆಱಗೆ ನಿಲಸಿದಾಗಳ್, ಅಮರಾಪಗಾನಂದನನುಮ್ ಅಮರೇಂದ್ರನಂದನನುಮ್ ಒರ್ವರ್ ಒರ್ವರನ್ ಗಱಿಸನ್ನೆ ಗೆಯ್ದು ಕಾದುವಾಗಳ್, ಅಂಬರತಳದೊಳೆಲ್ಲಮ್ ಬಿಳಿಯ ಮುಗಿಲ್ಗಳ ಚೌಪಳಿಗೆಗಳೊಳ್ ಬಂದಿರ್ದ ದೇವ ವಿಮಾನಂಗಳುಮ್ ಒಡನೊಡನೆ ಕಲಂಕೆ ಕುಲಗಿರಿಗಳುಮ್ ದಿಕ್ಕರಿಗಳುಮ್ ಒಡನೊಡನೆ ತಾಗಿದಂತೆ ತಾಗಿದಾಗಳ್, ಉಪಮಾತೀತದ ಬಿಲ್ಲ ಬಲ್ಮೆ ಸಮಸಂದು ಒಂದೊರ್ವರೊಳ್ ಪರ್ಬೆ, ಪರವ್ಯೂಹ

ಭಯಂಕರನ್ ಪರ್ವಿ ನೆಗೆದು ಪಾರ್ದು ಆರ್ದು ಎಚ್ಚೊಡೆ, ಅಂಬು ಅಂಬನ್ ಅಟ್ಟಿ ಪಳಂಚುತ್ತೆ ಸಿಡಿಲ್ದ ತೋರಗಿಡಿಯಿಮ್ ಒಂದೊಂದಱೊಳ್ ಬೇವುತಮ್ ತ್ರಿಪುರಮ್ ಪೊತ್ತಿಸಿದಂತೆ ವಿಯನ್ಮಂಡಳಮ್ ಪೊತ್ತಿ ಎತ್ತಮ್ ಪೊಗೆದತ್ತು. ಅಂತು ಬ್ರಹ್ಮಾಂಡಮ್ ಉರಿಯೆ ಕಾದೆ...)

**ಅರ್ಜುನ:** (ತನ್ನ ಮನದಲ್ಲಿ)

ನಡಪಿದನ್ ಅಜ್ಜನ್.

(ಎಂದು ವಿಜಯನ್ ಕಡುಕೆಯ್ದು ಇಸನ್.)

**ಭೀಷ್ಮ:** (ತನ್ನ ಮನದಲ್ಲಿ)

ಎನ್ನ ಮಮ್ಮನ್. ಆನ್ ನಡಪಿದೆನ್.

(ಎಂದು ಸಿಂಧುತನಯನ್ ಕಡುಕೆಯ್ದು ಇಸನ್. ಇಂತು ಪಾಡುಗಾದು ಒಡನೊಡನೆ ಇರ್ವರುಮ್ ಶರಾಸನ ವಿದ್ಯೆಯನ್ ಮೆಱೆಯಲೆಂದೆ ಎತ್ತಮ್ ಇತ್ತಮ್ ಇದಿರೊಳ್ ಮಲೆದು ಒಡ್ಡಿದ ಚಾತುರಂಗಮನ್ ಪಡಲ್ವಡಿಸಿದರ್. ಅಂತು ಕಿಱಿದು ಪೊಳ್ತು ಕೆಯ್ಗಾದು ಕಾದೆ, ಸರಿತ್ಸುತನ ಸುರಿವ ಸರಲ ಮಳೆಯೊಳ್ ಅಳಿದ ನಿಜ ವರೂಥಿನಿಯ ಸಾವುಮ್ ನೋವುಮ್ ಏವಮನ್ ಮಾಡೆ, ಮುನಿದು ಎರಡಂಬಿನೊಳ್ ರಥಮುಮನ್ ಪದವಿಲ್ಲುಮನ್ ಎಯ್ದೆ ಪಾರ್ದು, ನೆಕ್ಕನೆ ಕಡಿದು ಇಂದ್ರಸೂನು ಅಳುರ್ಕೆಯಿನ್ ಆರ್ದೊಡೆ, ದಿವ್ಯಸಿಂಧುನಂದನನ್ ಬೇಱೆ ರಥಮನ್ ಇರದೆ ಏಱಿ ಪೆಱತೊಂದು ಶರಾಸನಕ್ಕೆ ಮೆಲ್ಲನೆ ನಿಡುದೋಳನ್ ಉಯ್ದು ಕರಮ್ ಅಚ್ಚರಿಯಾಗೆ ಕಡಂಗಿ ಕಾದಿದನ್.

ಅಂತು ತೋಡುಮ್ ಬೀಡುಮ್ ಕಾಣಲಾಗದೆ ಎರ್ದೆಗಾಯಲ್ ಎಕ್ಕೆಯಿನ್ ಎಂಬತ್ತು ನಾಲ್ಕು ಲಕ್ಕ ಬಂಡಿಯೊಳ್ ತಂಡ ತಂಡದೆ ತೀವಿದ ಅಕಾಂಡ ಪ್ರಳಯಾನಳ ವಿಸ್ಫುಲಿಂಗ ಉಪಮಾನಂಗಳಪ್ಪ ನಿಶಿತ ಕಾಂಡಂಗಳಿಂದೆ ಒಡ್ಡಿದ ಚತುರ್ಬಲಂಗಳ ಮೆಯ್ಯೊಳ್ ರೋಮರೋಮಮ್ ತಪ್ಪದೆ ನಡುವನ್ನಮ್ ಎಚ್ಚು ಪಯಿಂಭಾಸಿರ್ವರ್

ಮಕುಟಬದ್ಧರುಮನ್, ಒಂದು ಲಕ್ಕ ಮದದಾನೆಯುಮನ್, ಮೂಱು ಲಕ್ಕ ರಥಮುಮನ್, ಒಂದು ಕೋಟಿ ತುರುಷ್ಕ ತುರಂಗಂಗಳುಮನ್, ಪದಿನೆಂಟು ಕೋಟಿ ಪದಾತಿಯುಮನ್ ಅಲಸದೆ ಪೇಸೇಳೆ ಕೊಂದು, ಪರಶುರಾಮನಲ್ಲಿ ಪಡೆದ ದಿವ್ಯಾಸ್ತ್ರಂಗಳನ್ ಒಂದನೊಂದು ಸೂಳೊಳೆ ತೊಟ್ಟು, ನುಡಿವಳಿಗೆ ನರನ ರಥಮನ್ ಪಡುವು ಎಣ್ಗಾವುದುವರಮ್ ಸಿಡಿಲ್ವಿನಮ್ ಎಚ್ಚು ಅಚ್ಚುಡಿಯೆ, ಭುಜಬಲದೆ ಹರಿಯ ಉರದೆಡೆಯನ್ ಬಿರಿಯೆಚ್ಚು ಭೀಷ್ಮನ್ ಅಳವನ್ ಮೆಱೆದನ್. ಆಗಳ್..)

**ಕೃಷ್ಣ:** (ತನ್ನ ಮನದಲ್ಲಿ)

ದೇವಾಸುರದೊಳಮ್ ಇಂದಿನ ನೋವನ್ ನೊಂದು ಅಱಿಯೆನ್. ಉಳಿದ ಕೆಯ್ದುವಿನೊಳಮ್ ಇವನ್ ಸಾವನೆ. ಸೆರಗಮ್ ಬಗೆದೊಡೆ ಸಾವಾದಪುದು.

(ಎಂದು ಚಕ್ರಿ ಚಕ್ರದೊಳ್ ಇಟ್ಟನ್. ಇಟ್ಟೊಡೆ ತನಗೆ ಅಸುರಾರಿಯ ಕೊಟ್ಟ ಮಹಾವೈಷ್ಣವಾಸ್ತ್ರಮನ್ ಗಾಂಗೇಯನ್ ತೊಟ್ಟು ಇಸುವುದುಮ್... ಎರಡುಮ್ ಕಿಡಿಗುಟ್ಟಿ ಸಿಡಿಲ್ ಸಿಡಿಯೆ ಅಂಬರತಲದೊಳ್ ಪೋರ್ದುವು. ಪೋರ್ವುದುಮ್...)

**ಅರ್ಜುನ:** (ತನ್ನ ಮನದಲ್ಲಿ)

ಇನ್ ಪೆಱತಂಬಿನ್ ಪಗೆ ತೀರ್ವುದೆ.

(ಎಂದು ಪಾಶುಪತಮನ್ ಪಿಡಿಯಲ್ ಅರ್ಜುನನ್ ಪಾರ್ವುದುಮ್, ಆಗಳ್ ಬೇರ್ವರಸು ಕಿಳಲ್ಕೆ ಬಗೆಯೆ ಸುರರ್ ಎಡೆವೊಕ್ಕರ್. ಆ ಪ್ರಸ್ತಾವದೊಳ್. **"ಅಸುರಾರಿಯ ಪಿಡಿವ ಉನ್ನತ ಕರಚಕ್ರಮೆಂದು ಎನ್ನುಮನ್ ಭೀಷ್ಮನ್ ತಱಿಗುಮ್. ಮುನ್ನಮ್ ಅಡಂಗುವೆನ್"** ಎಂಬವೊಲ್ ದಿನಪನ್ ಅಸ್ತಾಚಲಸ್ಥನಾದನ್. ಆಗಳ್ ಎರಡುಮ್ ಪಡೆಗಳ್ ಅಪಹಾರ ತೂರ್ಯಂಗಳನ್ ಬಾಜಿಸಿ ಮುನ್ನೊತ್ತಿದ ವೇಳೆಗಳ್ ಸಮುದ್ರಂಗಳನ್ ಪುಗುವಂತೆ ತಂತಮ್ಮ ಬೀಡುಗಳನ್ ಪೊಕ್ಕರ್.)



# ೭೨. ಭೀಷ್ಮರನ್ನು ಧರ್ಮರಾಯ ಭೇಟಿ ಮಾಡಿದ್ದು

(೨೫ ನೆಯ ಪದ್ಯದಿಂದ ೩೨ ನೆಯ ಗದ್ಯ)

**ಪಾತ್ರಗಳು**

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ

# ಭೀಷ್ಮರನ್ನು ಧರ್ಮರಾಯ ಭೇಟಿ ಮಾಡಿದ್ದು

ಆಗಳ್ ಅರಸನ್ ಅಸುರ ವೈರಿಯನ್ ಮನೆಗೆ ಬರಿಸಿ...

ಧರ್ಮರಾಯ: ಚಕ್ರಮ್ ಭೀಷ್ಮಂಗೆ ಇಂತು ಏಕೆ ಮೊಗಮ್ ತಿರಿದುದೊ. ಅಸುರಾರೀ, ನಿಮ್ಮನ್ ಪಿಡಿದ ಎನಗೆ ಧುರದೊಳ್ ಅರಿದು ಎನಲ್ ಉಂಟೆ ಬೆಸಸು.

(ಎನೆ ನುಡಿದನ್.)

ಕೃಷ್ಣ: ಭೀಷ್ಮನ್ ಮುರನೆಂಬ ಅಸುರನನ್ ಎನಗಾಗಿ ಕಾದಿ ಪಿಡಿದು ಒಪ್ಪಿಸಿದೊಡೆ, ವೈಷ್ಣವ ಬಾಣಮನ್ ಒಸೆದು ಇತ್ತೆನ್. ಅದನ್ ಗೆಲಲ್ಕೆ ಕೆಯ್ದುಗಳ್ ಒಳವೇ. ಭೇದದೊಳಲ್ಲದೆ ಗೆಲಲ್ ಅರಿದಾದನ್. ಸುರಸಿಂಧುಸುತನನ್ ಇಂದು ಇರುಳೊಳ್ ನೀನ್ ಭೇದಿಸು.

(ಎನೆ, ನೃಪತಿಯೊರ್ವನೆ ಆದರದಿನ್ ಬಂದು ಸಿಂಧುಸುತನನ್ ಕಂಡನ್. ಕಂಡು ಪೊಡೆವಟ್ಟು ನಯಮ್ ಎರ್ದೆಗೊಂಡಿರೆ, ಪತಿ ನುಡಿದನ್.)

ಧರ್ಮರಾಯ: ದೇವರ್ ಕಲುಷಂಗೊಣ್ಡಾಗಳ್ **"ಕಾವರೆ ಕಣೆಗೊಣ್ಡವೊಲ್"** ಎಂದೆಂಬ ಮಾತಿನಂತೆ ಆಗಿರದೇ. ತೊಂಬಯ್ ಸಾಸಿರ್ವರ್ ಮಕುಟಬದ್ಧರ್ ನಿಮ್ಮ ಅಂಬಿನ ಬಂಬಲೊಳೆ ಮಡಿದರ್. ನಂಬಿಮ್ ನಂಬಲಿಮ್ ಇಂದಿಂಗೆ ಒಂಬತ್ತು ದಿನಮ್ ದಲ್ ಎಮ್ಮ ಬೆನ್ನಲೆ ನಿಂದಿರ್. ಚಕ್ರಿಯ ಚಕ್ರದೊಳಮ್ ಎಚ್ಚ ನಿಜ ಪತತ್ರಿ ತೊಡರ್ದು ಆಕ್ರಮಿಸಿದುದು ದಲ್ ಎನೆ, ನಿಮ್ಮ ಈ ಕ್ರಮಕಮಲಕ್ಕೆ ಎಱಗದೆ ವಕ್ರಿಸಿ ಬಾಳ್ವರುಮ್ ಭೂಚಕ್ರದೊಳಗೆ ಒಳರೇ. ಸಾವೆ ನಿಮತಿಚ್ಚೆಯೆನೆ ಆವನ್ ತಳ್ತಿಱಿದು ಪೊಣರ್ದು

ಗೆಲ್ವನ್. ಅದಱಿಂದಮ್ ಎಮಗೆ ಸಾವು ದಿಟಮ್. ನಿಮ್ಮಡಿ ಕೊಲೆ ಸಾವುದು ಲೇಸಲ್ತೆ. ಸುಗತಿವಡೆಯಲ್ಕಕ್ಕುಮ್.

(ಎಂದೊಡೆ, ಅದೆಲ್ಲಮನ್ ಎಯ್ದೆ ಕೇಳ್ದು, ಕರುಣಾರಸ ಹೃದಯನಾಗಿ ಮಮ್ಮನ ಮೊಗಮನ್ ಕೂರ್ಮೆಯಿನ್ ನೋಡಿ, ಕಣ್ಣ ನೀರನ್ ನೆಗಪಿ...)

**ಭೀಷ್ಮ:** ಜಗದೊಳ್ ಅವಧ್ಯನನ್ ಗೆಲಲೆಬಾರದು. ಅದು ಆದೊಡಮೇನ್. ಶಿಖಂಡಿ ತೊಟ್ಟಗೆ ಕೊಳೆ ಮುಂದೆ ನಿಲೆ, ನಾಳಿನೊಂದು ಕಾಳೆಗದೊಳ್ ಸಾವು ಎನಗೆ ಅಪ್ಪುದು. ಇದನ್ ನರಂಗೆ ಅಱಿಪದೆ, ಈ ತೆಱದಿನ್ ನೆಗಳ್ದು, ಎಯ್ದೆ ವೀರಲಕ್ಷ್ಮಿಗೆ ನೆಲೆಯಾಗು ಪೋಗು.

(ಎನೆ, ನೃಪನ್ ಪೊಡೆವಟ್ಟು, ಮನೋನುರಾಗದಿನ್ ಬಂದು ಮಂದರಥರಂಗೆ ತತ್ ವೃತ್ತಾಂತಮನ್ ಎಲ್ಲಮನ್ ಅಱಿಪಿ ನಿಶ್ಚಿಂತಮನನಾಗಿ ಪವಡಿಸಿದ.)



# ೭೩. ಭೀಷ್ಮರು ಶರಮಂಚದ ಮೇಲೆ ಮಲಗಿದ್ದು

(೩೬ ನೆಯ ಗದ್ಯದಿಂದ ೫೦ ನೆಯ ಗದ್ಯ)

## ಪಾತ್ರಗಳು

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

**ಪಾಂಡವರು:** ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

## ಭೀಷ್ಮರು ಶರಮಂಚದ ಮೇಲೆ ಮಲಗಿದ್ದು

ಅಂತು ಚಾತುರ್ದಂತಮ್ ಒಂದೊಂದರೊಳ್ ಓರಂತೆ ನಡು ಪಗಲ್ವರಮ್ ಕಾದುವುದುಮ್...

**ಧರ್ಮರಾಯ:** ನಾವ್ ಇಂದಿನ ಅನುವರಮನ್ ಅನಿಬರುಮ್ ಒಂದಾಗಿ ಭೀಷ್ಮರೊಳ್ ಕಾದುವಮ್.

(ಎಂದು ಸಮಕಟ್ಟಿ ಧರ್ಮಪುತ್ರನ್ ಕದನತ್ರಿಣೇತ್ರನನ್ ಮುಂದಿಟ್ಟು ಸಮಸ್ತಬಲಮ್ ಬೆರಸು ಕಾದುವ ಸಮಕಟ್ಟನ್ ದುರ್ಯೋಧನನ್ ಅಱಿದು...)

**ದುರ್ಯೋಧನ:** ಕುರುಬಲಮ್ ಎಂಬುದು ಈ ಸುರನದೀಜನ ತೋಳ್ವಲಮ್ ಎಂಬ ವಜ್ರಪಂಜರದೊಳಗೆ ಇರ್ದು ಬಳ್ದಪುದು. ಪಾಂಡವ ಸೈನ್ಯಮುಮ್ ಇಂದು ಭೀಷ್ಮರ್ ಒರ್ವರೊಳ್ ಇರದೆ ಆಂತು ಕಾದಲ್, ಅವರನ್ ಪೆಱಗಿಕ್ಕಿ ಕಡಂಗಿ ಕಾದಿ ನಿತ್ತರಿಸುವೆನ್.

(ಎಂದು ತಱಿಸಂದು ಪಾಂಡವಬಲಕ್ಕೆ ಇದಿರನ್ ತಾಗಿದನ್. ಅಂತು ತಾಗುವುದುಮ್ ಸಾತ್ಯಕಿ ಕೃತವರ್ಮನೊಳ್; ಯುಧಿಷ್ಠರನ್ ಶಲ್ಯನೊಳ್; ಸೌಭದ್ರನ್ ಅಶ್ವತ್ಥಾಮನೊಳ್; ಸಹದೇವನ್ ಶಕುನಿಯೊಳ್; ನಕುಲನ್ ಚಿತ್ರಸೇನನೊಳ್; ಚೇಕಿತಾನನ್ ಸೈಂಧವನೊಳ್; ಘಟೋತ್ಕಚನ್ ಕೃಪನೊಳ್; ಭೀಮಸೇನನ್ ಕೌರವನೊಳ್; ಕಳಿಂಗರಾಜನ್ ಪಾಂಚಾಳ ರಾಜನೊಳ್; ಅತಿರಥಮಥನನ್ ದ್ರೋಣಾಚಾರ್ಯರೊಳ್; ಅವರ್ ಅವರೊಳ್ ಅದಿರದೆ ಆಂತಾಗಳ್ ನಡುವ, ಇಡುವ ಆರ್ದು ಅರಿವ, ನೇರ್ವ, ಪಳಂಚುವ, ಪೋರ್ವ ಬಾಣದಿಂದೆ ಉಡಿದು, ಸಿಡಿಲ್ದು, ಸೂಸಿಯೆ, ಕಳಲ್ದು, ಬಳಲ್ದು, ಸಡಿಲ್ದು,

ಜೋಲ್ದು, ನೇಲ್ದು, ಉಡಿದ ನೊಗಮ್, ಧ್ವಜಮ್, ಪಲಗೆ, ಕೀಲ್, ಕವರ್, ಅಚ್ಚು, ತುರಂಗಮನ್ ರಥಮ್ ಕಿಡೆ, ಕವರಿಂದೆ ಅಗುರ್ವನ್ ಒಳಕೊಂಡಿರೆ ಮಹಾರಥರ್ ತಳ್ತಿಱಿದರ್. ಅಂತು ಕಿಡಿಗುಟ್ಟಿದಂತೆ ತಳ್ತಿಱಿಯೆ, ಜಗದೇಕಮಲ್ಲಂಗೆ ಮಾರ್ಮಲೆಯಲಾಱದೆ ಕುರುಬಲಮ್ ಎಲ್ಲಮ್ ಒಲ್ಲನೆ ಉಲಿದು ಓಡಿ ಭೀಷ್ಮರ ಮಱೆಯನ್ ಪೊಕ್ಕಾಗಳ್, ಧವಳಹಯನ್ ಧವಳರಥನ್ ಧವಳ ಉಷ್ಣೀಷಮ್ ಶಶಾಂಕ ಸಂಕಾಶ ಯಶೋಧವಳಿತ ಭುವನನ್ ಅವಯವದಿನ್ ಬಂದು ಧರ್ಮತನಯನ ಬಲದೊಳ್ ತಾಗಿದನ್.

ಅಂತು ತಾಗಿದ ಸಿಂಧುನಂದನನ ಕೋಪಶಿಖಿ ಶಿಖಾಕಳಾಪಂಗಳೊಳ್ ಪುಡುಪುಡನೆ ಪುಳ್ಗಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕ ಶ್ರೀಜಯ ಪ್ರಮುಖ ನಾಯಕರ್ ಒಂದು ಅಕ್ಷೋಹಿಣೀ ಬಲಮ್ ಬೆರಸು ಭರಂಗೆಯ್ದು ಆಂತೊಡೆ, ಶರಸಂಧಾನದ ಬೇಗಮ್ ಅಂಬುಗಳನ್ ಅಂಬು ಈಂಬಂತೆ ಮೇಣ್ ಅಂಬಿನ ಆಗರಮ್ ಅಂಬು ಅಂತೆನೆ ಪಾಯ್ವ ಅರಾತಿ ಶರಸಂಘಾತಂಗಳನ್ ನುರ್ಗಿ, ನೇರ್ದು, ಅರಿದು, ಅಟ್ಟುಂಬರಿಗೊಂಡು ಕೂಡೆ ಕಡಿದಂತೆ ಗಾಂಗೇಯನ ಅಸ್ತ್ರಾಳಿಗಳ್ ಆ ಸೈನ್ಯಮನ್ ಪರ್ವಿ ಗೋಳ್ಮುರಿಗೊಂಡು ಆ ರಸಾತಳಮುಮನ್ ಉರ್ವಿದುವು.

ಅಂತು ಭೀಷ್ಮನ್ ಗ್ರೀಷ್ಮಕಾಲದ ಆದಿತ್ಯನಂತೆ ಕಾಯ್ದು ಅಂತಕಾಲದ ಅಂತಕನಂತೆ ಕೆಳರ್ದು ವಿಳಯಕಾಲ ಮೇಘದಂತೆ ಮೊಳಗಿ ಮಹಾಪ್ರಳಯ ಭೈರವನಂತೆ ಮಸಗಿ ಪಯಿಂಭಾಸಿರ್ವರ್ ಮಕುಟಬದ್ಧರನ್ ಕೊಂದಾಗಳ್, ಮಣಿಮಕುಟಾಳಿಗಳ್ ಬೆರಸು ಉರುಳ್ದ ನರೇಂದ್ರ ಶಿರಂಗಳೊಳ್ ಫಣಾಮಣಿಗಳ ದೀಪ್ತಿಗಳ್ ಬೆಳಗೆ, ಧಾತ್ರಿಯನ್ ಒಯ್ಯನೆ ಕಂಡಿಮಾಡಿ, ಕಣ್ ತಣಿವಿನಮ್ ಅಂದು ನಿಂದು ಇಱಿದ ಕೊಳ್ಗುಳಮನ್, ನಡೆ ನೋಳ್ಪ ಅಹೀಂದ್ರರೊಳ್ ಸೆಣಸಿದುದು ಎಂದೊಡೆ, ಸುರಸಿಂಧು ಪುತ್ರನಾ ಏರ್ವಸನಮ್ ಏನ್ ಪೊಗಳ್ವುದು. ಅಂತು ಸೋಮಕ ಬಲಮ್ ಎಲ್ಲಮನ್ ಪೇಳೆ

ಪೆಸರಿಲ್ಲದಂತು ಕೊಂದು, ಶ್ರೀಜಯಬಲಕ್ಕೆ ಅಪಜಯಮಾಗೆ ಕೊಂದುಮ್ ಓಡಿಸಿಯುಮ್ ಇಕ್ಕಿ ಗೆಲ್ದ ಮಲ್ಲನಂತೆ ಇರ್ದಾಗಳ್, ಜಗದೇಕಮಲ್ಲನ್ ಮೊದಲಾಗೆ ವಿರಾಟ ವಿರಾಟಜ ದ್ರುಪದ ದ್ರುಪದಜ ಚೇಕಿತಾನ ಯುಧಾಮನ್ಯು ಉತ್ತಮೋಜ ಸೌಭದ್ರ ಘಟೋತ್ಕಚ ಭೀಮಸೇನ ನಕುಲ ಸಹದೇವ ಸಾತ್ಯಕಿ ಪಂಚಪಾಂಡವ ಪ್ರಮುಖ ನಾಯಕರ್ ಎಲ್ಲರುಮ್ ಬೆರಸು ಧರ್ಮಪುತ್ರನ್ ಶಿಖಂಡಿಯನ್ ಮುಂದಿಟ್ಟುಕೊಂಡು ಬಂದು, ಪೇಂಕುಳಿಗೊಂಡ ಸಿಂಹಮನ್ ಮುತ್ತುವಂತೆ ಸುತ್ತಿ ಮುತ್ತಿದಾಗಳ್, ಅಂಬರಮೆಲ್ಲಮ್ ಅಂಬಿನೊಳ್ ಪೂಳೆ, ಮಹೀಭುಜರ್ ಎತ್ತಮ್ ಎಚ್ಚ ಕಿತ್ತಂಬುಗಳ್ ಎತ್ತ ಅವ್ವಳಿಸೆ, ಮಾಣದೆ ಅವನ್ ಕಡಿದಿಕ್ಕಿ, ತನ್ನ ನಲ್ಲಂಬುಗಳಿಂದಮ್ ಆರ್ದು ಇರದೆ ಅಡುರ್ತು ಇಸೆ, ಭೂಭುಜರೆಲ್ಲಮ್ ಬಿಲ್ಲುಮ್ ಬೆರಗಾಗೆ, ವಿಕ್ರಮಾರ್ಜುನನ್ ಸೆರಗಿಲ್ಲದೆ ಬಂದು ಪೊಣರ್ದನ್. ಅಂತು ಪೊಣರ್ದಾಗಳ್...)

**ಭೀಷ್ಮ:** (ತಮ್ಮ ಮನದಲ್ಲಿ)

ಎಮ್ಮ ಮಮ್ಮಂಗಮ್ ಎಮಗಮ್ ಈಗಳ್ ಅನುವರಮ್ ದೊರೆಯಾಯ್ತು.

(ಎಂದು ಪರಶುರಾಮನ ಕೊಟ್ಟ ದಿವ್ಯಾಸ್ತ್ರಂಗಳನ್ ಒಂದನೊಂದು ಸೂಳೊಳೆ ತೊಟ್ಟು ಎಚ್ಚಾಗಳ್, ಜ್ವಳನ ಪತತ್ರಿಯನ್ ವಾರುಣಪತ್ರಿಯಿನ್ ಕಡಿದು, ಐಂದ್ರಬಾಣಮನ್ ಸಮೀರಣಾಸ್ತ್ರದಿನ್ ಕಳೆದು, ಇದಿರ್ಚಿದ ಭೂಭುಜರೆಲ್ಲರನ್ ಭಯಂಗೊಳಿಸಿ, ಸುರರ್ ಅಂಬರದೊಳ್ ತಗುಳ್ದು ಬಿಚ್ಚಳಿಸೆ, ನಿಶಾತವಜ್ರಿಶರದಿನ್ ನದೀಜನ್ ಉಚ್ಚಳಿಸೆ ಗುಣಾರ್ಣವನ್ ಕಾದಿದನ್. ಏನ್ ಕಲಿಯೋ. ಅಂತು ಅಮೋಘಾಸ್ತ್ರ ಧನಂಜಯನ್ ತನ್ನ ಅಮೋಘಾಸ್ತ್ರಂಗಳನ್ ಸಾಮಾನ್ಯ ಅಸ್ತ್ರಂಗಳೊಳ್ ಕಡಿದೊಡೆ, ಧರ್ಮಪುತ್ರಂಗೆ ತನ್ನ ನುಡಿದ ನುಡಿವಳಿಯನ್ ನೆನೆದು, ಅಲ್ಲಳಿಗಾಳೆಗಮ್ ಕಾದೆ, ಉದಗ್ರ ನಾಯಕರ ಸಾಯಕಮೆಲ್ಲಮನ್ ಕಡಿದನ್. ಆ ಶಿಖಂಡಿ ಪೊಕ್ಕು ಅಡಿಗಿಡೆ ಬಂದು ಮುಂದೆ ನಿಲೆಯುಮ್, ಮೊಗಮನ್ ನಡೆ

ನೋಡಿ, ಆತನ್ ಆರ್ದು ಒಡನೊಡನೆ ಎಚ್ಚೊಡೆ, ಎಚ್ಚಮೊನೆಯಂಬುಗಳ್ ಅಳ್ಗಿಡಿವೋಗೆಯುಮ್, ಸುರಸಿಂಧುನಂದನನ್ ಮನಮ್ ಕಿಡನ್. ಅವನ್ ಅಂಕೆಗೊಳ್ಳನ್. ಅಗಿಯನ್. ಸುಗಿಯನ್.)

**ಭೀಷ್ಮ:** ಇದು ರಣಮ್. ಎನ್ನೊಳ್ ಆಂತು ಇಱಿವ ಮೆಯ್ಗಲಿಯುಮ್ ಸಮರೈಕಮೇರು. ಎನ್ನ ಅದಟುಮ್ ಅಳುರ್ಕೆಯುಮ್ ಪಿರಿದು. ಪೇಡಿಗೆ ಅದೆಂತು ಇದಿರಾಂಪೆನ್.

(ಎಂದು ಅಣಮ್ ಬೆದಱದೆ, ನಟ್ಟ ಕೂರ್ಗಣೆಯ ಬಿಣ್ಪೊಱೆಯಿಂದೆ ಪೆರ್ವಿದರ ಸಿಡಿಂಬಿನೊಳ್ ಉರ್ವಿ ಪುದಿದ ಒಂದು ಕುಳಾಚಳದಂತೆ ಸಿಂಧುಜನ್ ಬಳಲ್ದನ್. ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲಮುಟ್ಟದೆ, ಮೆಯ್ಯೊಳ್ ಅತ್ತಮ್ ಇತ್ತಮ್ ತೆಱೆದಿರ್ದ ಪುಣ್ಗಳ್ ಎಸೆವ ಅಕ್ಕರದಂತಿರೆ, **"ನೋಡಿ ಕಲ್ಲಿಮ್"** ಎಂಬಂತೆವೊಲ್ ಅಟ್ಟವಣೆಕೋಲ್ಗಳ ಮೇಲೆ ಎಸೆದಿರ್ದ ವೀರ ಸಿದ್ಧಾಂತದ ಶಾಸನಮ್ ಬರೆದ ಪೊತ್ತಗೆಯಂತೆ ಅಮರಾಪಗಾತ್ಮಜನ್ ಇರ್ದನ್.)

**ಭೀಷ್ಮ:** (ತನ್ನ ಮನದಲ್ಲಿ)

ಬಾಳಕಾಲದೊಳೆ ತೊಟ್ಟು ಅಂಕದ ಶೌಚಮ್ ನಡೆದುದು. ಈಗಳ್ ನಾನ್ ನೆಲನನ್ ಮುಟ್ಟಿ ಓಗಡಿಪುದೆ. ಏಕೆ ಅದು ಪೆಣ್ ಗಡಿಮ್.

(ಎಂದು ಮೆಯ್ಯೊಳ್ ಅಳ್ದಿಡಿದ ವಿಕರ್ಣ ಕೋಟಿಯೊಳ್ ಅಣಮ್ ನೆಲ ಮುಟ್ಟದೆ ಬಿಳ್ದು, ಅಯ್ಯ... ಸುರಸಿಂಧುನಂದನನ್ ಶೌಚಗುಣದ ಉನ್ನತಿಯನ್ ಒಡಂಬಡಿಸಿದನ್. ಅಂತು ಶರಪಂಜರದೊಳ್ ಒಱಗಿಯುಮ್, ಒಡಲಿಮ್ ಪತ್ತುವಿಟ್ಟು ಪೋಪ ಜೀವಮನ್ ಪೋಗಲ್ ಈಯದೆ, ಸ್ವಚ್ಛಂದ ಮಿಳ್ತು ಅಪ್ಪುದಱಿಂದ ಉತ್ತರಾಯಣಮ್ ಬರ್ಪನ್ನಮ್ ಇರಿಸಿದನ್. ಅಂತುಮ್ ಆಗಳ್ ಕುರುಬಲಮೆಲ್ಲಮ್...)

**ಕುರುಬಲ:** ಕುರುಕುಳವನ ಸಿಂಹನ್ ಶರಪಂಜರದೊಳ್ ಒಱಗಿದನ್. ಇನ್ ಎಮ್ಮನ್ ಕಾವರ್ ಆರ್.

(ಎಂದು ಒಲ್ಲನೆ ಉಲಿದು ಓಡಿ ಬೀಡನ್ ಪೊಕ್ಕಾಗಳ್, ಧರ್ಮಪುತ್ರನ್ ನಿಜಾನುಜಸಹಿತಮ್ ಬಂದು, ಬಲಗೊಂಡು ಕಾಲ ಮೇಲೆ ಕವಿದುಪಟ್ಟು...)

**ಧರ್ಮರಾಯ:** ತರುವಲಿಗಳನ್ ನಮ್ಮನ್ ತಾಯ್ವೋಲ್ ಕರುಣದಿನ್ ನಡಪಿದ ಅಜ್ಜರ್ ನೀಮ್ ಇಂತಿರೆಯುಮ್ ನೋಡಿದೆವು. ಏನ್ ನಮಗೆ ಅರಸಿಕೆಯೋ ಪೇಳಿಮ್.

(ಎಂದು ಶೋಕಮ್ ಗೆಯ್ದರ್. ಅಂತು ಶೋಕಮ್ ಗೆಯ್ದೊಡೆ...)

**ಭೀಷ್ಮ:** ನೀಮ್ ಅಂತು ಎನಲ್ವೇಡ. ಕ್ಷತ್ರಿಯ ಧರ್ಮಮ್ ಇಂತು. ಅದರ್ಕೆ ಅಳಲ್ವೇಡ. ಬೀಡಿಂಗೆ ಪೋಗಿಮ್.

(ಎಂದೊಡೆ...)

**ಪಾಂಡವರು:** ಮಹಾಪ್ರಸಾದಮ್ ಅಂತೆ ಗೆಯ್ವೆಮ್.

(ಎಂದು ಅನಿಬರುಮ್ ಎಱಗಿ ಪೊಡೆವಟ್ಟು ಪೋದರ್. ಆಗಳ್ ದುರ್ಯೋಧನನ್ ಬಂದು ಪೊಡೆವಟ್ಟು...)

**ದುರ್ಯೋಧನ:** ಆಂತ ಮಾರ್ವಲಮನ್ ಇಱಿವುದನ್ ಇನ್ನೆಗಮ್ ಅಚ್ಚರಿಯಾಗೆ ತಾಗಿ ತಳ್ತು ಇಱಿದಿರ್. ಇದೊಂದು ಅವಸ್ಥೆ ನಿಮಗೆ ಎನ್ನಯ ಕರ್ಮದಿನ್ ಆದುದು.

(ಎಂದೊಡೆ...)

**ಭೀಷ್ಮ:** ಕಂದ, ಪಾಂಡವರ ವೈರಮನ್ ಇನ್ ಮಱೆವುದು. ಕೋಪಮುಮ್ ಕಱುಪುಮ್ ಎನ್ನೊಡವೋಕೆ. ಎಡಂಬಡುಮ್ ಏವುದು, ಅದನ್ ಇನ್ನುಮ್ ಒಡಂಬಡು. ಸಂಧಿ ಮಾಡುವೆನ್

(ಎಂಬುದುಮ್ ದುರ್ಯೋಧನನ್ ಇಂತು ಎಂದನ್.)

**ದುರ್ಯೋಧನ:** ಅದಟಿನ ಅಳುರ್ಕೆಯನ್, ಬಲದ ಅಳುರ್ಕೆಯುಮನ್ ಗೆಡೆಗೊಂಡು ನೀಮ್ ಇದಾವುದು ಪಡೆಮಾತನ್ ಇಂತು ನುಡಿದಿರ್. ಪುದುವಾಳ್ಕೆಯೊಳ್ ಎನ್ನ ಬಳ್ಕಿದ ಅಳ್ಕಿದ ಬಗೆಗಂಡಿರೇ. ಮಗನೆ, ನೀನ್ ಪಗೆಯನ್ ನೆಟ್ಟನೆ ತಱಿದೊಟ್ಟು ಎನ್ನದೆ, ಬಗೆಗೆಟ್ಟು ದಾಯಿಗರೊಳ್ ಇನ್ ಮಗುಳ್ದುಮ್ ಪುದುವಾಳ್ವುದು ಎಂಬಿರೇ.

(ಎಂಬುದುಮ್..)

**ಭೀಷ್ಮ:** ಇಲ್ಲಿಂದಮ್ ಮೇಲಾದ ಕಜ್ಜಮನ್ ನೀನೆ ಬಲ್ಲೆ. ಬೀಡಿಂಗೆ ಬಿಜಯಮ್ ಗೆಯ್ಯಿಮ್.

(ಎನೆ ಸುಯೋಧನನ್ ಪೊಡವಟ್ಟು ಪೋದನ್.)



# ೭೪. ದ್ರೋಣರಿಗೆ ಸೇನಾಧಿಪತಿ ಪಟ್ಟ

(೫೧ ನೆಯ ಗದ್ಯದಿಂದ ೫೪ ನೆಯ ಗದ್ಯ)

## ಪಾತ್ರಗಳು

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಕರ್ಣ:** ಅಂಗರಾಜ್ಯದ ಒಡೆಯ.

**ದ್ರೋಣ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

# ದ್ರೋಣರಿಗೆ ಸೇನಾಧಿಪತಿ ಪಟ್ಟ

**ದುರ್ಯೋಧನ:** (ತನ್ನಲ್ಲಿಯೇ)

ಆತ್ಮೀಯ ಸೇನಾನಾಯಕನಪ್ಪ ಗಾಂಗೇಯನ್ ಬಿದಿರ ಸಿಡಿಂಬಿನ ಪೊದಱೊಳಗೆ ಮಱೆದು ಒಱಗಿದ ಮೃಗರಾಜನಂತೆ ಶರಶಯನದೊಳ್ ಒಱಗಿದನ್. ಕದನತ್ರಿಣೇತ್ರನನ್ ಎಂತು ಗೆಲ್ವೆನ್.

(ಎಂದು ಚಿಂತಿಸಿ ಮಂತ್ರಶಾಲೆಯನ್ ಪೊಕ್ಕು , ಕರ್ಣ ದ್ರೋಣ ಕೃಪ ಕೃತವರ್ಮ ಅಶ್ವತ್ಥಾಮ ಶಲ್ಯ ಶಕುನಿ ಸೈಂಧವ ಭೂರಿಶ್ರವಃ ಪ್ರಭೃತಿಗಳ್ಗೆಲ್ಲಮ್ ಬಳಿಯನಟ್ಟಿ ಬರಿಸಿ...)

**ದುರ್ಯೋಧನ:** ಪಾಂಡುಸುತರನ್ ಸಾಧಿಸಿಕೊಂಡು ಆಯ್ತೇ. ನಣ್ಪಿಂಗೆ ಬೆನ್ನಿತ್ತು ಅಜ್ಜನ ಮಾತು ಸೈತಾಯ್ತು ದಲ್. ನಮ್ಮ ಪಡೆಯನ್ ಕಾವನ್ನರ್ ಇನ್ನಾರೊ. ಕಾವೊಡೆ ಈತನ್ ಕರ್ಣನ್ ಸುಷ್ಠು ಅಕ್ಕುಮ್. ಅದಱಿನ್ ಆತಂಗೆ ನಾಮೆಲ್ಲಮ್ ನಿರ್ದ್ವೈತಮ್ ಬೀರದ ಬೀರವಟ್ಟಮನ್ ಇದನ್ ನಿರ್ವ್ಯಾಜದಿನ್ ಕಟ್ಟುವಮ್.

(ಎಂಬುದುಮ್, ಕರ್ಣನ್ ಇಂತು ಎಂದನ್.)

**ಕರ್ಣ:** ಸುರಸಿಂಧೂದ್ಭವನಿನ್ ಬಳಿಕ್ಕೆ ಸೇನಾಧಿಪತ್ಯಕ್ಕೆ ತಕ್ಕರೆ ಪೆಱರಾರ್. ಲೋಕೈಕ ಧನುರ್ಧರನ್ ಕಳಶಜನ್ ತಕ್ಕನ್. ನದೀನಂದನಂಗೆ ಆನ್ ನೆರವಾದನಪ್ಪೊಡೆ, ಇನಿತು ಏಕಾದಪ್ಪುದು. ಈ ಪೊಳ್ತೆ ಪೊಳ್ತು. ಇರಬೇಡ ಭೂಪತೀ. ನೀನ್ ವೀರಪಟ್ಟಮನ್ ಅದನ್ ದ್ರೋಣಂಗೆ ಈವುದು. **"ಅಂತು ಭೀಷ್ಮ ಆದನಂತರಮ್ ದ್ರೋಣ"** ಎಂಬುದು ಪರಾಶರ ವಚನಮ್.

(ಎನೆ, ಕರ್ಣನ ನುಡಿಗೆ ಒಡಂಬಟ್ಟು, ವಿಸಸನ ರಂಗಕ್ಕೆ ಆನ್ ಇರೆ, ಪೆಱರನ್ ಬೆಸಗೊಳ್ವುದೆ ಎಂದು ಜಯಪಟಹಂಗಳ್ ದೆಸೆದೆಸೆಗೆ ಎಸೆವಿನೆಗಮ್, ಕಳಶಭವನ್ ಬೀರವಟ್ಟಮನ್ ಕಟ್ಟಿಸಿಕೊಂಡನ್. ಅಂತು ಕುಂಭಸಂಭವನ್ ಅನೇಕ ಶಾತಕುಂಭ ಕುಂಭಸಂಭೃತ ಮಂಗಳಗಂಗಾಜಲಂಗಳಿಮ್ ಪವಿತ್ರೀಕೃತಗಾತ್ರನಾಗಿ ಕೌರವಬಳ ಅಗ್ರಗಣ್ಯನಾಗಿ ಇರ್ದನ್)



# ೭೫. ಸುಪ್ರತೀಕ ಆನೆಯ ಸಾವು

(೬೯ ನೆಯ ಪದ್ಯದಿಂದ ೮೨ ನೆಯ ಗದ್ಯ)

## ಪಾತ್ರಗಳು

**ಭಗದತ್ತ:** ಪ್ರಾಗ್ ಜ್ಯೋತಿಷ ರಾಜ್ಯದ ರಾಜ. ಕುರುಕ್ಷೇತ್ರ ಯುದ್ಧದಲ್ಲಿ ಕೌರವರ ಕಡೆ ಹೋರಾಡಿದನು.

**ಭೀಮ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

# ಸುಪ್ರತೀಕ ಆನೆಯ ಸಾವು

**ಭಗದತ್ತ:** ಎನ್ನ ಏಱಿದ ಈ ಆನೆಯುಮ್, ದೇವೇಂದ್ರನ ಐರಾವತದ ಕೆಳೆಯನ್ ದಲ್ ದಿಗಿಭಮ್. ದುರ್ಯೋಧನನ್ ಎನಗೆ ನಚ್ಚಿದನ್. ಭೀಮನ್ ಇದಿರಮ್ ಎಳ್ತಂದನ್. ಈಗಳ್ ಸಂದ ಎನ್ನ ಅಳವುಮ್ ಅದಟುಮ್ ಮುಗಿಲನ್ ಮುಟ್ಟಿತ್ತು, ನೆಗೆಳ್ದೆನ್.

(ಎಂದು ಆರ್ದು ದೋರ್ದರ್ಪಯುಕ್ತಮ್ ಭಗದತ್ತನ್ ಸುಪ್ರತೀಕ ದ್ವಿಪಮನ್ ಉಪಚಿತ ಉತ್ಸಾಹದಿನ್ ತೋಱಿಕೊಟ್ಟನ್. ಮದಕರಿಯ ಪರಿವ ಭರದಿನ್ ನೆಲನ್ ಅದಿರ್ದೊಡೆ, ಒಡ್ಡಿನಿಂದ ಚತುರಂಗಮುಮ್ ಕೂಡಿದ ಚದುರಂಗದ ಮಣೆಯನ್ ಅಲ್ಗಿದಂತಪ್ಪಿನೆಗಮ್ ಒರ್ಮೊದಲೆ ನಡುಗಿದುದು. ಆಗಳ್ ಅಸುರನ್ ಉಯ್ದ ನೆಲನನ್, ಆದಿ ವರಾಹನ್ ಅಱಸಲೆಂದು ಸಕಲ ಜಳಚರ ಕಳಿತ ಜಳನಿಧಿಗಳನ್ ಕಲಂಕುವಂತೆ ಪಾಂಡವ ಬಳ ಜಳನಿಧಿಯನ್ ಅಳಿಕುಳ ಝೇಂಕಾರ ಮುಖರಿತ ವಿಶಾಳ ಕರಟತಟಮ್ ಆ ದಿಶಾಗಜೇಂದ್ರನ್ ಕಲಂಕೆ, ಕರ್ಣತಾಳ ಪವನಾಹತಿಯಿನ್ ಜಳರಾಶಿ ತಳರ್ದುದು. ಕೆಯ್ಯ ಬಳ್ವಳಿಕೆಗೆ ದಿಗ್ಗಜಮ್ ದೆಸೆಯಿನ್ ಅತ್ತ ತೆರಳ್ದುವು. ಕಾಯ್ಪಿನಿಮ್ ದಿಶಾವಳಿವೆರಸು ಅಂಬರಮ್ ಪೊಗೆದು ಪೊತ್ತಿದುದು. ಆದ ಮದಾಂಬುವಿಮ್ ಜಗಮ್ ಜಳಧಿವೊಲಾಯ್ತು.

ಸುಪ್ರತೀಕಮನ್ ನೆಱೆಯೆ ಬಣ್ಣಿಪರ್ ಆರ್ ಗಳ. ಕರನಖದಂತಘಾತದಿನ್ ಉಗುರು ಉರುಳ್ವ, ಚತುರ್ಬಲದಿನ್ ತೆರಳ್ವ, ನೆತ್ತರ ಕಡಲ್ ಆ ಕಡಲ್ವರೆಗಮ್ ಎಯ್ದೆ, ಮಹಾಮಕರನ್ ಸಮುದ್ರದೊಳ್ ಪರಿವವೊಲ್ ಇಂತು ಅಗುರ್ವುವೆರಸು ಆ ಭಗದತ್ತನ ಕಾಲೊಳ್ ಸುಪ್ರತೀಕ ಗಜಮ್ ಆಜಿರಂಗದೊಳ್ ಅಚ್ಚರಿಯಪ್ಪಿನಮ್

ಏನ್ ಪರಿದುದೊ. ಅಂತು ಪರಿದ ಬೀದಿಗಳೊಳೆಲ್ಲಮ್ ನೆತ್ತರ ತೊಱೆಗಳ್ ಪರಿಯೆ, ಕೆಂಡದ ತೊಱೆಯಂತೆ ಪರಿದ ಸುಪ್ರತೀಕಮ್ ಕೆಯ್ಯ ಕಾಲ ಕೋಡ ಏಱಿನೊಳ್ ಬಲಮನ್ ಎಲ್ಲಮ್ ಜವನೆ ಜಿವುಳಿದುಳಿವಂತೆ ತೊಳ್ತುಳಿದುಳಿದು, ಪದಿನಾಲ್ಸಾಸಿರ ಮದಾಂಧ ಗಂಧಸಿಂಧುರಂಗಳುಮನ್ ಒಂದು ಲಕ್ಕ ರಥಮುಮನ್ ಅರೆದು ಸಣ್ಣಿಸಿದಂತೆ ಮಾಡಿದಾಗಳ್, ಗಜಾಸುರನೊಳ್ ಆಸುಕರನ್ ಬೆರಸು ತಾಗುವ ಅಂಧಕಾರಾತಿಯಂತೆ ಭೀಮಸೇನನ್ ಬಂದು ಪೊಣರೆ...

**ಭಗದತ್ತ:** ತೊಲಗು ಇದು ಸುಪ್ರತೀಕ ಗಜಮ್. ಆನ್ ಭಗದತ್ತನೆನ್. ಇಲ್ಲಿ ನಿನ್ನ ತೋಳ್ವಲದ ಪೊಡರ್ಪು ಸಲ್ಲದು. ಎಲೆ... ಸಾಯದೆ ಪೋಗು.

(ಎನೆ ಭೀಮನ್ ಕೇಳ್ದು..)

**ಭೀಮ:** ಆಂತು ಒಲೆಯದಿರ್. ಉರ್ಕಿನೊಳ್ ನುಡಿವೆ. ಈ ಕರಿ ಸೂಕರಿಯಲ್ತೆ. ಪತ್ತಿ ಗಂಟಲನ್ ಒಡೆಯೊತ್ತಿ ಕೊಂದಪೆನ್. ಇದಲ್ತು, ಇದಱ ಅಮ್ಮನುಮ್ ಎನ್ನನ್ ಆಂಪುದೇ.

(ಎಂದು ನಾರಾಚಂಗಳಿನ್ ತೋಡುಮ್ ಬೀಡುಮ್ ಕಾಣಲಾಗದಂತು ಸುಪ್ರತೀಕ ಕರಿಯೆಂಬ ಗಿರಿಯ ಮೇಲೆ ಭೀಮನೆಂಬ ಕಾಲಮೇಘನ್ ಸರಲ ಸರಿಯನ್ ಸುರಿಯೆ, ದಿಕ್ಕರಿ ಸಿಡಿಲ್ ಎಱಪ ಅಂದದಿಂದೆ ಎಱಗಿ ವರೂಥಮನ್ ಪಡಲ್ವಿಡಿಸೆ, ಮರುತ್ಸುತನ್ ಮುಳಿದು ಮಚ್ಚರದಿನ್ ಗಜೆಗೊಂಡು ಸುತ್ತುಗೊಂಡು ಅಡಿಗಿಡೆ ನುರ್ಗಿ ಪೊಯ್ದು ಪೆಱಪಿಂಗುವುದು. ಕರಿ ನೊಂದು ಭೀಮನನ್ ಅಗುರ್ವಿಸಿ ಪಾಂಡವ ಸೈನ್ಯಮ್ ಅಳ್ಕುಱಲ್ ಕೋಪದಿನ್ ಪಿಡಿದು ಎಱಗಿತ್ತು. ಅಂತು ಎಱಗಿದೊಡೆ ಕೋಡ ಕೆಯ್ಯ ಕಾಲೆಡೆಗಳೊಳ್ ಬಿಣ್ಪುಮನ್ ಪೋಳೆವ ಅಂದದಿಂದ ಏರ್ದು, ಡೊಕ್ಕರಂಗೊಂಡು ಕುರುಕ್ಷೇತ್ರದಿಂದ ಅತ್ತ ಪನ್ನೆರಡು ಯೋಜನಂಬರಮ್ ಒತ್ತುವುದುಮ್, ಕರಿಯುಮ್ ಪವನಜನನ್ ಕುರುಭೂಮಿಯ ನಡುವರೆಗಮ್ ಒತ್ತೆ, ತದ್ದಿಕ್ಕರಿಗಮ್ ಭೀಮಂಗಮ್ ಉಗ್ರಸಂಗರಧರೆಯೊಳ್ ಆಗಳ್ ತೋಳ್ವಲಮ್ ಸರಿಸರಿಯಾದುದು. ಅನ್ನೆಗಮ್ ಇತ್ತ ಸಂಸಪ್ತಕಬಲಮೆಲ್ಲಮನ್ ಅಳಱೆ ಪೆಳಱೆ ಕಿವುಳಿದುಳಿದು ಕೊಲ್ವ ವಿಕ್ರಾಂತತುಂಗನ್ ಚಕ್ರಿಯನ್ ಇಂತು ಎಂದನ್.)

**ಅರ್ಜುನ:** ಪರಿದುದು ಸುಪ್ರತೀಕ ಗಜಮ್. ಏಱಿದವನ್ ಭಗದತ್ತನ್. ಆ ಮದ ದ್ವಿರದಮನ್ ಆಂಕೆಗೊಂಡು ಪೆಣೆವನ್ ಪವನಾತ್ಮಜನ್. ಈಗಳ್ ಆಹವಮ್ ಪಿರಿದು ದಲ್. ಅತ್ತ ಪೋಪಮ್.

(ಎನೆ, ಹರಿ ತತ್ ರಥಮನ್ ವಾಯುವೇಗದಿನ್ ಪರಿಯಿಸೆ, ಅಂಕದ ಪೊಂಕದ ಸುಪ್ರತೀಕಮನ್ ಹರಿಗನ್ ತಾಗಿದನ್. ಅಂತು ತಾಗಿ ಮೃಗರಾಜ ನಖರ ಮಾರ್ಗಣಂಗಳೊಳಮ್ ಕೂರ್ಮನಖಾಸ್ತ್ರಂಗಳೊಳಮ್ ಆನೆಯುಮನ್ ಭಗದತ್ತನುಮನ್ ಪೊಳ್ದೊಡೆ, ಭಗದತ್ತನ್ ಮುಳಿದು ಭೂದತ್ತಮಪ್ಪ ದಿವ್ಯಾಂಕುಶಮನ್ ಕೊಂಡು ಇಡುವುದುಮ್, ಅದು ವಿಲಯಾಗ್ನಿಯ ಕಿಡಿಗಳನ್ ಉಗುಳುತುಮ್ ಎಯ್ದೆವರ್ಪುದು. ಇದಿರನ್ ನಡೆದು ಅಜರನ್ ಉರದಿನ್ ಆಂತೊಡೆ, ಕಂಧರದೊಳ್ ಅಂಕುಶಮ್ ತುಡುಗೆವೊಲ್ ಎಸೆದಿರ್ದುದು ಆಗಳ್ ವಿಕ್ರಾಂತತುಂಗನ್ ಚೋದ್ಯಂಬಟ್ಟು ಇದೇನೆಂದು ಬೆಸಗೊಳೆ...)

**ಕೃಷ್ಣ:** ಇದು ಪೆಱತಲ್ತು. ಭೂತಲಮನ್ ಆನ್ ತರಲ್ ಆದಿ ವರಾಹನ್ ಆದೆನ್. ಅಂದು ಅದಱ ವಿಷಾಣಮನ್ ಬಳಿಯಮ್ ಆ ವಸುಧಾಂಗನೆಗೆ ಇತ್ತೆನ್. ಈತನ್ ಆ ಸುದತಿಯ ಪೌತ್ರನ್. ಆಕೆ ಕುಡೆ, ಇವಂಗೆ ಬಂದುದು. ಎನಗಲ್ಲದೆ ಆನಲ್ ಆಗದುದಱಿಮ್ ಆಂತೆನ್. ಗುಣಾರ್ಣವ, ಇನ್ ಈ ಕರಿಕಂಧರಮನ್ ತಱಿವುದು.

(ಎಂಬುದುಮ್, ಒಂದೆ ದಿವ್ಯಶರದಿನ್ ಶಿರಮನ್ ಪಱಿಯೆಚ್ಚೊಡೆ, ಆತನ್ ಒತ್ತಂಬದಿನ್ ಆಂತೊಡೆ...)

**ಅರ್ಜುನ:** ಆನ್ ಬಱಿದೆ ತಪ್ಪಿದೆನ್.

(ಎಂದು ಕಿರೀಟಿ ತನ್ನ ಬಿಲ್ಲನ್ ಬಿಸುಟಿ ಇರ್ದೊಡೆ..)

**ಕೃಷ್ಣ:** ಇದೇತಱಿನ್ ಆಕುಲಮ್ ಇರ್ದೆ. ನೋಡು ಇದು ಎಂತು.

(ಎಂಬುದುಮ್, ಮುಳಿಸಿನ್ ಗುಣಾರ್ಣವನ್ ಎರಡು ಕೈಗಳುಮನ್ ಎಚ್ಚನ್. ಎಚ್ಚು, ಅವನ ತಲೆಯುಮನ್ ಪಱಿಯೆಚ್ಚೊಡೆ, ದಿಕ್ಕರಿಯ ತಲೆಯುಮ್ ಆತನ ತಲೆಯುಮ್ ಪಚ್ಚೆಕ್ಕಿದಂತೆ, ಕೆಯ್ಗಳುಮ್ ಧರೆಯೊಳ್ ಅಚ್ಚರಿಯಪ್ಪಿನೆಗಮ್ ಒಡನೆ ಉರುಳ್ದುವು. ಇತ್ತ ಅರಿಗಂಗೆ ಅಮಿತ್ರಜಯಮ್ ಅಪ್ಪುದುಮ್, ಅತ್ತ ಅಮರರ್ಕಳ್ ಆರ್ದು ಪುಷ್ಪವೃಷ್ಟಿಗಳನ್ ಸೂಸುತ್ತಿರೆ, ಓಗರವೂಗಳ ಬಂಡನ್ ಎಯ್ದೆ

ಪೀರುತ್ತೆ, ಇಂದ್ರವನದಿನ್ ಮಱಿದುಂಬಿಗಳ್ ಇಂದ್ರನೀಲಮನ್ ಮುತ್ತುಮನ್ ಓಳಿಯೊಳೆ ಕೋದು, ಎಳಲಿಕ್ಕಿದ ಮಾಲೆಯಂತೆ ವೋಲ್ ಒಡವಂದುವು. ನರಶರಂಗಳಿಮ್ ಧರಣೀಸುತನ್ ಅಳಿದನ್. ದಿಕ್ಕರಿ ಕೆಡೆದುದು. ಭುವನಮುಮ್ ಇನ್ ಉರಿಯದೆ ಇರದು. ಆನ್ ಅಡಗುವೆನ್ ಎಂಬವೊಲ್ ಅರ್ಕನ್ ಅಪರಜಳನಿಧಿಗೆ ಇಳಿದನ್. ಆಗಳ್ ಎರಡುಮ್ ಪಡೆಗಳ್ ಅಪಹಾರತೂರ್ಯಂಗಳನ್ ಬಾಜಿಸಿ, ತಂತಮ್ಮ ಬೀಡುಗಳ್ಗೆ ಪೋಪುದುಮ್...)



# ೭೬. ದ್ರೋಣಾಚಾರ್ಯರ ಶಪಥ

(೮೨ ನೆಯ ಗದ್ಯದಿಂದ ೮೫ ನೆಯ ಗದ್ಯ)

**ಪಾತ್ರಗಳು**

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ದ್ರೋಣಾಚಾರ್ಯ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

## ದ್ರೋಣಾಚಾರ್ಯರ ಶಪಥ

ಸುಯೋಧನನ್ ಭಗದತ್ತನ ಸಾವಿಂಗೆ ಅಳಲ್ದು, ತೊಟ್ಟ ಸನ್ನಣಮನಪ್ಪೊಡಮ್ ಕಳೆಯದೆಯುಮ್ ಅರಮನೆಗೆ ಪೋಗದೆ ಕುಂಭಸಂಭವನಲ್ಲಿಗೆ ವಂದು...

**ದುರ್ಯೋಧನ:** ಮಸಕಮ್ ಕುಂದದ ಸುಪ್ರತೀಕ ಗಜಮನ್ ಧಾತ್ರೀಸುತನ್ ಕೀಱಿ ಚೋದಿಸಿ ಭೀಮನ್ ಗೆಲೆ, ಹರಿಯುಮ್ ತಾನುಮ್ ಮುಟ್ಟೆವಂದು, ಭರಂಗೆಯ್ದು ತನ್ನ ಎಸಕಮ್ ಕಾಯದೆ, ಅಧರ್ಮ ಯುದ್ಧದೆ ನರನ್ ಕೊಲ್ವಲ್ಲಿ, ಕಂಡು ಇಂತು ಉಪೇಕ್ಷಿಸಿ ನೀಮುಮ್ ನಡೆ ನೋಡುತಿರ್ದಿರ್ ಎನೆ, ಮತ್ತೆ ಇನ್ನಾರನ್ ಆನ್ ನಂಬುವೆನ್.

(ಎಂದು ನುಡಿದ ಪನ್ನಗಧ್ವಜನ ನುಡಿಗೆ ಕಾರ್ಮುಕಾಚಾರ್ಯನ್ ಇಂತು ಎಂದನ್.)

**ದ್ರೋಣಾಚಾರ್ಯ:** ಎನಗಲ್ತು ಆರ್ಗಮ್ ವಿಜಯನ್ ಅಸಾಧ್ಯನಲ್ತೆ. ನೀನ್ ಆತನನ್ ಗೆಲ್ವ ಮಾತನ್ ಅಮೋಘಮ್ ಇಂದೆ ಬಿಸುಡು. ನಾಳೆ ವಿಜಯನ್ ಮಾರ್ಕೊಳ್ಳದಂದು ಉರ್ಕಿ ಪೊಕ್ಕನನ್ ಒರ್ವನನ್ ಆಂತು ಕದನದೊಳ್ ಇಕ್ಕುವೆನ್ ಮೇಣ್ ಧರ್ಮನನ್ ಕಟ್ಟುವೆನ್. ಭೂಪತಿ, ನೀನ್ ಇಂತು ಅನ್ನನನ್ ಬಗೆಯಲ್ವೇಡ.

(ಎಂಬುದುಮ್...)

**ದುರ್ಯೋಧನ:** ಆನ್ ಇನಿತನ್ ನಿಮ್ಮನ್ ಪೂಣಿಸಲೆ ಬಂದೆನ್.

(ಎಂದು ಪೊಡೆಮಟ್ಟು ಬೀಳ್ಕೊಂಡು ಪೋಗಿ, ಸಂಸಪ್ತಕರ್ಕಳ್ಗೆ ಬಳಿಯನಟ್ಟಿ ಬರಿಸಿ...)

**ದುರ್ಯೋಧನ:** ಆಹವಾಜಿರದೊಳ್ ಅರಿಗನನ್ ಆಂಪ ಗಂಡುಮ್ ಅದಟುಮ್ ನಿಮಗೆ ಆವಗಮ್ ಆದುದು. ಅದರ್ಕೆ ನಾಳೆ ನರನನ್ ತೆಗೆದು ಉಯ್ವುದು. ಧರ್ಮಪುತ್ರನನ್ ಗುರು ಪಿಡಿದಪ್ಪನ್.

(ಎಂದು ಅವರನ್ ಆಗಳೆ ಪೂಣಿಸಿ ಪೋಗವೇಳ್ದು, ಮಚ್ಚರದೊಳೆ ಮಾಣದೆ ಅಸುಂಗೊಳೆ ಕಕ್ಕಸರಂಜೆ ಸಂಜೆಯೊಳ್ ಒಡ್ಡಿದನ್. ಆಗಳ್ ಪಾಂಡವ ಪತಾಕಿನಿಯುಮ್ ಇರದೆ ಪೊಜಿಮಟ್ಟು ಅರ್ಧಚಂದ್ರ ವ್ಯೂಹಮನ್ ಒಡ್ಡಿ ನಿಲೆ ಸಂಸಪ್ತಕರ್ ತಮಗೆ ಮಿಳ್ತುಗರೆವಂತೆ ವಿಕ್ರಮಾರ್ಜುನನನ್ ಕರೆದು ಉಯ್ದರ್.)



# ೭೭. ಚಕ್ರವ್ಯೂಹ ಪ್ರಸಂಗ

(೮೫ ನೆಯ ಗದ್ಯದಿಂದ ೧೦೪ ನೆಯ ಪದ್ಯ)

## ಪಾತ್ರಗಳು

**ದ್ರೋಣ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅಭಿಮನ್ಯು:** ಅರ್ಜುನ ಮತ್ತು ಸುಭದ್ರೆಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ದುಶ್ಶಾಸನ:** ದುರ್ಯೋಧನನ ತಮ್ಮ.

**ಜಯದ್ರಥ:** ದುರ್ಯೋಧನನ ತಂಗಿ ದುಶ್ಶಲೆಯ ಗಂಡ.

# ಚಕ್ರವ್ಯೂಹ ಪ್ರಸಂಗ

ಆಗಳ್ ಪಾಂಡವ ಪತಾಕಿನಿಯುಮ್ ಇರದೆ ಪೊಱಮಟ್ಟು ಅರ್ಧಚಂದ್ರ ವ್ಯೂಹಮನ್ ಒಡ್ಡಿ ನಿಲೆ, ಸಂಸಪ್ತಕರ್ ತಮಗೆ ಮಿಳ್ತುಗರೆವಂತೆ ವಿಕ್ರಮಾರ್ಜುನನನ್ ಕರೆದು ಉಯ್ದರ್. ಇತ್ತ...

**ದ್ರೋಣ:** (ತನ್ನ ಮನದಲ್ಲಿ)

ಗುರು ಭಾರ್ಗವನ್ ಇಂತು ಈ ಒಡ್ಡನ್ ಅಱಿಪಿದನ್. ಇದನ್ ಗೆಲಲ್ ಆವನುಮ್ ನೆಱೆಯನ್. ಒರ್ವನ್ ಉರ್ಕಿನ ಅಳುರ್ಕೆಯಿನ್ ಪೊಕ್ಕೊಡೆ, ಪೊಕ್ಕನೆ ಮತ್ತೆ ಅಣಮ್ ಪೊಱಮಡನ್. ಅಂತು ಆ ಪಾಂಡವ ಸೈನ್ಯಮನ್ ತಱಿದು ಒಟ್ಟುವೆನ್.

(ಎಂದು ಬಿಲ್ಲೆಱೆಯನ್ ಆಹವರಂಗದೊಳ್ ಅಂಕದ ಚಕ್ರವ್ಯೂಹಮನ್ ಒಡ್ಡಿದನ್. ಅಂತು ಒಡ್ಡಿದ ಚಕ್ರವ್ಯೂಹದ ನಡುವೆ ಎಡೆ ಅಱಿದು ಕಳಿಂಗರಾಜನ ಕರಿಘಟೆಗಳುಮನ್ ಕರ್ಣ ಶಲ್ಯ ಶಕುನಿ ಕೃಪ ಕೃತವರ್ಮ ಭೂರಿಶ್ರವ ಅಶ್ವತ್ಥಾಮ ದುರ್ಯೋಧನ ವೃಷಸೇನ ಲಕ್ಕಣಾದಿಗಳಪ್ಪ ಅತಿರಥ ಮಹಾರಥ ಸಮರಥ ಅರ್ಧರಥರ್ಕಳನ್ ಇರಿಸಿ; ಮತ್ತಮ್ ಅವರ ಬಳಸಿಯುಮ್ ಅನೇಕ ಸಾಮಜಬಲಮ್ ಬೆರಸು ಜಯತ್ಸೇನ ಸುದಕ್ಷಿಣ ಕಾಂಭೋಜಾದಿ ನಾಯಕರನ್ ಇರಿಸಿ; ಮತ್ತಮ್ ಅವರ ಕೆಲದೊಳ್ ಎಡೆ ಅಱಿದು ಬಕಾಸುರ ಜಟಾಸುರ ಮಕ್ಕಳಪ್ಪ ಅಳಂಭೂಷಣ ಹಳಾಯುಧ ಮುಸಳಾಯುಧ ಕಾಳ ನೀಳ ರೂಕ್ಷ ರಾಕ್ಷಸ ಬಲಮನ್ ಇರಿಸಿ; ಮತ್ತಮ್ ಅವರ ಕೆಲದೊಳ್ ಇವರ್ಗೆ ಇವರ್ ಪಾಸಟಿಯಾಗಿ

ಇರ್ಪುದೆಂದು ನಿಂದ ನೆಲೆಯೊಳ್ ತಳರದೆ ನಿಲ್ವಂತಾಗಿ ಇರಿಸಿ; ಗುಹೆಯ ಬಾಗಿಲೊಳ್ ಸಿಂಹಮ್ ಇರ್ಪ ಅಂದದಿನ್ ಭಾರದ್ವಾಜನ್ ಸಿಂಧುರಾಜನ್ ಬೆರಸು ಚಕ್ರವ್ಯೂಹದ ಬಾಗಿಲೊಳ್ ನೆಱೆದು ಮೆಱೆದು ನಿಂದಾಗಳ್; ಧರ್ಮಪುತ್ರನ್ ಏಗೆಯ್ವ ತೆಱನುಮನ್ ಅಱಿಯದೆ ಅಭಿಮನ್ಯುವನ್ ಕರೆದು ಇಂತು ಎಂದನ್.)

**ಧರ್ಮರಾಯ:** ಇದು ಚಕ್ರವ್ಯೂಹಮ್. ಈ ವ್ಯೂಹಮನ್ ಒಡೆವ ಅದಟನ್ ಪಾರ್ಥನ್. ಅಂತು ಆತನುಮ್ ಗೆಂಟಿದನ್. ಎಮ್ಮ ಈ ನಾಲ್ವರುಮ್ ಇದನ್ ಭೇದಿಸಲ್ ಅಱಿಯೆವು. ಕಂದ, ನೀನ್ ಬಲ್ಲ. ಪೇಳ್

**ಅಭಿಮನ್ಯು:** ಆನ್ ಎಮ್ಮಯ್ಯನಲ್ ಕೇಳ್ದು ಇದನ್ ಅಱಿವೆನ್. ಇದೇನ್ ಅಯ್ಯ... ಚಿಂತಾಂತರಮ್. ಇದನ್ ಈಗಳ್ ವನ್ಯಗಂಧದ್ವಿರದಮೆ ಕೊಳನಮ್ ಪೊಕ್ಕವೊಲ್ ಪೊಕ್ಕು, ಕಾದಿ ತೋರ್ಪೆನ್. ಅನಲನ ಕೊಟ್ಟ ಗಾಂಡಿವದ ತೇರ, ಮುರಾರಿಯ ಮೆಚ್ಚ, ದೇವದೇವನ ದಯೆಗೆಯ್ದ ಸಾಯಕದ ಬೆಂಬಲದೊಳ್ ಕಲಿಯೆಂದು ಕೆಮ್ಮನೆ ಅಮ್ಮನನ್ ಅದಟಱಳ್ಗುತಿರ್ಪ ಇರವು ಇದೇನ್. ಪಗೆಯ ಒಡ್ಡು ಗೆಲಲ್ಕೆ ಅಳುಂಬಮ್ ಎಂಬನಿತುವರಮ್ ನಿಮಗೆ ಅತ್ತಳಗಮ್ ಬರೆ, ಮತ್ತೆ ಮಾಣ್ಬೆನೇ. ನೆಱೆದು ಚತುರ್ಬಲಮ್ ಬೆರಸು ಬಂದು, ಉಱದೆ ಒಡ್ಡಿದ ಗಂಡರ್ ಆರುಮ್ ಎನ್ನಱಿಯದ ಗಂಡರೇ. ನೆಗೆದ ನೆತ್ತರ ಸುಟ್ಟುರೆ ಕಂಡದ ಇಂಡೆಗಳ್ ಪಱಿದು, ನಭಂಬರಮ್ ಪರೆದು, ಪರ್ವಿ ಲಯಾಗ್ನಿ ಶಿಖಾಕಳಾಪಮನ್ ಮಱೆಯಿಸೆ, ತಾಗಿ ತಳ್ತು ಇಱಿಯದನ್ನೆಗಮ್ ಎಂತು ನರಂಗೆ ಪುಟ್ಟಿದೆನ್.

(ಎಂಬುದುಮ್ ಯಮನಂದನನ್ ಇಂತು ಎಂದನ್.)

**ಧರ್ಮರಾಯ:** ಅನುವರದಲ್ಲಿ ತಳ್ತು ಪಗೆಯನ್ ತವೆ ಕೊಂದೊಡಮ್, ಆಂತ ಅರಾತಿಸಾಧನದೊಳಗೆ ಅಳ್ಗಿತಳ್ಗಿದೊಡಮ್, ಎನ್ನಯ ಸಂತತಿಗೆ ಆಗಿಸಿರ್ದ ನಿನ್ನನೆ ಮದದಂತಿದಂತ ಮುಸಲಾಹತಿಗಮ್, ಕರವಾಳ ಬಾಯ್ಗಮ್, ಅಂಬಿನ ಮೊನೆಗಮ್, ಮಹಾರಥರ

ತಿಂತಿಣಿಗಮ್ ಪಿಡಿದು ಎಂತು ನೂಂಕುವೆನ್. ಮಗನೆ, ಪದಿನಾಲ್ಕು ವರುಷದ ಮಗನಯ್. ನಿನ್ನನ್ನನ್ ಒರ್ವನನ್ ಪಗೆವಡೆಯ ಒಡ್ಡುಗಳನ್ ಒಡೆಯಲ್ಕೆ ಪೇಳ್ದು, ಎರ್ದೆ ಧಗಮೆನೆ ಕಱುವೇ... ಸೈರಿಸುವ ಉಪಾಯಮ್ ಆವುದು.

(ಎಂದೊಡೆ ಆ ಮಾತನ್ ಮಾರ್ಕೊಂಡು ಅಭಿಮನ್ಯು ಇಂತು ಎಂದನ್.)

**ಅಭಿಮನ್ಯು:** ರಣದೊಳ್ ಕ್ರಮಮನ್ ಕೆಯ್ಕೊಳಲೆಂದು ಪುಟ್ಟಿ ಸಾವನ್ನೆಗಮ್ ಮಾಣ್ದೊಡೆ ಅಕ್ರಮಮ್ ಅಕ್ಕುಮ್, ಕ್ರಮಮ್ ಅಕ್ಕುಮೇ. ಕ್ರಮಮನ್ ಆನ್ ಏಗೆಯ್ದಪೆನ್. ವಿಕ್ರಮಮ್ ಕ್ರಮಮ್ ಆನ್ ವಿಕ್ರಮದಾತನೆನ್. ಕ್ರಮದ ಮಾತು ಅಂತು ಇರ್ಕೆ. ಮಾಣ್ದು ಇರ್ದೊಡೆ ಆನ್ ಕ್ರಮಕೆಂದು ಇರ್ದೆನೆ. ಬಿಟ್ಟೊಡಮ್ ಬಿಡದೊಡಮ್ ಬೀಳ್ಕೊಂಡೆನ್ ಇನ್ ಮಾಣ್ಬೆನೇ.

(ಎಂದು ತನ್ನ ಏಱಿದ ಕನಕ ರಥಮನ್ ತನ್ನ ಮನದನ್ನನಪ್ಪ ಜಯನೆಂಬ ಸಾರಥಿಯನ್ **"ಚೋದಿಸು"** ಎಂದಾಗಳ್.. ಎಱಗುವ ಬಟ್ಟನಂಬುಗಳ ಬಲ್ಸರಿ ಕುಂಭಜನನ್ ಮರಳ್ಚೆ. ಪಾಯ್ದು ಅಱಕೆಯ ಪಾರೆಯಂಬುಗಳ ತಂದಲ್ ಸಿಂಧುರಾಜನನ್ ಅಗುರ್ವಿಸಿ ಮಱುಗಿಸೆ; ಬಾಗಿಲೊಳ್ ಮುಸುಱ ನಿಂದ ಘಟಾವಳಿಯನ್ ತೆರಳ್ಚಿ ತತ್ತಱದಱದು ಒತ್ತಿ ಅಭಿಮನ್ಯು ವಿರೋಧಿಬಳಾಂಬು ರಾಶಿಯನ್ ಪೊಕ್ಕನ್.

ಅಂತು ಪೊಕ್ಕು ವಿರೋಧಿ ಸೈನ್ಯಮನ್ ಮಾರಿ ಪೊಕ್ಕಂತೆ ಪೆಣಮಯಮ್ ಮಾಡಿ, ತೂಱಕೊಂಡ ಜೋಳದಂತಿರೆ ಪಡಲ್ವಡಿಸಿದಾಗಳ್, ಒಣಗಿದುದು ಪೆರ್ವಿದಿರ ಒಂದು ಪೆರ್ವೊದಱನ್ ಮೊರೆದು ಉರ್ವುವ ಆಶುಶುಕ್ಷಣಿಯವೊಲ್ ಆಂತ ಖಳ್ಗನಿವಹಕ್ಕೆ, ರಥಕ್ಕೆ, ಮತ್ತವಾರಣ ನಿವಹಕ್ಕೆ, ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಮ್ ನೊಣೆಯಲುಮ್ ಉರ್ಚಿ ಮುಕ್ಕಲುಮ್ ಯುದ್ಧರಂಗದೊಳ್ ಇದೇನ್ ನೆಱ ಕಲ್ತುವೊ. ಅಂತು ಇದಿರಾಂತ ಮಾರ್ಪಡೆ ಎಲ್ಲಮನ್ ಜವನ ಪಡೆಗೆ ಪಡಿಗರ್ಚ್ಚಿಕ್ಕುವಂತೆ ಇಕ್ಕಿ ನಿಂದ

ನರನಂದನನನ್ ಕಂಡು, ವಿಕ್ರಮಕ್ಕಮ್ ಕ್ರಮಕ್ಕಮ್ ಪುರುಡಿಸುವ ಸುಯೋಧನನ ಮಕ್ಕಳ್ ಲಕ್ಕಣನ್ ಮೊದಲಾಗೆ ನೂರ್ವರುಮ್ ಒಂದಾಗೆ ಬಂದು ತಾಗಿದಾಗಳ್, ಸೂಳೈಸಿ ಎಚ್ಚೆಚ್ಚು ಬಿಲ್ಲನ್ ರಥದ ಕುದುರೆಯನ್ ಸೂತನನ್ ಖಂಡಿಸುತ್ತೆ, ಆಱೇಳ್ ಎಂಟೊಂಬತ್ತು ಪತ್ತು ಎಂಬ ಅಱಿಕೆಯ ಸರಲಿಂದೆ ಊಱಿಕೊಂಡು, ಆವ ಮೆಯ್ಯುಮ್ ಪಾಳ್ ಎಂಬಂತಾಗೆ ಪಾರ್ದು ಆರ್ದು ಉಱಿದೆ ಮುಳಿಸಿಮ್ ಇಸೆ, ನೂರ್ವರುಮ್ ಮಕುಟಮಣಿಗಣ ದ್ಯೋತಿಸಾರರ್ ಕುಮಾರರ್ ಪೊನ್ನತಾಳ್ಗಳ್ ಬೀಳ್ವಂತೆ ಬಿಳ್ದರ್ ಆಗಳ್ ಸುಯೋಧನನ ಮಕ್ಕಳ ಸಾವನ್ ಕಂಡು...)

**ದುಶ್ಶಾಸನ:** ತಮ್ಮಣ್ಣನ ಮೊಗಮನ್ ಆವ ಮೊಗದೊಳ್ ನೋಳ್ಪೆನ್.

(ಎಂದು ದುಶ್ಶಾಸನನ್ ಬಂದು ತಾಗಿದಾಗಳ್, ಒಂದೆ ಸರಲಿಂದಮ್ ಅವನ ಎದೆಯನ್ ದೊಕ್ಕನೆ ತಿಣ್ಣಮ್ ಎಚ್ಚು ಸಂಕ್ರಂದನನಂದನತನಯನ್ ತಂದೆಯ ಪೂಣ್ಕೆಯನೆ ನೆನೆದು, ದುಶ್ಶಾಸನನನ್ ಕೊಲಲ್ ಒಲ್ಲನೆ. ಆಗಳ್ ಕಾನೀನಸೂನು ವೃಷಸೇನನ್ ಏನುಮ್ ಮಾಣದೆ ಕಾದುತ್ತಿರ್ದನ್. ಅನ್ನೆಗಮ್ ಇತ್ತ ನರನಂದನನ ಬಳಿವಳಿಯನ್ ತಗುಳ್ದು, ಗಳಿವಳಿಯ ಪಾವಿನಂತೆ ಚಕ್ರವ್ಯೂಹಮನ್ ಪುಗಲೆಂದು ಬರ್ಪ ದ್ರುಪದ ವಿರಾಟ ಧೃಷ್ಟದ್ಯುಮ್ನ ಭೀಮಸೇನ ಸಹದೇವ ನಕುಲ ಯುಧಿಷ್ಠಿರ ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ಕುಂಭಸಂಭವನಲ್ಲಿಗೆ ದುರ್ಯೋಧನನ್ ಬಂದು...)

**ದುರ್ಯೋಧನ:** ನಮ್ಮ ಬಲಮೆಲ್ಲಮ್ ಅಭಿಮನ್ಯುವಿನ ಅಂಬಿನ ಮೊನೆಯೊಳ್ ತೂಳ್ದು ತೆರಳ್ದು ಓಡಿದಪ್ಪುದು. ನಿಮಗೆ ಅಲ್ಲಿ ಕಾಳೆಗಮ್ ಅತಿಭರಮ್ ಏಗೆಯ್ವುಮ್.

(ಎನೆ..)

**ಜಯದ್ರಥ:** ಇಂದಿನ ಅನುವರಕೆ ಈ ಎಡೆಯೊಳ್ ಎನಿತಾದೊಡಮ್ ಈಶ್ವರ ವರಪ್ರಸಾದದೊಳ್ ಆನೆ ಸಾಲ್ವೆನ್.

(ಎಂದು ಇಂತು ಎಂದನ್.)

**ಜಯದ್ರಥ:** ಉಱದೆ ಇದಿರಾಂತು ನಿಂದ ರಿಪುಸೈನ್ಯಮನ್ ತತ್ತಱದಱಿದಿಕ್ಕಲ್ ಆನ್ ನೆಱೆವೆನ್. ಇನ್ ಇರಬೇಡ. ನಿನ್ನಱಿಕೆಯ ಕುಂಭಸಂಭವನನ್ ಒಡಗೊಂಡು ಪೋಗು.

(ಎಂದೊಡೆ)

**ದುರ್ಯೋಧನ:** ಜಯದ್ರಥಾ, ಪಾಂಡವಸೈನ್ಯಮನ್ ಕಱುತ್ತು ಇಱಿವ ಇನಿತೊಂದು ಅಳುರ್ಕೆ ನಿನಗೆ ಏತಱಿನೊಳ್ ಆದುದೊ ಪೇಳ್.
(ಎನೆ ಜಯದ್ರಥನ್ ಇಂತು ಎಂದನ್...)

**ಜಯದ್ರಥ:** ನರನೊಳ್ ಮುನ್ ಅಗಪಟ್ಟ ಒಂದು ಅಳಲೊಳ್ ಆನ್ ಕೈಲಾಸ ಶೈಳೇಶನನ್ ಪಿರಿದುಮ್ ಭಕ್ತಿಯೊಳ್ ಅರ್ಚಿಸುತ್ತಮಿರೆ, ತತ್ ದೇವಾಧಿಪನ್ ಮೆಚ್ಚಿದೆನ್. **"ನರನೊರ್ವನ್ ಪೊಱಗಾಗಲ್ ಒಂದು ದಿವಸಮ್ ನಿರುತಮ್ ಕೌಂತೇಯರನ್ ನೀನ್ ಕಾದಿ ಗೆಲ್"** ಎನೆ, ಆನ್ ಅದ್ರೀಂದ್ರಾತ್ಮಜಾಧೀಶನೊಳ್ ಬರಮನ್ ಪೆತ್ತೆನ್.

(ಎಂದ ಸಿಂಧುರಾಜನ ನುಡಿಗೆ ರಾಜಾರಾಜನ್ ಎರಡು ಮುಯ್ಯುಮನ್ ನೋಡಿ...)

**ದುರ್ಯೋಧನ:** ನಿನ್ನನೆ ನಚ್ಚಿ ಪಾಂಡವರೊಳ್ ಆಂತು ಇಱಿಯಲ್ ತಱಿಸಂದು ಆನ್ ಪೂಣ್ದೆನ್. ನಿನ್ನ ಶರಾಳಿಗಳ್ಗೆ ಪಾಂಡವ ಸೈನ್ಯಮ್ ಅಗಿದು ನಿಂದುವು ಎಂದೊಡೆ, ಇನ್ ನಿನ್ನ ಭುಜಪ್ರತಾಪದ ಅಳವು ಆರ್ಗಮ್ ಅಸಾಧ್ಯಮಾಯ್ತು. ಅದೇನ್ ನಿನ್ನ ಅಳವಿಂದ ಜಯದ್ರಥಾ, ಅರಾತಿಜಯಮ್ ಎನಗೆ ಸಾರ್ದುದು.

(ಎಂದು ಪೊಗಳ್ದು ಸಿಂಧುರಾಜನನ್ ಇರಲ್ ಪೇಳ್ದು, ಕುಂಭಸಂಭವನುಮ್ ತಾನುಮ್ ಅಭಿಮನ್ಯುವಿನ ಸಂಗ್ರಾಮರಂಗಮನ್ ಎಯ್ದೆ ವಂದು, ಉಡಿದ ರಥಂಗಳ ಇಟ್ಟೆಡೆಗಳೊಳ್ ಮಕುಟಗಳ ರತ್ನದೀಪ್ತಿಗಳ್ ಪೊಡರ್ಪಿನಮ್, ಅಳ್ಗಿತಳ್ಗಿದ ನಿಜಾತ್ಮಜರನ್ ನಡೆನೋಡಿ, ಕಣ್ಣ ನೀರ್ ಒಡನೊಡನೆ ಉರ್ಚಿ ಪಾಯೆ, ಮುಳಿಸಿಂದೆ ಅದನ್ ಒಯ್ಯನೆ ತಾಳ್ದಿ, ಕಾಯ್ಪಿನೊಳ್ ಕಡಂಗಿ, ಜಗಂಗಳನ್ ನೊಣೆದು ನುಂಗಲುಮ್ ಸುಯೋಧನನ್ ಆಟಿಸಿದನ್. ಆಗಳ್ ದ್ರೋಣ

ದ್ರೋಣಪುತ್ರ ಕೃಪ ಕೃತವರ್ಮ ಕರ್ಣ ಶಲ್ಯ ಶಕುನಿ ದುಶ್ಶಾಸನ ವೃಷಸೇನಾದಿಗಳ್ ಆಳ್ದನ ಮುಳಿದ ಮೊಗಮನ್ ಅಱಿದು, ಧರ್ಮಯುದ್ಧಮನ್ ಬಿಸುಟು, ನರನಂದನನ ರಥಮನ್ ಸುತ್ತಿಮುತ್ತಿಕೊಂಡು ತೇರನ್ ಕುದುರೆಯನ್ ಎಸಗುವ ಸಾರಥಿಯನ್, ಬಿಲ್ಲನ್ ಅದಱ ಗೋಣೆಯುಮನ್ ಉಱದೆ ಓರೊರ್ವರ್ ಓರೊಂದನ್ ಎಚ್ಚೊಡೆ, ಬೀರನ್ ಗದೆಗೊಂಡು ಬೀರರನ್ ಬೆಂಕೊಂಡನ್. ಬೆಂಕೊಳೆ ಕಳಿಂಗರಾಜನ ನೂಂಕಿದ ಕರಿಘಟೆಯನ್ ಬಡಿಬಡಿದು ಎತ್ತಮ್ ಕಿಂಕೊಳೆ ಮಾಳ್ಪುದುಮ್, ಉಱದೆ ಕರ್ಣನ್ ನಿಶಿತವಿಶಿಖದಿಂದೆ ಎರಡುಮ್ ಕರಮನ್ ಎಚ್ಚನ್. ಕರಮ್ ಎರಡುಮ್ ಪಱಿವುದುಮ್, ಆತುರದಿಂದಮ್ ತನ್ನ ಕುನ್ನಗೆಯ್ಯೊಳೆ ಉದ್ಧುರ ರಥಚಕ್ರದಿನ್ ನರಪ್ರಿಯತನೂಜನ್ ಅಕ್ಷೋಹಿಣಿಯನ್ ತಿರಿಪಿ ಇಟ್ಟನ್.

ಆಗಳ್ ದುಶ್ಶಾಸನನ ಮಗನ್ ಗದಾಯುಧನ್ ಅಳಿಯೆ, ನೊಂದ ಸಿಂಗದ ಮೇಲೆ ಬೆರಗಱಿಯದ ಬೆಳ್ಳಾಳ್ ಪಾಯ್ವಂತೆ ಕಿಳ್ತ ಬಾಳ್ವೆರಸು ಪಾಯ್ವುದುಮ್, ಸ್ಫುರಿತ ಕೃಪಾಣಪಾಣಿಗೆ ಇದಿರಮ್ ನಡೆದು ಅಳ್ಕುಱ ತೊಟ್ಟುವಾಯ್ದು ಡೊಕ್ಕರದೊಳ್ ಮಿಕ್ಕ ದಿಕ್ಕರಿಯನ್ ಇಕ್ಕುವವೊಲ್ ನೆಲಕೆ ಇಕ್ಕಿ, ಪತ್ತಿ ಕತ್ತರಿಗೊಳೆ ಕಾಯ್ದು ಕಣ್ತುಮುಳ್ದು, ಉಸಿರ್ ಕುಸಿದು, ಅಂತಕನ್ ಅಂತಮ್ ಎಯ್ದೆ, ಭಯಂಕರ ರಂಗಭೂಮಿಯೊಳ್ ಮೆಯ್ ಪರವಶವಾಗಿ ಜೋಲ್ದನ್.)



# ೭೮. ಅಭಿಮನ್ಯುವಿನ ಸಾವಿನ ಸುದ್ದಿ

(೧೦೬ ನೆಯ ಪದ್ಯದಿಂದ ೧೧೯ ನೆಯ ಗದ್ಯ)

## ಪಾತ್ರಗಳು

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ವ್ಯಾಸ:** ಪರಾಶರ ಮತ್ತು ಯೋಜನಗಂಧಿಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

# ಅಭಿಮನ್ಯುವಿನ ಸಾವಿನ ಸುದ್ದಿ

ಅಭಿಮನ್ಯು ಮರಣವಾರ್ತಾ ಪ್ರಭೂತಶೋಕಾಗ್ನಿ ಧರ್ಮತನಯನನ್ ಇರದೆ ಅಂದು ಅಭಿಭವಿಸಿ, ತನ್ನನ್ ಅಳುರ್ದಂತೆ ಭಾಸ್ಕರನ್ ಅಸ್ತಾಚಲದೊಳ್ ಕೆಂಕಮಾದನ್. ಅಂತು ನಿಜತನೂಜನ ಮರಣ ಶ್ರವಣ ಅಶನಿಘಾತದಿನ್ ಕುಳಶೈಲಮ್ ಕೆಡೆವಂತೆ ಕೆಡೆದು ಮೂರ್ಛಾಗತನಾದ ಧರ್ಮಪುತ್ರನನ್, ಭೀಮಸೇನ ನಕುಳ ಸಹದೇವ ಸಾತ್ಯಕಿ ದ್ರುಪದ ವಿರಾಟಾದಿಗಳ್ ಅಪಹತಕದನರ್ ಮುಂದಿಟ್ಟು ಒಡಗೊಂಡು ಬೀಡಿಂಗೆ ಪೋದರ್. ಆಗಳ್ ಧರ್ಮಪುತ್ರನ ಶೋಕಮನ್ ಆಱಿಸಲೆಂದು ಕೃಷ್ಣದ್ವೈಪಾಯನನ್ ಬಂದು...

**ವ್ಯಾಸ:** ಸಂಸಾರಸ್ಥಿತಿಯನ್ ಅಱಿಯದವರಂತೆ ನೀನ್ ಇಂತು ಶೋಕಾಕ್ರಾಂತನಾದೊಡೆ, **"ಇದಿರಾಂತ ಅರಾತಿ ಬಲಮ್, ಎನಿತು ಅಂತು ಅನಿತನ್ ತವೆ ಕೊಂದು, ತತ್ ಸುಯೋಧನ ಸುತರ್ ಎನ್ನ ಬಾಣಗಣದಿನ್ ತವದೆ ಇರ್ದರೊ, ಯುದ್ಧದಾಳ್ಗೆ ಎನಗೆ ರೋದನಮ್ ಆವುದು, ಎನಗೆ ಏಕೆಯೊ ಶೋಕಿಪನ್"** ಎಂದು ಧರ್ಮನಂದನ, ನರನಂದನನ್ ಅಭಿಮನ್ಯು ನಿನಗೆ ಸಗ್ಗದೊಳ್ ಏನ್ ನೋಯನೇ. ಜ್ಞಾನಮಯನಾಗಿ ಸಂಸಾರ ನಿತ್ಯತೆಯನ್ ಜಲಕ್ಕನಾಗಿ ಅಱಿದು ಇರ್ದು, ಅಜ್ಞಾನಿಯವೋಲ್ ನೀನುಮ್ ಶೋಕಾನಲಸಂತಪ್ತಚಿತ್ತನ್ ಅಪ್ಪುದು ದೊರೆಯೇ.

(ಎಂದು ಷೋಡಶರಾಜ ಉಪಾಖ್ಯಾನಮನ್ ಅಱಿಪಿ, ಧರ್ಮಪುತ್ರನ ಶೋಕಮನ್ ಆರೆ ನುಡಿದು, ಪಾರಾಶರ ಮುನೀಂದ್ರನ್ ಪೋದನ್ ಇತ್ತಲ್...)

**ದುರ್ಯೋಧನ:** ಇತ್ತ ಆಜಿಯೊಳ್ ಮತ್ತತನೂಜ ಶತಮ್ ಅಳಿದುದು. ಅತ್ತ ಅಭಿಮನ್ಯುವೊರ್ವನ್ ಅಳಿದನ್. ಇದಾವ ಗೆಲ್ಲಮ್. ಎನಗಮ್ ಕಲಿಯಾದನೊ. ಪೂಣ್ದು ಗಂಡವಾತಳಿಯದೆ ಗಂಡನ್ ಇಂತು ಅಳಿವುದು. ಈ ಅಳಿವು ಎನಗೆ ಆಜಿರಂಗದೊಳ್ ಗಳಿಯಿಸುಗೆ.

(ಎಂಬ ಇದನ್ ಘಟಸಂಭವನೊಳ್ ನುಡಿಯುತುಮ್ ಸುಯೋಧನನ್ ಅಂತು ಬೀಡಿಂಗೆ ಪೋದನ್.)



# ೨೯. ಅರ್ಜುನನ ಶಪಥ

(೧೮೯ ನೆಯ ಗದ್ಯದಿಂದ ೧೨೨ ನೆಯ ಗದ್ಯ)

## ಪಾತ್ರಗಳು

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

# ಅರ್ಜುನನ ಶಪಥ

ಇತ್ತ ಸಂಸಪ್ತಕಬಳಜಳನಿಧಿಯನ್ ಬಡಬಾನಳನ್ ಅಳುರ್ವಂತೆ ಅಳುರ್ದು ನಿಜವಿಜಯಕಟಕಕ್ಕೆ ವಿಜಯನ್ ಬರೆವರೆ, ಹರಿ ನಿಜಯೋಗದಿನ್ ತನ್ನ ಅಳಿಯನ್ ಲಯಮಾದುದನ್ ಅಱಿದು, ಭಯಂಕರ ಕಪಿಕೇತನಂಗೆ ಅಱಿಪಲ್ ಒಲ್ಲದೆ, ಶಮಂತ ಪಂಚಕಂಬರಮ್ ಬಂದು ಇಳಿದು, ಸಂಗರಪರಿಶ್ರಮಮನ್ ಕಳೆಯೆಂದು ಮಯ್ದುನನ್ ಬೆರಸು ಜಳಾವಗಾಹದೊಳ್ ಇರುತ್ತೆ, ಮಹಾಕಪಟ ಪ್ರಪಂಚದಿನ್ ಜಳಮಂತ್ರಮಂತ್ರಿತಾಶಯ ಜಳದೊಳ್ ನರನ್ ಇನಿಸು ಮುಳುಗೆ...

**ಕೃಷ್ಣ:** ಫಲ್ಗುಣ ನಿಜಸುತನ್ ಅಸುಹೃತ್ ಬಳಜಳನಿಧಿಯೊಳ್ ಮುಳುಗಿದನ್.

(ಎಂಬುದನೆ ನುಡಿದು ಹರಿ ಮುಳುಗುವುದುಮ್, ಭೋಂಕನೆ ಕೇಳ್ದು ಎರ್ದೆ ಕದಡಿ, ಕಲಂಕಿದ ಬಗೆವೆರಸು ನೆಗೆದು, ನಾಲ್ಕುಮ್ ದೆಸೆಯನ್ ಶಂಕಾಕುಳಿತನ್ ನೋಡಿ, ಮನಮ್ ಕೊಳುಕೆನೆ ಮುಳುಗಿ ನೆಗೆದ ಹರಿಯನ್ ನುಡಿದನ್.)

**ಅರ್ಜುನ:** ಇದು ಆಕಾಶವಚನಮ್. ಸುತಶೋಕಮನ್ ಎನಗೆ ಅಱಿಪಿದಪ್ಪುದು. ಅಸ್ಮತ್ ತನಯಂಗೆ ಮರಣಮ್ ಆ ಕುರುಪತಿಯಿಂದಮ್ ಆದುದು. ಆಗಲೆವೇಳ್ಕುಮ್. ಏಕೆ ಎಂದು ಅಱಿಯೆನ್. ಇಂದಿನ ಚಕ್ರವ್ಯೂಹಮನ್ ಆನ್ ದಲ್ ಅಣಮ್ ಮೆಚ್ಚಲಾಱೆನ್.

(ಎನುತಮ್ ರಥಮನ್ ಬಂದು ಏಱಿ ಮಗನ ಮನಕತಮ್ ಎರ್ದೆಯನ್ ಒಂದುತ್ತರಮ್ ಅಲೆಯೆ, ನರನ್ ಇಂತು ಎಂದನ್.)

**ಅರ್ಜುನ:** ಕದನದಿನ್ ಆನ್ ಬರೆ, ನಿಚ್ಚಲುಮ್ ಇದಿರ್ ವಂದು ಕೊರಲ್ಗೆ ಪಾಯ್ದು, ಬಾಯ್ವಾಯೊಳ್ ಅಲಂಪು ಇದಿರ್ಗೊಳೆ ತಂಬುಲಮನ್ ಕೊಳ್ಳದೆ ಮಾಣ್ದ ಮಗನ ತಡವು. ಅಸುರಾರೀ, ಇದೇನ್.

(ಎನುತ್ತುಮ್ ಬೀಡನ್ ಎಯ್ದೆ ವಂದು, ಶೋಕಸಾಗರದೊಳ್ ಮುಳುಗಾಡುವ ಪರಿಜನಮುಮ್ ತನ್ನ ಮೊಗಮನ್ ನೋಡಲ್ ನಾಣ್ಚಿ, ತಲೆಯನ್ ಬಾಗಿ, ನೆಲನನ್ ಬರೆಯುತ್ತುಮ್ ಇರ್ದ ವೀರಭಟರುಮನ್ ಕಂಡು, ಮಗನ ಸಾವನ್ ನಿಶ್ಚೈಸಿ, ರಾಜಮಂದಿರಮನ್ ಪೊಕ್ಕು ರಥದಿಂದಮ್ ಇಳಿದು, ಧರ್ಮಪುತ್ರಂಗಮ್ ವಾಯುಪುತ್ರಂಗಮ್ ಪೊಡೆವಟ್ಟು ಕುಳ್ಳಿರ್ಪುದುಮ್, ಅವರ್ ತಲೆಯನ್ ಬಾಗಿ ನೆಲನನ್ ಬರೆಯುತ್ತುಮ್ ಇರೆ, ಕಿರೀಟಿ ಕಂಡು...)

**ಅರ್ಜುನ:** ಇದೇನ್.

(ಎಂದು ಬೆಸಗೊಳೆ, ಧರ್ಮಪುತ್ರನ್ ಇಂತು ಎಂದನ್.)

**ಧರ್ಮರಾಯ:** ಗುರು ಚಕ್ರವ್ಯೂಹಮನ್ ಪಣ್ಣಿದೊಡೆ, ಇದನ್ ಪುಗಲ್ ಬಲ್ಲರ್ ಆರ್ ಎಂದೊಡೆ, ನಾನಿರೆ ಇನ್ ಮತ್ತೆ ಆರ್ ಬಲ್ಲರ್ ಎಂದು, ಒರ್ವನೆ ರಿಪುಬಳ ವಾರಾಸಿಯಮ್ ಪೊಕ್ಕು ಮಿಕ್ಕು, ಆಂತರನ್ ಆಟಂದು ಇಕ್ಕಿ, ದುರ್ಯೋಧನನ ನೂರ್ವರುಮ್ ತನಯರನ್ ಕೊಂದು, ತತ್ ಸಂಗರದೊಳ್ ಎಮ್ಮನ್ ಕಾದು, ಇಂತು ಆಂತು ಇಱಿದು ನಿಜಸುತನ್ ದೇವಲೋಕಕ್ಕೆ ಸಂದನ್. ಸಿಂಧು ವಿಷಯಾಧೀಶನ್ ಬಾಳ ಶಶಾಂಕಮೌಳಿ ಬರಮನ್ ಕುಡೆ, ಪೆತ್ತ ಒಂದು ಉರ್ಕಿನಿಮ್ ರಣೋತ್ಸಾಹದಿನ್ ನಿಂದು, ಓವದೆ ಒರ್ವನೆ ಎಮ್ಮನ್ ಆಂತು ಭರಂಗೆಯ್ದು, ಅತ್ತ ದುರ್ಯೋಧನನ್ ಬೆರಸು ಆ ದ್ರೋಣನನ್ ಅಟ್ಟಿ, ಪೊದಳ್ದ ಒಂದು ಮಚ್ಚರದಿನ್ ನಿನ್ನ ತನೂಜನನ್ ಕೊಲಿಸಿದನ್. ಮತ್ತೆ ಅವರ್ ಆಂತು ಕೊಲ್ವರೇ.

(ಎಂಬುದುಮ್ ಪ್ರಚಂಡ ಕೋಪ ಪಾವಕ ಪ್ರಶಮಿತ ಶೋಕರಸನುಮ್, ಉನ್ನತ ಲಲಾಟ ತಟ ಘಟಿತ ಭೀಷಣ

ಭ್ರುಕುಟಿಯುಮ್, ಕಲ್ಪಾಂತ ದಿನಕರ ದುರ್ನಿರೀಕ್ಷನುಮ್, ಉತ್ಪಾತ ಮಾರುತನಂತೆ ಸಕಲ ಭೂಭೃತ್ಕಂಪಕಾರಿಯುಮ್, ವಿಂಧ್ಯಾಚಳದಂತೆ ವರ್ಧಮಾನೋತ್ಸೇಧನುಮ್, ಅಂಧಕಾರಾತಿಯಂತೆ ಭೈರವಾಕಾರನುಮಾಗಿ...)

**ಅರ್ಜುನ:** ರಸೆಯಿಮ್, ಭೂತಳದಿನ್, ಕುಳಾದ್ರಿಕುಳದಿನ್, ದಿಗ್ದಂತಿಯಿನ್, ವಾರ್ಧಿಯಿಮ್, ದೆಸೆಯಿಂದೆ ಅಜಾಂಡತಟದಿಂದೆ ಅತ್ತ ಎಲ್ಲಿ ಪೊಕ್ಕಿರ್ದುಮ್, ಇನ್ ವೈರಿಗೆ ಮಿಸುಕಲ್ ತೀರ್ಗುಮೆ. ಎನ್ನ ಸುತನನ್ ಕೊಂದಿರ್ದುದನ್ ಕೇಳ್ದು, ಇನ್ನುಮ್ ಸೈರಿಸಿ ಮಾಣ್ದೆನ್ ಎಂದೊಡೆ, ಇದನ್ ಪೇಳ್ ಆನ್ ಏತಱೊಳ್ ನೀಗುವೆನ್. ಬಳೆದ ಸುತಶೋಕದಿಂದೆ ಎನ್ನ ನಯನ ಜಲಂಗಳ್ ಈಗಳೆ ಸುರಿಗುಮೆ. ಸುರಿಯದು. ಜಯದ್ರಥನ ಚಿತಾನಳನಿಂದಮ್ ಒಗೆದ ಪೊಗೆಗಳ್ ಕೊಳೆ, ಸುರಿವೊಡೆ ಸುರಿವುವು. ಬಿಸಜಭವನಕ್ಕೆ, ಮೃಡನಕ್ಕೆ, ಅಸುರಾಂತಕನಕ್ಕೆ ಕಾವೊಡಮ್, ನಾಳಿನೊಳ್ ಅರ್ವಿಸೆ ಕೊಂದು, ಸಿಂಧುರಾಜನ ಬಸಿಱಿನ್ ಪೋಳ್ದು, ಎನ್ನ ಮಗನನ್ ಆನ್ ತೆಗೆಯದೆ ಇರೆನ್. ಎನ್ನ ಮಗನನ್ ಕೊಂದು, ಇನ್ ಭಯದಿಂದಮ್ ಅಜನ ಗುಂಡಿಗೆವೊಕ್ಕು ಮೇಣ್ ಮಂದರಧರನ ಪೊರ್ಕುಳ ಪೊಂದಾವರೆವೊಕ್ಕುಮ್ ಅವನ್ ಬರ್ದುಕುವನೇ..

ಪಡೆ ಪಡೆಮೆಚ್ಚೆಗಂಡನೆನೆ ಸಂದ ಅರಿಕೇಸರಿ ಎಂಬ ಅಗುರ್ವು ನೇರ್ಪಡೆ, ನೆಗಳ್ದ ಆನ್ ಅಣಮ್ ಸೆಡೆದು ಮಾಣ್ಬೆನೆ. ನಾಳೆ ದಿನೇಶನ್ ಅಸ್ತದತ್ತ ಉಡುಗದ ಮುನ್ನ, ಸೈಂಧವನ್ ಅಗುರ್ವಿಸೆ ಕೊಲ್ಲದೊಡೆ, ಏನೊ ಗಾಂಡಿವಮ್ ಪಿಡಿದೆನೆ. ಚಿಃ ಯುದ್ಧರಂಗದೊಳ್ ವೈರಿಗೆ ತೊವಲ್ವಿಡಿದೆನ್ ಅಲ್ಲೆನೆ.

(ಎಂದು ನೃಪ ಪರಮಾತ್ಮನ್ ಕೃತಪ್ರತಿಜ್ಞನಾದುದನ್, ಸೈಂಧವನ ಸಜ್ಜನಮ್ ದುಜ್ಜೋದನನ ತಂಗೆ ದುಶ್ಶಳೆ ಕೇಳ್ದು, ಮಲಮಲ ಮಱುಗಿ, ತಮ್ಮಣ್ಣನಲ್ಲಿಗೆ ವಂದು ಕಾಲ ಮೇಲೆ ಕವಿದುಪಟ್ಟು...)



# ೮೦. ದುಶ್ಶಲೆಯ ಆತಂಕ

(೧೨೨ ನೆಯ ಗದ್ಯದಿಂದ ೧೨೭ ನೆಯ ಪದ್ಯ)

## ಪಾತ್ರಗಳು

**ದುಶ್ಶಲೆ:** ದುರ್ಯೋಧನನ ತಂಗಿ. ಸೈಂಧವನ ಹೆಂಡತಿ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ದ್ರೋಣ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

# ದುಶ್ಶಲೆಯ ಆತಂಕ

ನೃಪ ಪರಮಾತ್ಮನ್ ಕೃತಪ್ರತಿಜ್ಞನ್ ಆದುದನ್ ಸೈಂಧವನ ಸಜ್ಜನಮ್ ದುರ್ಯೋದನನ ತಂಗೆ ದುಶ್ಶಳೆ ಕೇಳ್ದು ಮಲಮಲ ಮಱುಗಿ, ತಮ್ಮಣ್ಣನಲ್ಲಿಗೆ ವಂದು ಕಾಲ ಮೇಲೆ ಕವಿದು ಪಟ್ಟು...

**ದುಶ್ಶಳೆ:** ತನ್ನ ಸುತನ್ ಅಳಿಯಲ್, ನಿನ್ನಯ ಮಯ್ದುನನನ್ ಅಳಿಯಲ್ ಅರ್ಜುನನನ್ ಪೂಣ್ದನ್. ಅದಕ್ಕೆ ಆನ್ ನಡುಗಿ ಬಂದೆನ್. ಇನ್ ನೀನ್ ಎನ್ನ ಓಲೆಯ ಕಡಗದ ಅಳಿವನ್ ಏನ್ ನೋಡಿದಪಾ.

(ಎಂಬುದುಮ್ ಸುಯೋಧನನ್ ಮುಗಳ್ನಗೆ ನಕ್ಕು ಇಂತು ಎಂದನ್.)

**ದುರ್ಯೋಧನ:** ಮರುಳಕ್ಕ, ಮಗನ ಶೋಕದಿನ್ ಉರುಳ್ದುಮ್ ಪೂಣ್ದವನ ಪೂಣ್ಕೆ, ದುಶ್ಶಾಸನನೊಳ್ ಎನ್ನೊಳಮ್ ಕರತನದಿಮ್ ಮರುತ್ಸುತನ್ ಪೂಣ್ದ ಪೂಣ್ಕೆವೊಲ್ ಅಕ್ಕುಮ್. ಕೃತ ವಿವಿಧಾಸ್ತ್ರಶಸ್ತ್ರ ಯಮಪುತ್ರ ಮರುತ್ಸುತ ಯಜ್ಞಸೇನರ್ ಉದ್ಧತಬಳರ್ ಎತ್ತಿ ಕಾದಿ ಸುಗಿದು ಓಡಿದರಲ್ಲರೆ. ವಿವಿಂಶತಿ ಕೃಪ ಕರ್ಣ ಶಲ್ಯ ಕಳಶೋದ್ಭವ ತತ್ ಪ್ರಿಯಪುತ್ರರ್ ಕಾವರ್ ಎಂದೊಡೆ ಅಪ್ರತಿರಥನನ್ ಜಯದ್ರಥನನ್ ಆಜಿಯೊಳ್ ಎಯ್ತರೆ ವರ್ಪ ಗಂಡರಾರ್.

(ಎಂದು ದುಶ್ಶಳೆಯನ್ ಒಡಗೊಂಡು ಕುಂಭಸಂಭವನಲ್ಲಿಗೆ ವಂದು ಇಂತು ಎಂದನ್.)

**ದುರ್ಯೋಧನ:** ಸುತಶೋಕೋದ್ರೇಕದಿನ್ ಅರ್ಜುನನ್ ಸೈಂಧವನನ್ ಅಳಿವೆನ್ ಎಂದು ಪೂಣ್ದನ್. ಇಂತು ಈ ಸತಿ ಬಂದಳ್. ಆತ್ಮಾನುಜೆಯ ಕಡಗಮನ್ ಕಾವುದು. ನೀಮೆ ಮಾರ್ಕೊಳ್ವೊಡೆ, ಇತರರ್

ತಾಮ್ ಆರ್ ಕದನದೊಳ್ ಮುಟ್ಟಲ್ ಸಮರ್ಥರ್.

(ಎನೆ)

**ದ್ರೋಣ:** ರಣದೊಳ್ ಗೆಲ್ವಾಸೆ ಅಂತಿರ್ಕೆ. ಸಿಂಧುಕ್ಷಿತಿಪನ್ ತಾನ್ ಏನನ್ ಆದನ್, ಅದನೆ ಆನುಮ್ ಅಪ್ಪೆನ್. ಪೋಗು ನರೇಂದ್ರಾ ಬಿಜಯಂಗೆಯ್.

(ಎನೆ ನೃಪನ್ ಪೋಪುದುಮ್)



## ೮೧. ಧರ್ಮರಾಯನು ದ್ರೋಣರ ಮನವೊಲಿಸಿದ್ದು

(೧೨೭ ನೆಯ ಪದ್ಯದಿಂದ ೧೩೨ ನೆಯ ಪದ್ಯ)

### ಪಾತ್ರಗಳು

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

ದ್ರೋಣ: ಕೌರವರ ಮತ್ತು ಪಾಂಡವರ ವಿದ್ಯಾಗುರು.

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ಅರ್ಜುನ: ಪಾಂಡುರಾಜ ಮತ್ತು ಕುಂತಿಯ ಮಗ.

ಶಿವ: ಕೈಲಾಸದಲ್ಲಿ ನೆಲೆಸಿರುವ ದೇವರು.

## ಧರ್ಮರಾಯನು ದ್ರೋಣರ ಮನವೊಲಿಸಿದ್ದು

ಅದನ್ ಧರ್ಮಾತ್ಮಜನ್ ಕೇಳ್ದು, ಅಜಿತಂಗೆ ಪೇಳ್ದು, ಆ ಹರಿ ಪೇಳ್ದುದು ಒಂದು ನಯದಿಂದೆ ಆ ರಾತ್ರಿಯೊಳ್ ಪೋಗಿ, ಕುಂಭಜನನ್ ಕಂಡು ವಿನಮ್ರನಾಗಿ ನುಡಿದನ್.

**ಧರ್ಮರಾಯ:** ಜಗತ್ಪೂಜಿತ ನೀಮ್ ಇಂತು ಕೆಯ್ಕೊಂಡು ಕಾದೆ ಬೆಟ್ಟನಾದಡೆ, ಎಮಗೆ ಇನ್ ಬಾಳ್ವಾಸೆ ಆವಾಸೆಯೋ. ನಿಮ್ಮ ಅಳವನ್ ಅಱಿದು ಮುನ್ನಮ್ ನಿಮ್ಮನ್ ಪ್ರಾರ್ಥಸಿದೆಮ್. ಈಗಳ್ ಅದುವನ್ ಮಱೆದಿರ್. ನಿಮ್ಮಯ ಧರ್ಮದ ಮಕ್ಕಳೆವು. ಎಮ್ಮನ್ ಕಡೆಗಣಿಸಿ ನಿಮಗೆ ನೆಗಳ್ವದು ದೊರೆಯೇ.

(ಎನೆ ಗುರು ಕರುಣಾರಸಮದು ಮನದಿನ್ ಪೊಱಪೊಣ್ಮೆ...)

**ದ್ರೋಣ:** ನಿನಗೆ ಜಯಮಕ್ಕುಮ್. ಅನಂತನ ಪೇಳ್ದ ತೆಱದೆ ನೆಗಳ್.

(ಎನೆ, ನೃಪತಿ ವಿನಯದೆ ಬೀಳ್ಕೊಂಡು ಬೀಡನ್ ಪೊಕ್ಕನ್. ಆಗಳ್ ಆರೂಢ ಸರ್ವಜ್ಞನ್ ಪ್ರತಿಜ್ಞಾರೂಢನಾಗಿ ಗಂಗಾನದೀ ತರಂಗೋಪಮಾನ ದುಕೂಲಾಂಬರ ಪರಿಧಾನನುಮಾಗಿ ಧವಳಶಯ್ಯಾತಳದೊಳ್ ಮಱೆದೊಱಗಿರಲ್. ಅಮೋಘಾಸ್ತ್ರ ಧನಂಜಯನನ್ ಪುಂಡರೀಕಾಕ್ಷನ್ ನೋಡಿ...)

**ಕೃಷ್ಣ:** (ತನ್ನ ಮನದಲ್ಲಿ)

ಸೈಂಧವನನ್ ಆಜಿಯೊಳ್ ಕೊಲಲ್ಕೆ ಅರಿದು. ಈತನ ಪೂಣ್ದ ಪೂಣ್ಕೆಯುಮ್ ಪಿರಿದು. ಅವನ್ ಉಗ್ರಪಾಶುಪತಬಾಣದಿನಲ್ಲದೆ ಸಾಯನ್. ಅಂತು ಹರನ್ ಅದನ್ ಒಸೆದು ಇತ್ತುಮ್, ಅದಱ ಮುಷ್ಟಿಯನ್ ಈಯನೆ ಏನ್. ಅದನ್ ಆದರದೆ ಬೇಡವೇಳ್ಪುದು.

(ಎಂದು ಚಕ್ರಿ, ಕಿರೀಟಿಯನ್ ಶಿವನಲ್ಲಿಗೆ ಕೊಂಡೊಗೆದನ್. ಅಂತು ಮನಃಪವನವೇಗದಿನ್ ಕೈಳಾಸ ಶೈಳಮನ್ ಎಯ್ದಿ, ಕದನತ್ರಿಣೇತ್ರನನ್ ತ್ರಿಣೇತ್ರನ ಮುಂದೆ ಇಳಿಪುವುದುಮ್, ಅಭವನ್ ತನ್ನ ಪಾದಪದ್ಮಂಗಳ್ಗೆ ಎಱಗಿದ ಅತಿರಥ ಮಥನನುಮನ್ ಮಧುಮಥನನುಮನ್ ಅಮೃತದೃಷ್ಟಿಯಿನ್ ನೋಡಿ, ಪಾಶುಪತದ ಮುಷ್ಟಿಯನ್ ಬೇಡಲೆಂದು ಬಂದುದನ್ ತನ್ನ ದಿವ್ಯಜ್ಞಾನದಿಂದಮ್ ಅಱಿದು, ಅಪಗತ ಕಪಟದೆ ನಟನ್ ಅದನ್ ಆ ಮುಷ್ಟಿಯನ್ ಉಪದೇಶಂಗೆಯ್ದು ಪರಸಿ..)

**ಶಿವ:** ಪೋಗು.

(ಎನೆ... ಪೊಡೆಮಟ್ಟು..)

**ಅರ್ಜುನ:** ಪಸಾದಮ್.

(ಎಂದ ಹರಿಗನನ್ ಉಪೇಂದ್ರನ್ ಆ ದರ್ಭಶಯನತಳಕೆ ಇಳಿಪುವುದುಮ್, ಅಂತು ಉದಾರ ಮಹೇಶ್ವರನ್ ಈಶ್ವರ ವರಪ್ರಸಾದಮೆಲ್ಲಮ್ ತನಗೆ ನನಸಾಗೆಯುಮ್ ಕನಸಿನ ಅಂದಮಾಗಿ ತೋಱೆ, ಮಂಗಳಪಾಠಕ ರವಂಗೊಳೊಳ್ ಭೋಕನೆ ಎಚ್ಚತ್ತನ್. ಅನ್ನೆಗಮ್ **'ತನ್ನ ಸುತನ ಅಳಲೊಳ್ ಅರ್ಜುನನ್ ಎನ್ನ ಉದಯಮನ್ ಎಯ್ದೆ ಪಾರ್ದು ಪಗೆವರ ಬೇರೊಳ್ ಬೆನ್ನೀರನ್ ಎಱೆಯದಿರನ್. ಅದನ್ ಆನ್ ನೋಡುವೆನ್'** ಎಂಬ ತೆಱದಿನ್ ಇನನ್ ಉದಯಿಸಿದನ್.



# ೮೨. ಸೈಂಧವನ ಸಾವು

(೧೩೩ ನೆಯ ಗದ್ಯದಿಂದ ೧೫೪ ನೆಯ ಪದ್ಯ)

## ಪಾತ್ರಗಳು

| | |
|---|---|
| ದ್ರೋಣ: | ಕೌರವರ ಮತ್ತು ಪಾಂಡವರ ವಿದ್ಯಾಗುರು. |
| ಅರ್ಜುನ: | ಪಾಂಡುರಾಜ ಮತ್ತು ಕುಂತಿಯ ಮಗ. |
| ದುರ್ಯೋಧನ: | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. |
| ಭೂರಿಶ್ರವ: | ಸೋಮದತ್ತ ರಾಜನ ಮಗ. ಕುರುಕ್ಷೇತ್ರ ಯುದ್ಧದಲ್ಲಿ ಕೌರವರ ಕಡೆ ಹೋರಾಡಿದನು. |
| ಭೀಮ: | ಪಾಂಡುರಾಜ ಮತ್ತು ಕುಂತಿಯ ಮಗ. |
| ಕರ್ಣ: | ಅಂಗರಾಜ್ಯದ ಒಡೆಯ. |
| ಸೈಂಧವ/ಜಯದ್ರಥ: | ದುರ್ಯೋಧನನ ತಂಗೆ ದುಶ್ಶಲೆಯ ಗಂಡ. |
| ಕೃಷ್ಣ : | ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ. |

# ಸೈಂಧವನ ಸಾವು

ಚಕ್ರವ್ಯೂಹದ ಬಾಗಿಲೊಳ್ ತನ್ನನ್ ಪುಗಲ್ ಈಯದೆ ಅಡ್ಡಮಾಗಿ ನಿಂದ ಕಾರ್ಮುಕಾಚಾರ್ಯನನ್ ಉಱಿ ಸೆಱಿಗೆಯ್ಯದೆ, ವಿನಯಾಸ್ತ್ರಮನ್ ಎಚ್ಚು, ವಿನಯಮನೆ ಮುಂದಿಟ್ಟು ಬಲವಂದು ಪೊಡೆಮಟ್ಟು ಪೋಗೆವೋಗೆ ಕಮನೀಯಮ್ ಬಲವಂದು ಪೋಪನನ್...

**ದ್ರೋಣ:** ಎಲೇ... ಪೋ... ಪೋಗದಿರ್... ಪೋಗದಿರ್. ಎನ್ನೊಡನೆ ಸಮರಕ್ಕೆ ಅಂಜಿ ಪೋದೆ.

(ಎನಲ್, ನರನ್ ದ್ರೋಣರನ್ ಎಂದನ್.)

**ಅರ್ಜುನ:** ನಿಮಗೆ ಆನ್ ಅಂಜುವುದು ಎನ್ನ ಬಾಲತನದಿಂದೆ ಅಂದು ಆದುದು. ಇಂದು ಆದುದೇ. ನಿಮಗೆ ಆನ್ ಅಂಜದೊಡೆ ಯುದ್ಧದೊಳ್ ತ್ರೈಲೋಕ್ಯಮನ್ ಅಂಜಿಸಲ್ ನೆಱೆವೆನೇ.

(ಅಂತು ವಿನಯಮನೆ ನುಡಿದ ವಿಕ್ರಮಾರ್ಜುನನನ್, ಗುರು ಅನೇಕ ಆಶೀರ್ವಚನಂಗಳಿಮ್ ಪರಸುವುದುಮ್, ಪದುಮನಾಭನ ಚೋದಿಸುವ ರಥವೇಗದಿನ್ ಪದ್ಮವ್ಯೂಹಮನ್ ಎಯ್ದೆವಂದು ಸುಯೋಧನನ ಸಾಧನದೊಳ್ ತಾಗಿದಾಗಳ್, ಪೊಸಮಸೆಯಂಬು ಕಾರಮಳೆವೋಲ್ ಕಱಿಯುತ್ತಿರೆ, ಅನಿತುಮನ್ ನಿಜಮಾರ್ಗಣಕೋಟಿಯಿನ್ ನೇರ್ದು, ಸೀಳ್ದು, ಖಂಡಿಸಿ, ಕಡಿದೊಟ್ಟಿ, ಸುಟ್ಟು ತನ್ನ ಮೊನೆಯಂಬುಗಳಿನ್ ಚತುರಂಗಮ್ ಅಗುರ್ವಿಸೆ ತೆಗೆದೆಚ್ಚು ಎಯ್ದೆ ಕೀಲಿಸೆ, ಅಕಳಂಕರಾಮನಿನ್ ಪಡೆ ಚಿತ್ರದ ಪಡೆಯಂತೆವೋಲ್ ಆಯ್ತು. ಅಡಿ, ತೊಡೆ, ಪೊರ್ಕುಳುಮ್, ತೆಗಲೆ, ಕೈ, ಕಣಕಾಲ್, ಕೊರಲ್ ಎಂಬಿವುಮ್, ಬೆರಲ್, ನಡು, ಉರ, ಬೆನ್, ಬಸಿಱ್, ತೊಳಕು,

ಕರ್ಜಜಿ, ಮುಯ್ವು, ಮುಸುಂಬು, ಮೂಗು, ಪೆರ್ದೊಡೆ, ಕಟಿ, ಮುಮ್ಮಡಮ್, ಪರಡು, ಸಂದಿ, ನೊಸಲ್, ಪಣೆ, ಕಣ್, ಕದಂಪು ಇವು ಎಂಬ ಎಡೆಯೆನೆ ಪಾರ್ಥನಂಬುಗಳ್ ನಟ್ಟುವು, ಉರ್ಚಿದುವು, ನೇರ್ದುವು, ಸೀಳ್ದುವು. ಅಂತು ಮಾಱಾಂತ ಮಾರ್ಪಡೆ ಎಲ್ಲಮನ್ ಜವನೊಕ್ಕಲಿಕ್ಕಿ ತನ್ನೊಳ್ ಪೋಗದೆ ಪೆಣೆದ ಬಾಹ್ಲೀಕ, ಸೋಮದತ್ತ, ಭೂರಿಶ್ರವರನ್ ಆನೆ ಮೆಟ್ಟಿದ ಕುಳುಂಪೆಯ ನೀರಂತೆ ದೆಸೆದೆಸೆಗೆ ಸೂಸುವನ್ನೆಗಮ್ ಎಳ್ಬಟ್ಟಿ, ಕಾಂಭೋಜ, ಸುದಕ್ಷಿಣ, ಜಯತ್ಸೇನರ್ ಎಂಬರ್ ಎಯ್ತರೆ ಮೂವರ್ ಅಕ್ಷೋಹಿಣೀ ಪತಿಗಳ್ ಬೆರಸು, ನಾಲ್ಸಾಸಿರ್ವರ ಮಕುಟವರ್ಧನರನ್ ಕೊಂದು, ಶಲ್ಯನ ಉರಮನ್ ಬಿರಿಯೆಚ್ಚು, ಕೃಪರನ್ ವಿರಥರ್ ಮಾಡಿ, ನಡುವಗಲ್ ಇಳಿವಿನಮ್ ಕಾದಿ ಬಳಲ್ದ, ಕುದುರೆಗಳನ್ ನೀರೊಳ್ ಇಕ್ಕಲೆಂದು ದೇವಖಾತಮ್ ಎಂಬ ಮಡುವಿಂಗೆ ಬರ್ಪುದುಮ್, ಇತ್ತ ದುರ್ಯೋಧನನ್ ದ್ರೋಣರಲ್ಲಿಗೆ ವಂದು...)

**ದುರ್ಯೋಧನ:** ಚಾತುರಂಗಬಳಮ್ ಅಳ್ಕುಱದೆ ಆಂತ ಮಹಾರಥರ್ಕಳುಮ್ ಅಳಿದುದು. ಒಡ್ಡಣಮ್ ಕಳಕುಳಮಾದುದು. ತಲೆದೋಱಲೆ ಗಂಡರಿಲ್ಲ. ಇನ್ ಇನಿಸು ಬೇಗದೆ ಸೈಂಧವನನ್ ತೊತ್ತುಳದುಳಿದಪ್ಪನ್. ನೆಗಳ್ತೆಯನ್ ಗಳಿಯಿಸಿಕೊಳ್ವೊಡೆ, ಇನ್ ಇನಿಸು ತಱಿಸಂದು ನಿಂದು ಪಾರ್ಥನೊಲ್ ಇಱಿಯಿಮ್.

(ಎಂಬುದುಮ್ ದ್ರೋಣಾಚಾರ್ಯನ್ ಮುಗುಳ್ನಗೆ ನಕ್ಕು...)

**ದ್ರೋಣ:** ವಿಕ್ರಮಾರ್ಜುನನ್ ಇಳಿಸಿ ನುಡಿವ ನಿನ್ನ ಏಣಗೋಣಂಗಳುಮ್, ಎಕ್ಕಸತನಂಗಳುಮ್ ಎತ್ತವೋದುವು. ಅರಸ, ನಿನಗೆ ಆಳ್ತನಮ್ ನುಡಿವ ಬೀರರ ಬೀರದ ಅಳುರ್ಕೆ ವಿಕ್ರಮಾರ್ಜುನನೊಳ್ ಏಕೆ ಸಲ್ಲದು. ಎನಗೆ ಆತನ್ ಅಸಾಧ್ಯನ್, ಅವಧ್ಯನ್. ಆನುಮ್ ಈ ಮೊನೆಯೊಳೆ ನಿಂದು ಕಾದಿದೆಪೆನ್. ಅನ್ನೆಗಮ್ ನೀನ್ ಎನ್ನ ವರೂಥ ಸೂತ ಕೇತನ ಕವಚಂಗಳಿನ್ ನೆಱೆದು ಜಗದೇಕಮಲ್ಲನೊಳ್ ತಳ್ತು ಇಱಿ.

**ದುರ್ಯೋಧನ:** ಏನಾದೊಡೇ ಏನಾದುದು. ಎನ್ನ ಪಗೆಯ ಆನೆ ಕೊಲ್ವೆನ್.

(ಎಂದು ಅಭೇದ್ಯ ಕವಚಮನ್ ತೊಟ್ಟು, ದಿವ್ಯ ಶರಾಸನ ಶರಂಗಳನ್ ಕೊಂಡು, ಕಳಶ ಕೇತನ ವರೂಥನಾಗಿ ಪೋಗಿ, ತಡೆಯದೆ ರಾಜರಾಜನ್ ಇದಿರಮ್ ಬರೆ, ಭೋರ್ಗರೆದು ಎಚ್ಚೊಡೆ, ಅಂಬುಗಳ್ ನಡದೆ ಸಿಡಿಲ್ವುದುಮ್, ಕರತಳದ್ವಯಮ್ ಬಿರಿಯೆಚ್ಚು ಕೆಯ್ದುವನ್ ಪಿಡಿವ ಅದಟೆಲ್ಲಮನ್ ಕಿಡಿಸಿ...)

**ಅರ್ಜುನ:** (ತನ್ನಲ್ಲಿಯೇ)

ಭೀಮನ್ ಆತನನ್ ಮಡಿಪುವೆನ್ ಎಂದ ಪೂಣ್ಕೆ ಪುಸಿಯಾದಪುದು ಎಂದು ತಾನ್ ಕೊಲಲ್ ಒಲ್ಲನೆ.

(ಅನ್ನೆಗಮ್ ಇತ್ತ ಧರ್ಮಪುತ್ರನ್ ಅಮೋಘಾಸ್ತ್ರ ಧನಂಜಯನನ್ ಕೆಯ್ಕೊಳಲ್ ಅಟ್ಟಿದೊಡೆ, ಕೌರವಬಳ ಜಳನಿಧಿಯ ನಡುವನ್ ಉತ್ತರಿಸಿ ಬರ್ಪ ಸಾತ್ಯಕಿಯನ್ ಭೂರಿಶ್ರವನ್ ಎಡೆಗೊಂಡು ಆಂತು...)

**ಭೂರಿಶ್ರವ:** ಪೋಗದಿರ್.

(ಎಂದು ಮೂದಲಿಸೆ, ಸಾತ್ಯಕಿ ತೀವ್ರ ಶರಾಳಿಯಿಂದೆ ಅಗುರ್ವಾಗೆ ವರೂಥಮನ್ ಕಡಿದೊಡೆ, ಆತನ್ ಉರ್ಚಿದ ಬಾಳ್ವೆರಸು ಎಯ್ದೆವಂದು, ಆಗಳ್ ಇದಿರ್ಚೆ ತಾನುಮ್ ಅಸಿಯನ್ ಸೆರಗಿಲ್ಲದೆ ಕಿಳ್ತು, ಪಾಯ್ದು, ಭೂಭಾಗ ನಭೋ ವಿಭಾಗವರಮ್ ಅಳ್ಕುಱೆ ವಿರೋಧಿಗಳ್ ತಳ್ತಿಱಿದರ್. ಅಂತು ಇರ್ವರುಮ್ ಓರೊರ್ವರೊಳ್ ಬೀರಮುಮನ್ ಬಿಂಕಮುಮನ್ ಮೆಱೆದು, ದಾಸವಣದಂಡೆಯನ್ ತೋರದಿಂಡೆಯಾಡಿದಂತೆ ದೆಸೆ ದೆಸೆಗೆ ಕೆದಱಿದ ಕಂಡದಿಂಡೆಗಳುಮ್, ನಾರಂಗ ಸಕಳವಟ್ಟೆಯ ಪಳಯಿಗೆಗಳಂತೆ ನಭಕ್ಕೆ ಮಿಳಿರ್ದು ಮಿಳ್ಳಿಸಿ ಪಾಱುವ ನೆತ್ತರ ಸುಟ್ಟುರೆಗಳುಮ್, ಅತಿ ಭಯಂಕರ ಆಕಾರಮಾಗೆ ಕಾದಿ ಬಸವಳಿದ ಸಾತ್ಯಕಿಯನ್ ಭೂರಿಶ್ರವನ್ ಅಶ್ರಮದೊಳ್ ನೆಲಕೆ ಇಕ್ಕಿ, ಗಂಟಲನ್ ಮೆಟ್ಟಿ, ತಲೆಯನ್ ಅರಿವಾಗಳ್, ಸಾತ್ಯಕಿ ಭೂಮಿಯುದ್ಧ ಪ್ರವೀಣನ್ ಅಪ್ಪುದಱಿಂದ ಆತನ ಬಾಳ ಬಾಯೊಳ್ ಚಕ್ರಾಕೃತಿಯೊಳ್ ತಲೆಯನ್ ತಿರುಪುತ್ತುಮ್ ಇರ್ದಾಗಳ್, ಅದನ್ ಮುರಾಂತಕನ್ ಕಂಡು

ವಿದ್ವಿಷ್ಟವಿದ್ರಾವಣಂಗೆ ತೋಱಿದೊಡೆ, ನರನ್ ಎಚ್ಚೊಡೆ ಕರ ಪಱಿದು, ಕರವಾಳ್ ಒಡನೆ ಕಾಸಿ ಬೆಚ್ಚಂತೆ ಅಮರೆ, ವಸುಂಧರೆಯೊಳ್ ಬಿಳ್ದು ಇರ್ದುದು. ಭೂರಿಶ್ರವನಾ ಪೂಣಿಸಿದ ಮುಷ್ಟಿ ಏನ್ ತಿರವೋ. ಆಗಳ್ ಸಾತ್ಯಕಿ ಮುಳಿಸಿನೊಳ್ ಕಣ್ಗಾಣದೆ ಭೂರಿಶ್ರವನ ತಲೆಯನ್ ಅರಿದು, ತನ್ನೇಱಿಂಗೆ ತಾನೆ ಸಿಗ್ಗಾಗಿ ಪೋದನ್. ಅನ್ನೆಗಮ್ ಯಮನಂದನನ ಬೆಸದೊಳ್ ಫಲ್ಗುಣನನ್ ಕೆಯ್ಕೊಳಲ್ ಬರ್ಪ ಮರುನ್ನಂದನಂಗೆ ಆ ದ್ರೋಣರ್ ಅಡ್ಡಮ್ ಬಂದೊಡೆ, ಗುರುಗೆ ಗುರುದಕ್ಷಿಣೆ ಕುಡುವಂತೆ ಅವರ ರಥಮನ್ ಶತಚೂರ್ಣಮ್ ಮಾಡಿ, ಕಳಿಂಗರಾಜ ಗಜಘಟೆಗಳನ್ ಔಂಕಿ ಸೊರ್ಕುತ್ತುಮ್ ಬರೆ, ದುಶ್ಶಾಸನಾದಿಗಳ್ ಅದಿರದೆ ಇದಿರನ್ ಬಂದು ಆಂತೊಡೆ...)

**ಭೀಮ:** ನಿಡುವಗೆ ಸ್ಯೆಪಿನಿಂದೆ ದೊರೆಕೊಂಡುದು. ಗದೆಗೊಂಡೆನಪ್ಪೊಡೆ ಇವರ್ ಈಗಡೆ ಪರೆದಪರ್. ಇವಂದಿರನ್ ಎಚ್ಚು ತವೆ ಕೊಲ್ವೆನ್.

(ಎಂದು ನಚ್ಚಿನ ಅಚ್ಚು ಉಡಿವಿನಮ್ ಎಚ್ಚೊಡೆ, ಎಚ್ಚ ಎಡೆಯಿನ್ ಅರುಣಾಂಬು ಕಲಂಕಿ ಪಾಯೆ, ಅಂಧನೃಪಾಲ ನಂದನರ್ ಮರುತ್ತನೂಜನಾ ಮುನ್ನಡಿಯೊಳ್ ಉರುಳ್ದರ್. ಅಂತು ದುರ್ಮುಖ ದುರ್ಮದ ದುರ್ಧರ್ಷಣರ್ ಮೊದಲಾಗೆ ಮೂವತ್ತು ಮೂವರನ್ ಕೊಂದು, ದುಶ್ಶಾಸನನನ್ ವಿರಥನನ್ ಮಾಡಿ, ದುರ್ಯೋಧನನನ್ ಒಂದೆ ನಿಶಿತ ವಿಶಿಖ ಹತಿಯಿನ್ ಸುರುಳ್ದು ಉರುಳ್ವಿನಮ್ ಎಚ್ಚು ಮೂರ್ಛಾಗತನನ್ ಮಾಡಿ, ಸಿಂಹನಾದದಿನ್ ಆರ್ದು ಮುಟ್ಟೆವರ್ಪಾಗಳ್, ಆಳ್ದನ ಸಾವನ್ ನೋಡಲಾಱದೆ, ಎಡೆಗೋದು ಅಂಕದ ಕರ್ಣನ್ ಎಯ್ದೆವರೆ, ದಿವ್ಯಾಸ್ತ್ರಂಗಳಿಂದಮ್ ಸಿಡಿಲ್ ಪೊಡೆವಂತಪ್ಪಿನಮ್ ಉದಗ್ರರಥಮನ್ ಎಚ್ಚು, ಮುಯ್ಯೇಳು ಸೂಳ್ ಕಡಿಯಲ್ ಸಾರ್ದೊಡೆ ಸೂತಸುತನ್ ಅಳಲ್ದು, ಒಂದು ಉಗ್ರೇಷುವಿನ್ ತಿಣ್ಣಮ್ ಎಚ್ಚು ಭೀಮನ್ ನಸುಮುಚ್ಚೆವೋಗಿ ರಥದೊಳ್ ನರಲ್ವನ್ನೆಗಮ್ ಆರ್ದನ್. ಅಂತು ಮೂರ್ಛಾಗತನಾದ ಭೀಮನ ಕೊರಲೊಳ್ ಬಿಲ್ಲನ್ ಕೋದು ಮೇಗಿಲ್ಲದೆ ತೆಗೆದು...)

**ಕರ್ಣ:** ತಾನ್ ಗಡಮ್ ಎನ್ನಾಳ್ದನ ತೊಡೆಯನ್ ಇನ್ ಉಡಿವನ್. ಇವನ್ ಎನ್ನೊಳಮ್ ಕಾದುವನ್.

(ಎಂದು ಅಂಗಪತಿ ನುಡಿದು, ಅಂಬಿಕೆಗೆ ನುಡಿದ ನುಡಿ ಮನದೊಳ್ ನಿಲೆ, ಕೊಲ್ಲದೆ ತಾಂಗಿದನ್. ಅನ್ನೆಗಮ್ ಇತ್ತ ಚಾಣೂರಾರಿ ಜರಾಸಂಧಾರಿಯ ಮುನ್ನೆಗೆದು ಬಳಿಕ್ಕ ಅಡಂಗಿದ ಸಿಂಹನಾದಕ್ಕೆ ಮನಃಕ್ಷತಂಬಟ್ಟು ಸಾತ್ಯಕಿಯನ್ ಆರಯಲ್ ಅಟ್ಟಿದೊಡೆ, ಆತನ್ ಬಂದು ಅಚೇತನನಾಗಿ ಬಿಳ್ದಿರ್ದ ವೃಕೋದರನನ್ ತನ್ನ ರಥಮನ್ ಏಱಿಸಿಕೊಂಡು ಕೂಡೆ ವಂದನ್. ಅನ್ನೆಗಮ್ ದುರ್ಯೋಧನನ್ ಕರ್ಣನ್ ಬೆರಸು ಸೈಂಧವನ ಮೊನೆಯೊಳ್ ಆತನನ್ ಪೆಱಗಿಕ್ಕಿ ಮುಂದೆ ನಿಂದಾಗಳ್...)

**ಕೃಷ್ಣ:** (ಅರ್ಜುನನಿಗೆ)

ದಿನಕರನ್ ಅಸ್ತಮಸ್ತಕಮುಮ್ ಆಸೆವಡಲ್ ಬಗೆದಪ್ಪನ್. ಏಕೆ ಕೆಮ್ಮನೆ ತಡೆವೈ. ಜಯದ್ರಥನನ್ ಇಕ್ಕು. ಆರೊಳಮ್ ತೊಡಂಕವೇಡ.

(ಎಂದು ಎನುತಮ್ ಅಜನ್ ಮರುಜ್ಜವದೆ ಚೋದಿಸೆ, ಪಾರ್ಥನ ದೇವದತ್ತನಿಸ್ವನದೊಳೆ ತೀವಿ ಅಜಾಂಡ ಮಂಡಳಮ್ ಪೊಟ್ಟನೆ ಒಡೆವಂತೆವೊಲ್ ಆದುದು. ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನ ಘಾತ ನಿರ್ಭರ ಸ್ಫುಟಿತ ಧರಾತಳಮ್ ವಿಜಯನುಗ್ರರಥಮ್ ಘಟಾಘಟಿತ ಹಟದ್ವಿರೋಧಿ ರುಧಿರಪ್ರವ ಲಂಪಟ ಸಂಕಟ ಉತ್ಕಟಮ್, ಕಟಕಟಘಾತ ನಾಕತಟ ಸಂಕಟಮ್ ಸಂಗರ ರಂಗಭೂಮಿಯೊಳ್ ಪರಿದತ್ತು ದಲ್. ಆಗಳ್ ಕುರುಧ್ವಜನಿಗೆ ಭಯಜ್ವರಮುಮ್ ಮಹೇಶ್ವರಜ್ವರಮುಮ್ ಬರೆ ಬರ್ಪ ಉದಾರ ಮಹೇಶ್ವರನ ರಥದ ಬರವನ್ ಕಂಡು, ಕರ್ಣ ಶಲ್ಯ ಶಕುನಿ ಶಾರದ್ವತ ಕೃತವರ್ಮ ದುರ್ಯೋಧನ ದುಶ್ಶಾಸನರ್ ಮೊದಲಾದ ಅತಿರಥ ಸಮರಥ ಮಹಾರಥ ಅರ್ಧರಥರ್ ಒಂದೆ ಏಂದೆಯಲ್ಲದೆ ಒಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್ ಈ ಎಱಗುವ ಅಂಬಿನ

ಬಲ್ಸರಿ ಶರದೊಳಗೆ ಉರ್ಚಿಪೋಪ ಪೊಳಪಿಂಗೆ ಒಳಗಾಗಿ ತಗುಳ್ದುದು ಒಂದು ಬೆಳ್ಸರಿಗೆ ಎಣೆಯಾದುದು ಎಂಬಿನಮ್ ನಿರಂತರದೊಳೆ ಪಾಯ್ದು ಕೂರ್ಗಣೆಯಿನ್ ಗುಣಾರ್ಣವನ್ ಚತುರ್ಬಲಮ್ ತಱಿದೊಟ್ಟಿ ತೆರಳ್ಚಿ ತೂಳ್ದಿಕೊಂಡು ಅರೆದು ಮಗುಳ್ಚಿ ಸಣ್ಣಿಸಿದನ್.)

**ಅರ್ಜುನ:** ಕಲಿಗಮ್ ಬಲ್ಲಾಳ್ಗಮ್ ಅಂಬು ಎತ್ತಿದೆನ್. ಸಿಂಧುರಾಜನ್ ಮಾರ್ಕೊಳಲ್ ಇದುವೆ ಪದಮ್. ಗೆಲಲೆಂದು ಆನ್ ಬಂದೆನ್. ಇನ್ ಕೊಂದಪೆನೆ. ನೆರೆದು ನಿಂದು ಆನಿಮ್.

(ಎಂದು ಆಂತರನ್ ಮೂದಲಿಸುತ್ತೆ, ಪ್ರಚಂಡ ಪ್ರಳಯ ಘನಘಟಾ ರಾವದಿಂದೆ ಆರ್ದು ಎಚ್ಚನ್. ರೋದೋವಿವರಮನ್ ಬಾಣಾವಲಿಯಿಂದಮ್ ಪೂಳೆ ಒಂದು ಘೋರಾಂಧಕಾರಮ್ ಒದವಿತ್ತು. ಅಂತು ಅಮೋಘಾಸ್ತ್ರಧನಂಜಯನ್ ಎಚ್ಚ ಶರಸಂಘಾತದಿನ್ ಒಗೆದ ರಣಗಳ್ತಲೆಯೆ ಮೊಲಗಳ್ತಲೆಯನ್ ಮಾಡೆ ನೇಸಱ್ ಪಟ್ಟತ್ತು.)

**ಕೌರವ ಬಳಮ್:** ವಿಜಯನ್ ಸೋಲ್ತನ್.

(ಎಂದು ಆರ್ದೊಡೆ, ಜ್ವಳತ್ ಅನಳಾಸ್ತ್ರದಿಂದೆ ಇಸೆ, ಕಳ್ತಲೆ ತೆರಳ್ದು ತೂಳ್ದುದು. ಆಗಳ್ ಮಹಾರಥರ್ ಉಮ್ಮಳಿಸಿ ಪೆಳಱೆ...)

**ಸೈಂಧವ:** (ತನ್ನಲ್ಲಿಯೇ)

ಎನ್ನ ಅಳವಿಂಗಮ್ ದೋರ್ಬಲದ ಅಳವಿಂಗಮ್ ಇನ್ ಎನಗೆ ಸೆಡೆದಿರಲ್ ದೊರೆಯಲ್ತು.

(ಎಂದು ಬಂದು, ಅಸುಂಗೊಳೆ ಜಗದೇಕಮಲ್ಲನೊಳ್ ಸುರರ್ ತನ್ನ ಅಳವನ್ ಪೊಗಳೆ ಪೊಣರ್ದನ್. ಅಂತು ಅತಿರಥ ಮಥನನ ರಥಕ್ಕೆ ಅದಿರದೆ ಇದಿರನ್ ತನ್ನ ರಥಮನ್ ಪರಿಯಿಸಿ ಜಯದ್ರಥನ್ ಮುಟ್ಟೆವಂದು...)

**ಸೈಂಧವ:** ನಿನ್ನೆ ನಿನ್ನ ಮಗನನ್ ಸೆರಗಿಲ್ಲದೆ ಪೊರಳ್ಚಿ ಕೊಂದೆನ್. ಇಂದುಮ್ ಇಂತು ಇನ್ನೆಗಮ್ ಇರ್ಪುದನ್ ಭಯದಿನ್ ಇರ್ದನೆ. ನಿನ್ನನೆ ಪಾರುತಿರ್ದನ್.

(ಎಂದು ಉನ್ನತ ಶೌರ್ಯದಿಂದೆ ಅಜಿತನನ್ ನರನನ್ ಏಳುಮ್ ಎಂಟುಮ್ ನಿಶಿತಾಸ್ತ್ರದಿನ್ ಮುನಿದು ಎಚ್ಚನ್. ಸಿಂಧುರಾಜನಾ ಅದಟು ಏನ್ ದೊರೆವೆತ್ತುದೊ. ಅಂತು ಎಚ್ಚು ಕಿಚ್ಚುಮ್ ಕಿಡಿಯುಮಾಗಿ ಪೆರ್ಚಿದ ಉಮ್ಮಚ್ಚದಿಂದ ಅಚ್ಚರಿಯಾಗಿ ಕಾದೆ...)

**ಅರ್ಜುನ:** ಎಂತು ಅಸ್ಮತ್ಪುತ್ರನನ್ ಸಂಗರದೊಳ್ ಅಳಿದೆ. ಇನ್ನಂತೆ ನಿಲ್. ಶಕ್ತಿ ಚಾತುರ್ದಂತಗಳ್ ನಿನ್ನನ್ ಆನ್ ಕೊಲ್ವ ಎಡೆಯೊಳ್ ಕಾವುವೇ... ಪೇಳ್... ಕಾಯವು... ಅಣ್ಮ.

(ಎಂದು ಆಂತಾಂತು ಎಚ್ಚೆಚ್ಚು ಸೂತ ಧ್ವಜ ಹಯ ರಥ ಸಂಘಾತಮನ್ ನುರ್ಗೆ, ಲೋಕಕ್ಕೆ ಅಂತಮ್ ಮಾಳ್ಪ ಅಂತಕಂಬೊಲ್ ಗದೆವಿಡಿದು ಉಜಿದೆ ಎಯ್ತರ್ಪನನ್ ಅನಂತನ್ ಕಂಡು...)

**ಕೃಷ್ಣ:** ಪಾಶುಪತಮನ್ ತುಡು.

(ಎನೆ, ನರನ್ ಎಡೆಮಡಗದೆ ತುಡೆ, ದಿಶಾಳಿ ನಡುಗಿದುದು; ವಿಯತ್ತಳಮ್ ಸುರುಳ್ದು ಉಡುಗಿದುದು; ಎಳೆ ಪಿಡುಗಿದುದು; ಶಿವನ ಮನಮ್ ಕಲಂಕಿ ಕದಡಿದುದು. ಬೆಟ್ಟು ಸುಳಿಯೊಳಗಿರ್ದು ಪೊಱಪೊಣ್ಮುವಿನಮ್, ಲವಣಾಂಬುರಾಶಿ ಕುಕ್ಕುಳಗುದಿವಲ್ಲಿ ಕೂಳ್ ಕುದಿಯೆ, ಮೇಗೆ ಸಿಡಲ್ದ ಅಗುಳಂತೆ ಕೂಡೆ ತತ್ತಳ ಕುದಿಯುತ್ತುಮಿರ್ಪ ಕುದಿಯೊಳ್, ಅಲ್ಲಿಯ ಮುತ್ತುಗಳ್ ಸಿಡಿದು, ರುದ್ರ ಸುರೇಂದ್ರವಿಮಾನ ಪಂಕ್ತಿಯನ್ ಒರ್ಮೊದಲೆ ಛಳಿಲ್ ಛಳಿಲೆನೆ ಕೊಂಡವು. ಅಂತು ಸಮುದ್ರ ಕ್ಷೋಭಮುಮ್ ತ್ರೈಲೋಕ್ಯಕ್ಷೋಭಮುಮ್ ಒಡನೊಡನಾಗೆ ತೆಗೆನೆಱೆದು ಊಱಿಕೊಂಡು ಇಸೆ, ಶಿರಮ್ ಪಱಿದು ವಿಯತ್ತಳಂಬರಮ್ ನೆಗೆದೊಡೆ, ರಾಹು ಬಾಯ್ದೆಱೆದು ನುಂಗಲೆ ಬಂದಪುದು ಎಂಬ ಶಂಕೆಯಿಂದ ದಿನೇಶನ್ ಅಗಿದು, ಅಸ್ತಗಿರಿಯನ್ ಮಱೆಗೊಂಡನ್. ಪರಸೈನ್ಯ ಭೈರವನ್ ಅಮೋಘಮ್ ನೆಗಳ್ತೆಯನ್ ಆಹವದೊಳ್ ಪಡೆದನ್.)



# ೮೩. ಘಟೋತ್ಕಚನ ಸಾವು

(೧ ನೆಯ ಪದ್ಯದಿಂದ ೧೬ ನೆಯ ಪದ್ಯ)

## ಪಾತ್ರಗಳು

**ದ್ರೋಣ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

**ಘಟೋತ್ಕಚ:** ಭೀಮ ಮತ್ತು ಹಿಡಿಂಬೆಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಕರ್ಣ:** ಅಂಗರಾಜ್ಯದ ಒಡೆಯ.

# ಘಟೋತ್ಕಚನ ಸಾವು

ಶ್ರೀಕಾಂತಾಕಾಂತನ್ ಇಳಾಲೋಕೈಕ ಲಲಾಮನ್ ಅರಿಗನ್ ಅನೇಕಮನ್ ಮಹೋಗ್ರಾರಿ ನೃಪ ಆನೀಕಮನ್ ಗೆಲ್ದು ಉಱದೆ ಆ ಕಲಹದೊಳ್ ನಿಲ್ವುದುಮ್ ಆಗಳ್...

**ದ್ರೋಣ:** (ತನ್ನ ಮನದಲ್ಲಿ)

ನೃಪನ್ ನಂಬಿ ಬಂದು ಸೈಂಧವನನ್ ಎನಗೆ ಅಪ್ಪೈಸೆ, ಆದುದನಾಗಲ್ಕೆ ಪೂಣ್ದೆನ್. ಇಂಬಳಿದು ಅವನ್ ಅನುವರದೊಳ್ ಮುಂಬಯಣಮ್ ಪೋದನ್. ಎನಗೆ ಮಾಣ್ಬುದು ದೊರೆಯೇ. **"ಬವರದೊಳ್ ಏನ್ ಬಲ್ಲನ್. ಕರಮ್ ಪೆಱರ್ಗೆ ಒವಜುಗೆಯಲ್ ಕಂಡು ತನಗೆ ಅಱಯನ್"** ಅದು ಎಂತುವೊ ನುಡಿ, ತಪ್ಪದು. **"ಬಿಲ್ಲೊವಜನ್ ಕಮ್ಮರಿಯೊವಜನ್"** ಎಂಬುದನ್ ಮಾಡುವೆನೇ. ಒಪ್ಪೆ ಜಯದ್ರಥನ್ ಆದುದನ್ ಅಪ್ಪೆನ್, ಪೋಗು ಎಂದು ಮುನ್ನೆ ನುಡಿದುದನ್, ಈಗಳ್ ತಪ್ಪುವೆನೆ. ಧರೆಯೊಳ್ ಎನ್ನ ನುಡಿಯುಮ್ ಎನ್ನ ಎಚ್ಚ ಅಂಬುಮ್ ತಪ್ಪದು ವಲಮ್.

(ಎಂದು ಕುಂಭಸಂಭವನ್ ಜಳನಿಧಿಯನ್ ಕುಡಿದ ಕುಂಭಸಂಭವನಂತೆ ಪಾಂಡವಬಲ ಜಳನಿಧಿಯನ್ ಅಳುರಲ್ ಬಗೆದು, ನೇಸಱ್ ಪಟ್ಟೊಡಮ್ ಪೋಗದೆ..)

**ದ್ರೋಣ:** (ತನ್ನ ಮನದಲ್ಲಿ)

ಪಗಲಿನ ಅನುವರದೊಳ್ ಅಳ್ಳೆವಿಳ್ಳೆಯಾದ ಪಾಂಡವರನ್ ಇರುಳೊಳೆ ಗೆಲ್ವೆನ್.

(ಎಂದು ಚತುರ್ಬಲಂಗಳನ್ ಒಂದು ಮಾಡಿ, ತಕ್ಕಿನ

ವಿಕ್ರಮಾರ್ಜುನನ ಕೋಪದ ದಳ್ಳುರಿಗಳ್ ವಿರೋಧಿಯನ್ ಮುಕ್ಕಲೆ ಮುತ್ತಿದಂತೆ ಕರಿಗೆ ಎಂಟು, ರಥಕ್ಕೆ ಅನುವಾಗೆ ನಾಲ್ಕು, ವಾಹಕ್ಕೆ ಎರಡು, ಪಾದಚರರ್ಗೆ ಒಂದು ಎನೆ ದೀವಿಗೆಗಳ್ ಎರಳ್ದೆಸೆಯ ಒಡ್ಡಣಂಗಳೊಳ್ ಜಲಕ್ಕನೆ ಇಟ್ಟಳಮ್ ಎಕ್ಕೆಕ್ಕೆಯಿನ್ ಬೆಳಗುತಿರ್ದುವು. ಅಂತು ಪಗಲ್ ಇಱಿದು ತಣಿಯದೆ, ಇರುಳನ್ ಪಗಲ್ ಮಾಡಿ ಕಾದುವ ಎರಳ್ಪಡೆಗಳ ಏರ್ವೆಸನನ್ ಕಣ್ಣಾರೆ ನೋಡಲೆಂದು ವೈಮಾನಿಕ ದೇವರ್ ಅಂಬರತಳದೊಳ್ ಇರ್ದು, ಕಿರ್ಚೆಳ್ದ ಲಂಕೆಯನ್ ನೋಳ್ಪಂತೆ ನೋಡೆ, ಧರ್ಮಪುತ್ರನ್ ಅಧೋಕ್ಷಜನನ್ ಇಂತು ಎಂದನ್.)

**ಧರ್ಮರಾಯ:** ಇರುಳೊಳುಮ್ ಪೋಗದೆ ಇಂತು ಇಱಿಯಲ್ ಘಟಸಂಭವನ್ ಇರ್ದನ್. ಎಂತು ಈ ಮಹಾಹವಮನ್ ನಿತ್ತರಿಸುವಮ್.

**ಕೃಷ್ಣ:** ಇನ್ ಇರುಳೊಳ್ ಬಲಮ್ ನಿಶಾಚರ ಬಲಕುಂಟು . ಮಾಣದೆ ಘಟೋತ್ಕಚನನ್ ಬೆಸಸವೇಳ್ವುದು.

(ಎಂದೊಡೆ, ಆದರದೊಳೆ ಯಮರಾಜನಂದನನ್ ಆ ಪದದೊಳ್ ಭೀಮನಂದನನನ್ ಕರೆದು...)

**ಧರ್ಮರಾಯ:** ಮಗನೆ ನೀನ್ ಇಂದು ಇರುಳಿನ ಅನುವರಮನ್ ಎನಗೆ ಗೆಲ್ದು ಈಯಲ್ವೇಳ್ಕುಮ್.

(ಎಂದೊಡೆ)

**ಘಟೋತ್ಕಚ:** ಇದಾವುದು ಅರಿದುಮ್ ಪಿರಿದುಮಾಗಿ ಬೆಸಸಿದಿರ್. ಅಂತೆ ಗೆಯ್ವೆನ್. ಎನ್ನ ತೊಳ್ತುವೆಸನನ್ ಈ ವಿಶಸನರಂಗದೊಳ್ ತೋರ್ಪೆನ್.

(ಎಂದು ಪರೆದ ಉರಿಗೇಸಮ್, ಅವ್ವಳಿಪ ನಾಲಗೆ, ಮಿಂಚುವ ದಾಡೆ, ಬಿಟ್ಟ ಕಣ್, ತಿರಿಪಿದ ಮೀಸೆ, ಕೊಂಕಿದ ಸಟಮ್, ಕರಿದಪ್ಪ ಕದಂಪು, ನೀಳ್ದ ತಾಳ್ಮರದವೊಲಪ್ಪ ಒಡಲ್, ಕಹಕಹಧ್ವನಿ, ಕೌಳಿಕನಾದಮ್ ಆಸುರತರಮಾಗೆ ಘಟೋತ್ಕಚ ರೌದ್ರ ಸಾಧನಮ್ ಕವಿದತ್ತು. ಅಂತು ನಿಶಾಚರ ಬಲಮ್ ಅಱವಱಗಾದ ಕಾಡನ್ ಅಳುರ್ವ ಬೇಗೆಯ ದಳ್ಳುರಿಯಂತೆ ದಳ್ಳಿಸಿ **'ಕೊಳ್'**

ಎಂದು ಅರಾತಿಬಲಮನ್ ಅಳುರೆ, ಕರಡಿಯ ತೊವಲೊಳ್ ಪುದಿದ ಕರ್ಬೊನ್ನ ರಥಮುಮ್, ಆ ರಥದೊಳ್ ಒಡಂಬಡೆ ಪೂಡಿದ ನಾಲ್ನೂಱು ಗೊಂಕುಱುಗಳ್ತೆಯುಮ್, ಅಂಬರಸ್ಥಲಮನ್ ಅಡರ್ವ ಗೃಧ್ರಧ್ವಜಮುಮ್, ಅಂಜನ ಪುಂಜದಂತಾಗಿ ಬ್ರಹ್ಮಾಂಡಮನ್ ತಾಗಿದ ವಿಕಟಾಂಗಮುಮ್, ಎಳವೆಱೆಯನ್ ಅಡಸಿದಂತಪ್ಪ ದಾಡೆಯುಮ್ ಅಗುರ್ವಾಗೆ ಬಂದು ತಾಗಿದಾಗಳ್, ಕುದುರೆಯ ಬಿಲ್ಲ ಬಲ್ಲಣಿಯ ಕೇಣಿಯನ್ ಅಲ್ಲಿ ಕೆಲರ್ ನಿಶಾಟರ್ ಉಣ್ಮಿದ ಬಿಸುನೆತ್ತರೊಳ್ ಮಿದಿದು ನುಣ್ಣನೆ ನುಂಗಿದರ್.

ಕೆಲರ್ ಕುದುಗುಳಿ ರಕ್ಕಸರ್ ಬಿಸುಗೆಗಳ್ವೆರಸು ಉಗ್ರಮಹಾಗಜಂಗಳನ್ ಚದುರ್ಗಿಡೆ ನುಂಗಿ, ಬಿಸುನೆತ್ತರ ಕಾಳ್ಪುರಂಗಳನ್ ಬಿಕ್ಕಿ ಕುಡಿದರ್. ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮನ್ ತೆರಳ್ಚಿ ತೇರಯಿಸಿ ನುಂಗಿದೊಡೆ, ಬೆಱಗಾದ ಸುಯೋಧನನನ್ ಬಕಾಸುರ ಜಟಾಸುರರ ಮಕ್ಕಳಪ್ಪ ಅಳಂಭೂಷ ಹಲಾಯುಧ ಮುಸಲಾಯುಧ ಕಾಳ ನೀಳ ರೂಕ್ಷ ರಾಕ್ಷಸರ್ ಮುನ್ನೆ ತಮ್ಮಣ್ಣನ ತಂದೆಯ ಪಗೆಯನ್ ನೆಱಪಲೆಂದು ಬೆಸನಮ್ ಬೇಡಿದಾಗಳ್...)

**ದುರ್ಯೋಧನ:** (ತನ್ನ ಮನದಲ್ಲಿ)

ಅಗ್ನಿಗೆ ಅಗ್ನಿ ಪ್ರತಿವಿಷಮ್, ವಿಷಕಮ್ ವಿಷಮ್ ಎಂಬವೊಲ್, ಆ ನಿಶಾಚರಂಗೆ ಈ ನಿಶಾಟರ್ ಅತಿಬಲರ್ ಇವರ್ ಅಕ್ಕೆ.

(ಎನುತುಮ್ ಬೆಸವೇಳೆ, ತಾಗಿದ ಆ ಅದಿತಿಸುತರನ್ ಘಟೋತ್ಕಚನ್ ಅಸುಂಗೊಳೆ ಕಾದಿ, ನಿಶಾಟ ಕೋಟಿ ಸಂತತಿಗಳನ್ ಇಕ್ಕಿ, ಪಾಂಡವ ಬಲಕ್ಕೆ ಅನುರಾಗಮನ್ ಉಂಟು ಮಾಡಿದನ್. ಅಂತು ಕುರುಬಲಮೆಲ್ಲಮನ್ ಜೀರಗೆಯೊಕ್ಕಲ್ ಮಾಡಿ, ತುಳಿದು ಕೊಲೆ, ರಾಜರಾಜನ ಬೆಸದೊಳ್ ಅಂಗರಾಜನ್ ಬಂದು ತಾಗೆ. ಸಮದೇಭೇಂದ್ರ ಸಮೂಹದಿಂದಮ್ ಇಡುತುಮ್, ಕಂಠೀರವ ಧ್ವಾನದಿಂದೆ ಅಗುರ್ವಪ್ಪಿನಮ್ ಆರುತುಮ್, ಪೆಣಂಗಳನ್ ನುಂಗುತುಮ್, ಆಕಾಶದ

ಅಂತಮನ್ ಎಯ್ದುತ್ತುಮ್, ಇದಿರ್ಚಿ ಕಾದುವೆಡೆಯೊಳ್, ದೇವರ್ಕಳ್ ಕಾಣುತ್ತೆ **'ಇನ್ನುಮ್ ರಾವಣನ್ ಒಳನ್'** ಎಂಬಿನಮ್ ಹೈಡಿಂಬನ ಆಡಂಬರಮ್ ನೆಗೆಳ್ದುದು. ಸರಿದಧಿಪತಿ ಮೊಳಕಾಲ್ವರಮ್, ಮೇರು ಉರಂಬರಮ್, ಅಜಾಂಡಮ್ ಮುಯ್ವುವರೆಗಮ್ ಬರೆ ತಲೆಯ ನೆಲೆಗೆ ಲೋಕಾಂತರಮ್ ಎಡೆಯಿಲ್ಲ ಎನಿಸೆ ದನುತನಯನ್ ಪೆರ್ಚಿದನ್.)

**ಕರ್ಣ:** ಬೆಳ್ಳಾಳ್ಗೆ ಪೊಳೆಪು ತೋಱುವುದು. ಒಳ್ಳಾಳ್ಗೆ ಪೊಡರ್ಪು ತೋರ್ಪುದು. ಅಣ್ಮು... ಅಣ್ಮು... ಕೊಳ್ಳ ಕೊಳ್...

(ಎಂದು ಒಳ್ಳಲಗಿನ ಶರತತಿಯಿನ್ ಅಂಗರಾಜನ್ ಅಸುರನನ್ ಎಚ್ಚನ್. ಎಚ್ಚೊಡೆ ಅಸುರನ್ ಇಟ್ಟ ಬೆಟ್ಟಮ್ ಒಂದು ವಜ್ರಶರದಿನ್ ಆರ್ದು ಎಚ್ಚು, ದಿತಿಜನ್ ಎಚ್ಚ ಸಿಡಿಲಶರಮನ್ ಉದಕ ಬಾಣದಿಂದೆ ಎಚ್ಚು, ದನುತನೂಜನ್ ಎಚ್ಚ ವಾರ್ಧಿಗೆ ಅನಲ ಬಾಣದಿಂದೆ ಎಚ್ಚು ನಚ್ಚುಗಿಡಿಸೆ, ಘಟೋತ್ಕಚನ್ ಶೂಲಮನ್ ಕೊಂಡು ನೆಲನ್ ಅದಿರ್ವಿನಮ್ ಇದಿರಂಬರೆ, ಕುಲಿಶಾಯುಧನ್ ಇತ್ತ ಶಕ್ತಿಯಿಂದೆ ಆತನ ಉರಃಸ್ಥಲಮನ್ ಇಡೆ, ವಜ್ರಹತಿಯಿನ್ ಕುಲಗಿರಿ ಕೆಡೆವಂತೆ ಆ ದನುತನಯನ್ ಕೆಡೆದನ್.)

**ಎರಡು ಸೇನೆಗಳು ಮತ್ತು**

**ದೇವತೆಗಳ ಸಮೂಹ:** ಇವನ ಕಬಂಧ ಘಾತದಿನ್ ಒಂದು ಅಕ್ಷೋಹಿಣಿ ಇಂದು ನುರ್ಗಿದುದು. ಸತ್ತು ಇನಿತನ್ ಕೊಂದನ್. ಇವನನ್ ಅಳ್ಕುಱಿ ಕೊಂದ ಅಳವು ಇನತನಯನಲ್ಲದಂಗೆ ಒಪ್ಪುಗುಮೇ.

(ಎಂದು ಎರಡುಮ್ ಪಡೆಗಳುಮ್ ದೇವರ ಪಡೆಗಳುಮ್ ಕರ್ಣನನೆ ಪೊಗಳೆ, ಕಾದಲ್ವೇಡ ಎಂಬಂತೆ ಉಭಯಸೈನ್ಯಂಗಳ್ಗೆ ಅಡ್ಡಮಾಗಿ ಕುಲಗಿರಿ ಕೆಡೆವಂತೆ ಅಯ್ಯಾವುದು ನೆಲನ್ ಒಡಲ್ ಅಳವಿಯಾಗೆ ಬಿಳ್ದಿರ್ದ ಘಟೋತ್ಕಚನ ಸಾವಿಂಗೆ ಕರಮ್ ಅಳಲ್ದು ಕಣ್ಣ ನೀರನ್ ಸಿಡಿವ ಅಂತಕಾತ್ಮಜನನ್ ಅನಂತನ್ ಇಂತು ಎಂದನ್.)

ಕೃಷ್ಣ: ದಿವಿಜಾಧೀಶನ ಕೊಟ್ಟ ಶಕ್ತಿಯನ್ ಅದನ್, ಕರ್ಣನ್ ನರಂಗೆ ಎಂದು ಬಯ್ತು, ಅವನಿಂದೆ ಇಂದು ಅಳಿವು ಎಯ್ದೆ ವಂದೊಡೆ ಅದಱಿಂದೆ ಆತನನ್ ಕೊಂದನ್. ಇನ್ ಇವನನ್ ಕೊಲ್ವುದು ಮೊಗ್ಗು. ಅದರ್ಕೆ ಅಳಲವೇಡ.

(ಎಂಬನ್ನಮ್, ಅತ್ತ ರವಿ ನಿಜಾತ್ಮಜನ ಗೆಲ್ದ ಉಗ್ರ ಆಜಿಯನ್ ನೋಳ್ಪವೋಲ್ ಪೂರ್ವಾಚಲಮನ್ ಏಱಿದನ್.)



# ೮೪. ದ್ರೋಣರ ಸಾವು

(೧೬ ನೆಯ ಗದ್ಯದಿಂದ ೩೩ ನೆಯ ಗದ್ಯ)

**ಪಾತ್ರಗಳು**

**ದ್ರುಪದ:** ಪಾಂಚಾಲ ದೇಶದ ರಾಜ. ದ್ರೌಪದಿಯ ತಂದೆ.

**ದ್ರೋಣ:** ಕೌರವರ ಮತ್ತು ಪಾಂಡವರ ವಿದ್ಯಾಗುರು.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅಶ್ವತ್ಥಾಮ:** ದ್ರೋಣಾಚಾರ್ಯನ ಮಗ.

# ದ್ರೋಣರ ಸಾವು

ಆಗಳ್ ಕುಂಭಸಂಭವನ್ ಶೋಣಾಶ್ವಂಗಳೊಳ್ ಪೂಡಿದ ಕನಕ ಕಳಶಧ್ವಜ ವಿರಾಜಿತಮಪ್ಪ ತನ್ನ ರಥಮನ್ ಏಱಿ, ಘಟೋತ್ಕಚನ ಕಳೇಬರ ಗಿರಿದುರ್ಗಮಲ್ಲದ ಸಮಭೂಮಿಯೊಳ್ ಚತುರ್ಬಲಂಗಳನ್ ಒಂದು ಮಾಡಿ, ಶೃಂಗಾಟಕವ್ಯೂಹಮನ್ ಒಡ್ಡಿ ನಿಂದಾಗಳ್, ಧೃಷ್ಟದ್ಯುಮ್ನನುಮ್ ಪಾಂಡವಪತಾಕಿನಿಯುಮನ್ ವಜ್ರವ್ಯೂಹಮನ್ ಒಡ್ಡಿ ನಿಲೆ, ಧರ್ಮಪುತ್ರನುಮ್ ಸುಯೋಧನನುಮ್ ಒಡನೊಡನೆ ಕೆಯ್ ಬೀಸಿದಾಗಳ್, ಎಳೆಯುಮ್ ಬ್ರಹ್ಮಾಂಡಮುಮ್ ತಾಗುವವೊಲ್ ಉಭಯಸೈನ್ಯಾಬ್ಧಿಗಳ್ ಬಿಲ್ ಬಿಲ್ಲೊಳ್, ಉದಗ್ರಾಶ್ವಂಗಳ್ ಅಶ್ವಂಗಳೊಳ್, ಅಣಿ ಅಣಿಯೊಳ್, ಸ್ಯಂದನಮ್ ಸ್ಯಂದನೌಘಂಗಳೊಳ್, ಉಗ್ರೇಭಮ್ ಮದೇಭಂಗಳೊಳ್ ಇಱಿಯೆ ತೆರಳ್ತರ್ಪ ಕೆನ್ನೆತ್ತರಿಂದೆ ಖಂಡಂಗಳ ಒಂದಿಂಡೆಯೊಳೆ ಜವನ್ ಅಡುರ್ತು ಓಕುಳಿಯನ್ ಆಗಳ್ ಆಡಿದಂತೆ ಆದುದು.

ಅಂತು ವೀರರಸದ ತೊಱೆಯುಮ್, ನೆತ್ತರ ತೊಱೆಯುಮ್ ಒಡನೊಡನೆ ಬೆಳ್ಳಂಗೆಡೆದು ಪರಿಯೆ, ಚತುರ್ಬಲಂಗಳ್ ಕಾದಿ ಬಸವಳಿದು ಪೆಱಪಿಂಗಿ ನಿಂದಾಗಳ್, ವಿರಾಟನ್ ತನ್ನ ಚತುರ್ಬಲಂಗಳನ್ ಒಂದುಮಾಡಿಕೊಂಡು ಪಾಂಡವರ್ ತನ್ನ ಮಾನಸಿಕೆಯನ್ ನಚ್ಚಿ, ತನ್ನ ಪೊಳಲೊಳ್ ಅಜ್ಞಾತವಾಸಮ್ ಮಾಡಿದುದುಮನ್, ದಕ್ಷಿಣೋತ್ತರ ಗೋಗ್ರಹಣದೊಳ್ ತನಗಾಗಿ ಕಾದಿ ತುಱುವನ್ ಮಗುಳ್ಚಿದುದುಮನ್ ನೆನೆದು, ಮಗಳನ್ ಪಾರ್ಥಾತ್ಮಜಂಗಮ್ ತಲೆ ಬಳಿವಳಿಯೆಂದು ಇತ್ತುದನ್, ತನ್ನ ಮಕ್ಕಳ್ ನೆಗಳ್ದ ಆ ಸಂಗ್ರಾಮದೊಳ್ ಸತ್ತುದುಮನೆ ಮನದೊಳ್ ತಾಳ್ದಿ ತಾಪಾಗಳ್, ಆ ಜೆಟ್ಟಿಗನನ್ ಕುಂಭೋದ್ಭವನ್ ಬಂದು ಅದಿರದೆ ಇದಿರನ್ ಆಂತು, ಒಂದೆ ಕೆಲ್ಲಂಬಿನಿಮ್ ಮೆಲ್ಲಗೆ ಪಾರ್ದು ಆರ್ದು ಏಸಿಮ್ ತಲೆಪಱಿದು ಸಿಡಿಲ್ದು ಅತ್ತ ಬೀಳ್ವನ್ನಮ್ ಆಗಳ್ ಎಚ್ಚನ್. ಅಂತು

ವಿರಾಟನನ್ ಇಕ್ಕಿ, ಮನದೊಳ್ ಅಳ್ಳಾಟಮ್ ಇಲ್ಲದೆ, ಅರಿನೃಪಕೋಟಿಯನ್ ಆಟರಲೆಂದು ಆಸ್ಫೋಟಿಸಿ, ನಿಶಿತ ಶರಕೋಟಿಯೊಳ್ ತಳಿಗೋಂಟೆಯನ್ ಇಕ್ಕಿ, ವೀರರಸನಿಕೇತನನಾಗಿರ್ದ ಕಳಶಕೇತನನನ್ ನೋಡಿ ದ್ರುಪದನ್ ಸೈರಿಸದೆ...)

**ದ್ರುಪದ:** (ತನ್ನ ಮನದಲ್ಲಿ)

ಎನಗಮ್ ಭಾರದ್ವಾಜಂಗಮ್ ವಿದ್ದೆಯೊಳ್ ಗುರುಗಳ್ ಒರ್ವರೆ. ಎನ್ನನ್ ಬಿಲ್ ಬಲ್ಮೆಯೊಳ್ ಮಿಗಲ್ ಪಿರಿದು ಪುರುಡು ಉಂಟು. ಎಯ್ದೆ ಬೇರ್ವರಿದ ಪಗೆಯುಮ್ ಬನ್ನಮ್ ಪಟ್ಟ ಮುನ್ನಿನ ಎನ್ನ ಬನ್ನಮುಮ್ ಪಿರಿದು. ಅದೆ ನೆವಗೊಂಡು ಆನ್ ಇಂದು ಇಲ್ಲಿ ನೀಗದೆ ಮಾಣ್ಬೆನೇ.

(ಎಂದು ಒಂದು ಅಕ್ಷೋಹಿಣೀ ಬಲಮ್ ಬೆರಸು, ಪ್ರಳಯದ ಮೂರಿಯುಮ್, ಆಕಾಶದ ಕವಿಯುಮ್, ನೆಲದ ಕಲ್ಲೆಯುಮ್ ಮುನ್ನಮೆ ಮೇರೆ ತಪ್ಪುವುದುಮನ್ ತನ್ನೊಳ್ ಅಳವಡಿಸಿಕೊಂಡು ತಾಗಿದಾಗಳ್, ಶಲ್ಯನೊಳ್ ಸಾತ್ಯಕಿ; ಶಾರದ್ವತನೊಳ್ ಕೃತಾಂತ ನಂದನನ್: ಕೃತವರ್ಮನೊಳ್ ನಕುಳನ್; ಶಕುನಿಯೊಳ್ ಸಹದೇವನ್; ಕರ್ಣನೊಳ್ ಭೀಮಸೇನನ್; ಅಶ್ವತ್ಥಾಮನೊಳ್ ಅಕಳಂಕರಾಮನ್ ದ್ವಂದ್ವಯುದ್ಧದೊಳ್ ತಾಗಿದಾಗಳ್, ದೆಸೆಯೆಲ್ಲಮ್ ತೀವ್ರ ಬಾಣಾಳಿಯೊಳೆ ಮೆಡಱಿದಂತೆ, ಅಂಬರಮ್ ಬಾಣದಿಂದಮ್ ಮುಸುಕಿಟ್ಟಂತೆ ಆಗೆ, ಬೇಗಮ್ ತುಡುವ ಬಿಡುವ ಸೂಳ್ಗೆಯ್ಯ ಬೇಗಂಗಳಮ್ ನಿಟ್ಟಿಸಲ್ ಆರ್ಗಮ್ ಬಾರದಂತಾಗೆ, ತದ್ರಾಜ ಚಕ್ರಮ್ ಅಸದಳಮ್ ಇಸೆ, ಉದ್ದಾಮ ಮೌರ್ವೀರವ ಮುಖರ ಮಹಾಚಾಪ ಚಕ್ರ ಅಂಧಕಾರಮ್ ಪೊದಳ್ದು ಅರ್ಬಿಸಿದತ್ತು.

ಅನ್ನೆಗಮ್ ಕಪ್ಪಂಗವಿಯಾಗಿ ಕವಿದ ದ್ರುಪದ ವಿಳಯಾನಳನನ್ ದ್ರೋಣನ್ ಮಹಾದ್ರೋಣ ಪುಷ್ಕಳಾವರ್ತಕಂಗಳೆಂಬ ವಿಳಯ ಕಾಳ ನೀಳ ಜಳಧರ ವರ್ಷಂಗಳಿನ್ ನಂದಿಸೆಯುಮ್, ನಂದದೆ ಮುಟ್ಟಿವರೆ, ದುರ್ಯೋಧನನ್ ಅನೇಕ ಆಯುಧ ಶರಭರಿತಂಗಳಪ್ಪ ರಥಂಗಳನ್ ದ್ರೋಣಾಚಾರ್ಯರ ಪೆಱಗೆ ನಿಱಿಸಿ, ಆಯುಧಾಧ್ಯಕ್ಷರಮ್ ಪೇಳ್ದು, ಚಕ್ರರಕ್ಷೆಗೆ ದುಶ್ಶಾಸನಾದಿಗಳ್

ಬೆರಸು ತಾನೆ ಬಂದು ಇರ್ದಾಗಳ್, ಉಪಚಯಮಪ್ಪ ಬಿಲ್ಲೊವಜನ ಅಂಬಿನ ಬೆಳ್ಸರಿ, ದ್ರುಪದ ಬಲಾಂಬು ರಾಶಿಯನ್ ಅಗುರ್ವಿಪ ಪರ್ವಿಪ ಬಾಡಬಾಗ್ನಿಯಾಯ್ತು. ಆದಮ್ ರಥದ್ವಿಪಘಟೆ ಎಂಬಿವು ಅಂಬಿನೊಳೆ ಪೂಳ್ದು ಪಡಲ್ವಡೆ, ಕುಂಭ ಸಂಭವನ್ ಆ ತ್ರಿಪುರಮನ್ ಎಚ್ಚ ರುದ್ರನ ನೆಗಳ್ತೆಯುಮನ್ ಗೆಲೆ ತಿಣ್ಣಮ್ ಎಚ್ಚನ್. ಅಂತು ತನ್ನ ಬಲಮೆಲ್ಲಮನ್ ಜವನಂತೆ ಒಕ್ಕಲಿಕ್ಕಿ ಕೊಲ್ವ ಕಳಶಕೇತನನನ್ ಯಜ್ಞಸೇನನ್ ಏನುಮ್ ಮಾಣದೆ, ಆತನ ಮೇಲೆ ಬಟ್ಟೆನಂಬಿನ ಬೆಳ್ಸರಿಯುಮನ್, ಕೆಲ್ಲಂಬಿನ ತಂದಲುಮನ್, ಪಾರೆಯಂಬಿನ ಸೋನೆಯುಮನ್ ಸುರಿಯೆ, ಕಳಶಯೋನಿ ಮುಳಿದು ಪದಿನೆಂಟು ಅಂಬಿನೊಳ್ ಎಚ್ಚೊಡೆ, ಪದಿನೆಂಟು ಅಸ್ತ್ರಂಗಳಿಮ್ ಎಚ್ಚು ಸೀಳ್ದು, ಗುರು ಕೋಪದಿನ್ ಎಂಬತ್ತು ಸರಂಗಳಿನ್ ಭರಂಗೆಯ್ದು ಎಚ್ಚೊಡೆ, ಎಂಬತ್ತು ಬಾಣದಿನ್ ಕಡಿದು, ಉಗ್ರ ಸೂತ ಹಯ ಸಂಘಾತಂಗಳನ್ ತಿಣ್ಣಮ್ ಎಚ್ಚು...)

**ದ್ರುಪದ:** ಇದಿರೊಳ್ ನಿಲ್ಲದಿರ್. ಓಡು ಸತ್ತೆ.

(ಎನುತುಮ್ ಪಾಂಚಾಳರಾಜಾಧಿಪನ್ ಮೆಯ್ ಪೆರ್ಚಿ ಪೆರ್ಚಿದ ಉಮ್ಮಚ್ಚರದೊಳ್ ಅಚ್ಚರಿಯಾಗೆ ಎಚ್ಚೊಡೆ ಪುಣ್ಣೂರ್ತು...)

**ದ್ರೋಣ:** (ತನ್ನ ಮನದಲ್ಲಿ)

ಮುನ್ನೆ ಎನ್ನೊಳೆ ಮಚ್ಚರಿಪನೇ. ಒಡನೆ ಓದಿದೆನ್ ಎಂಬ ಮೇಳದಿನ್ ಎನ್ನನೆ ಮೆಚ್ಚನ್. ಎನ್ನೊಳ್ ಇವನ್ ಸಮನೆ ಎಚ್ಚಪನ್ ಅಕ್ಕುಮ್. ಆದೊಡಮ್ ಏನ್ ಇನ್ ಇವನನ್ ಪಡಲ್ವಡಿಪೆನ್.

(ಎಂದಿರದೆ, ಆಗಳೆ ಭಾರ್ಗವಾಸ್ತ್ರದಿಂದಮ್ ಆ ದ್ರುಪದರಾಜ ಶಿರೋಂಬುಜಮನ್ ಘಟೋದ್ಭವನ್ ನೆಱೆದು ಎಚ್ಚನ್. ಅಂತು ದ್ರುಪದನ ಅಳಿವನ್ ಕಂಡು, ಆತನ ತಮ್ಮಂದಿರಪ್ಪ ಶತಾನೀಕ ಶತಚಂದ್ರರ್ ಮೊದಲಾಗೆ ಪನ್ನೊರ್ವರುಮ್, ಅಯ್ವರ್ ಕೈಕಯರುಮ್, ಕುಂತಿಯ ಮಾವನಪ್ಪ ಕುಂತಿಭೋಜನುಮ್ ಬೆರಸು ಪದಿನಾಲ್ಸಾಸಿರ ರಥಮ್ ಬೆರಸು ತಾಗಿದೊಡೆ, ಶಕಟಂಗಳ್ ಪದಿನೆಂಟು ಕೋಟಿವರೆಗಮ್ ತೀವಿರ್ದ ಅನೇಕ ಉಗ್ರಸಾಯಕದಿಂದಮ್ ಚತುರಂಗ ಸಾಧನದ ಮೆಯ್

ಮೆಯ್ಯೊಳ್ ಜಿಗಿಲ್ತು ಆಂತ ನಾಯಕರನ್ ಸುಂಟಗೆಯಾಱಿದಂತೆ ಜೋಲ್ವನ್ನೆಗಮ್ ರಥದೊಳ್ ಕೋದು ಕುಂಭೋದ್ಭವನ್ ಮೆಯ್ವೆರ್ಚಿ ಚಾಪಕಳಾಕೌಶಳಮನ್ ಜಗಕ್ಕೆ ಮೆಱೆದನ್. ಅಂತು ದ್ರುಪದ, ದ್ರುಪದಾನುಜ, ವಿರಾಟ, ವಿರಾಟಾನುಜ, ಕೈಕಯ, ಕುಂತಿಭೋಜಾದಿಗಳಪ್ಪ ನಾಯಕರ್ ಎಲ್ಲರುಮನ್ ಪೇಳೆ ಪೆಸರಿಲ್ಲದಂತೆ ಕೊಂದು, ಮುಂದೆ ಆಂಪರ್ ಆರುಮ್ ಇಲ್ಲದೆ, ಇಕ್ಕಿ ಗೆಲ್ದ ಮಲ್ಲನಿರ್ದಂತೆ ಇರ್ದಾಗಳ್, ಸಕಲ ಅರಾತಿ ನರೇಂದ್ರ ಮೌಳಿಗಳ್ ಉರುಳ್ದು, ಆದೀಪ್ತ ರತ್ನಾಂಶು ಮಾಳಿಕೆಯಿಂದೆ ಆ ರಣರಂಗಮನ್ ಬೆಳಗೆ, ಕಾಳ್ಕಿರ್ಚು ಎಂದು ಭೂತಾಂಗನಾ ನಿಕರಮ್ ಶೋಣಿತವಾರಿಯನ್ ಕುಡಿದು, ಅಗುರ್ವಪ್ಪನ್ನೆಗಮ್ ಸೂಸೆ, ನೋಡ ಆ ದ್ರೋಣನಿನ್ ಕೊಳ್ಗುಳಮ್ ಕೂಡೆ ಸಂಜೆಗವಿದಂತೆ ಕವಿಲ್ತು ಇರ್ದುದು.

ಆಗಳ್ ಯುಧಿಷ್ಠಿರನ್ ನಾರಾಯಣನ್ ಪೇಳ್ದ ಕಪಟ ಉಪದೇಶದಿನ್ ದ್ರೋಣನನ್ ಕೆಯ್ಗೆ ಮಾಡಲೆಂದು ಪಾಂಡ್ಯ ಗಜಘಟೆಗಳನ್ ಇದಿರೊಳ್ ತಂದು ಒಡ್ಡಿದಾಗಳ್, ನಿಶಿತ ವಿಶಿಖಂಗಳ್ ಒಂದೊಂದು ಅಶನಿಯೆ ಗಿರಿಕುಳಮನ್ ಅಲಱುವಂತೆ ಮದೇಭ ಪ್ರಸರ ಸಹಸ್ರಮ್ ಕೆಡೆದುವು. ದ್ರೋಣನಿದಿರ್ಗೆ ವಿಸಸನದೊಳ್ ಮಾರ್ವಲಮ್ ಒಳವೇ. ಅಂತು ತನಗೆ ಮಾಱಾಂತ ಮದಾಂಧಸಿಂಧುರಂಗಳನ್, ಸಿಂಧುರಾರಾತಿಯೆ ಕೊಲ್ವಂತೆ ಕೊಲೆ, ನಾಮದಿನ್ ಅಶ್ವತ್ಥಾಮನ್ ಒಂದು ಸಾಮಜನ್ ಅಲ್ಲಿ ಅಳಿದೊಡೆ ನೃಪನ್ ಕಂಡು..)

**ಧರ್ಮರಾಯ:** ಹತೋಶ್ವತ್ಥಾಮಾ..

(ಎನೆ, ಒವಜನ್ ಒರ್ವೆಸರ ಇಭಮನ್ ಅಶ್ವತ್ಥಾಮನೆ ಗೆತ್ತು ಒಣರ್ದನ್. ಒಗೆದ ಸುತಶೋಕದಿಂದೆ, ಆವಗೆಯಂತೆ ಒಳಗು ಉರಿಯೆ, ಭೋಂಕನೆ ಎರ್ದೆ ತೆಱೆಯಲ್...)

**ದ್ರೋಣ:** ಹಾ ಮಗನೆ...

(ಎಂದು ಅಶ್ರುಜಲಾರ್ದ್ರಗಂಡನ್. ಆ ಗಂಡಿನೊಡನೆ ಬಿಲ್ಲನ್ ಬಿಸುಟನ್. ಅಂತು ಬಿಸುಟು ವಿಚ್ಛಿನ್ನ ವೀರರಸನುಮ್, ಉತ್ಪನ್ನ

ಶೋಕರಸನುಮಾಗಿ ನಿಜವರೂಥಮನ್ ಧರ್ಮಪುತ್ರನ ಸಮೀಪಕ್ಕೆ ಉಯ್ದು ಮಗನ ಮಾತನ್ ಬೆಸಗೊಳೆ...)

**ಧರ್ಮರಾಯ:** ಕುಂಜರಮ್ ಮಡಿದುದು.

(ಎಂದು ಮಹೀಭುಜನ್ ಉಳ್ಳ ಮಾಳ್ಕೆಯಿನ್ ಪುಸಿಯದೆ ಪೇಳ್ದೊಡಮ್, ಕಿಱಿದು ನಂಬದೆಯುಮ್...)

**ದ್ರೋಣ:** ರಣದಲ್ಲಿ ಮುನ್ನೆ ಬಿಲ್ ಬಿಸುಟೆನ್. ಇನ್ ಇದನ್ ಇದೆಂತು ಪಿಡಿವೆನ್, ಪೇಳ್.

(ಎಂದು ಇರದೆ ಆತ್ಮಯೋಗಿ ಬಿಲ್ಲೊವಜನ್ ರಣಾಗ್ರದೊಳ್ ಉದಾತ್ತ ಯೋಗದೊಳೆ ತನ್ನ ಅಸುವನ್ ಕಳೆದನ್. ಅಂತು ಭಾವಿತಾತ್ಮನ್ ಅಧ್ಯಾತ್ಮವಿಶಾರದನಾಗಿ ಪರಮಾತ್ಮನೊಳ್ ಕೂಡಿದನ್. ಆಗಳ್ **"ಪೆಣನನ್ ಇಱಿದು ಪಗೆಗೊಂಡರ್"** ಎಂಬ ನಾಣ್ನುಡಿಯನ್ ನನ್ನಿ ಮಾಡಿ, ತಮ್ಮಯ್ಯನ್ ಸತ್ತ ಮುಳಿಸಿನೊಳ್ ಕಣ್ಗಾಣದೆ ಧೃಷ್ಟದ್ಯುಮ್ನನ್ ಧರ್ಮತನೂಜನ್ ಬಾರಿಸೆ ವಾರಿಸೆ, ಕರವಾಳನ್ ಘರವಟ್ಟಿಸಿ, ಶಿರೋಜಮನ್ ಪಿಡಿದು ತೆಗೆದು, ಗುರುವನ್ ಪಚ್ಚಂತಿರೆ ಪಿರಿದು ಪೊಯ್ದನ್.

ಎಂತಪ್ಪರೊಳಮ್ ಮುಳಿಸು ಅಱಿವನ್ ಆಗಲ್ ಇತ್ತಪುದೇ ಏನ್. ಅಂತು ದ್ರೋಣನ್ ಏಣಗೋಣ ಸಾವನ್ ಸಾವುದುಮ್, ಭೋರ್ಗರೆದು ಆರ್ದ ಪಾಂಡವ ಪತಾಕಿನಿಯುಮನ್, ಒಂದು ತಲೆಯಾಗೋಡುವ ಕೌರವಧ್ವಜಿನಿಯುಮನ್ ಬೇರೊಂದು ಮೊನೆಯೊಳ್ ಕಾದುತಿರ್ದ ಅಶ್ವತ್ಥಾಮನ್ ಕಂಡು ಮುಟ್ಟೆವರ್ಪನ್ನೆಗಮ್, ಶೋಣಾಶ್ವೋಪಲಕ್ಷಿತ ನಿಜಪಿತೃ ಸೂತಕೇತನ ಕಥತಮಾಗಿರ್ದ ರಥಮನ್ ಉಪಲಕ್ಷಿಸಿ ನೋಡಿ, ತಮ್ಮಯ್ಯನ್ ಅತೀತನ್ ಆದುದನ್ ಅಱಿದು, ಒಱೆತು ಉಗುತರ್ಪ ಕಣ್ಬನಿಗಳನ್ ಬರಲ್ ಈಯದೆ, ಕೋಪಪಾವಕನ್ ಕನಲ್ದು ರೋಷದಿನ್...)

**ಅಶ್ವತ್ಥಾಮ:** ಅಪಾಂಡವಮ್ ಆಗಿರೆ ಮಾಡದಂದು ಬಿಲ್ಲೆಱೆಯನ ಪುತ್ರನಲ್ಲೆನ್.

(ಎನುತಮ್ ಗುರುಪುತ್ರನ್ ಇದಿರ್ಚೆ, ಪಾಂಡವ ಸೈನ್ಯ ಸಾಗರಮ್ ಭೀತಿಯಿನ್ ಮಱುಗಿ, ತೆರಳ್ದು, ತೂಳ್ದಿ, ಸುಳಿಗೊಂಡುದು. ಆಗಳ್

ಉರಿಯ ಉರುಳಿಯಂತಪ್ಪ ತನ್ನ ನೊಸಲ ಕಣ್ಣನ್ ತೋಱಿ, ತನ್ನ ಸಾಹಸಮನ್ ತೋಱಲೆಂದು ನಾರಾಯಣಾಸ್ತ್ರಮನ್ ತೊಟ್ಟು ಎಚ್ಚಾಗಳ್ ದೆಸೆ ಮಸುಳ್ದತ್ತು. ವಾರ್ಧಿ ತಳರ್ದತ್ತು. ನೆಲನ್ ಪಿಡುಗಿತ್ತು. ತೊಟ್ಟನೆ ಆಗಸಮ್ ಒಡೆದತ್ತು. ಅಜಾಂಡಮ್ ಅಳಱಿತ್ತು ಎನುತಿರ್ದ ಎಡೆಯಲ್ಲಿ, ಲೋಕಮನ್ ಬಸಿಱೊಳಗಿಟ್ಟು, ಆರ ಅಳವು ಒಡ್ಡಿಸೆ ಕಾದ ಅಳವಮ್ ಮುರಾಂತಕನ್ ಅರ್ವಿಸೆ ತೆಗೆದು ಎಚ್ಚ ವೈಷ್ಣವಮನ್ ವೈಷ್ಣವದಿನ್ ಒಡ್ಡಿಸಿ, ಆಗಳ್ ಕಾದನ್. ಅಂತು ಅಶ್ವತ್ಥಾಮನ್ ಎಚ್ಚ ನಾರಾಯಣಾಸ್ತ್ರಮನ್ ನಾರಾಯಣನ್ ಉಪಾಯದೊಳೆ ಗೆಲ್ದನ್.

ಅನ್ನೆಗಮ್ **"ಎರಡುಮ್ ಪತಾಕಿನಿಗಳ್ ಕವಿದು ಆಗಡುಮ್ ಎನ್ನನೆ ಸಕ್ಕಿಮಾಡಿ ಕಾದುವುದಱಿಮ್, ಅಲ್ಲಿ ಸತ್ತ ಅರಸು ಮಕ್ಕಳ ಪಾಪಮ್ ಇದೆಲ್ಲಮ್ ಎನ್ನನ್ ಎಯ್ದುವುದು. ಅದನ್ ಉಪವಾಸದಿನ್ ಜಪದಿನ್ ಓಡಿಸಿ ಶುದ್ಧನಪ್ಪೆನ್"** ಎಂಬವೊಲ್ ನಳಿನೀವರ ಜೀವಿತೇಶ್ವರನ್ ಅಪರಾಂಬುರಾಶಿಗೆ ಇಳಿದನ್. ಅಂತು ಎರಡುಮ್ ಪಡೆಗಳ್ ಒಂದಿರುಳಮ್ ಎರಡುಮ್ ಪಗಲುಮ್ ಓರಂತೆ ಕಾದಿ ಚಳಿತು ಅಪಹಾರ ತೂರ್ಯಂಗಳನ್ ಬಾಜಿಸೆ, ತಂತಮ್ಮ ಬೀಡುಗಳ್ಗೆ ಪೋದರ್.



# ೮೫ ಅಶ್ವತ್ಥಾಮನ ಅಳಲು ಮತ್ತು ಆಕ್ರೋಶ

(೩೪ ನೆಯ ಪದ್ಯದಿಂದ ೪೬ ನೆಯ ಗದ್ಯ)

## ಪಾತ್ರಗಳು

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಅಶ್ವತ್ಥಾಮ:** ದ್ರೋಣಾಚಾರ್ಯ ಮತ್ತು ಕೃಪೆಯ ಮಗ.

**ಕೃಪ :** ಕೌರವರ ಮತ್ತು ಪಾಂಡವರ ವಿದ್ಯಾಗುರು. ಈತನಿಗೆ ಶಾರದ್ವತ ಎಂಬ ಮತ್ತೊಂದು ಹೆಸರಿತ್ತು.

**ಕರ್ಣ:** ಅಂಗರಾಜ್ಯದ ಒಡೆಯ.

# ಅಶ್ವತ್ಥಾಮನ ಅಳಲು ಮತ್ತು ಆಕ್ರೋಶ

ಗುರುವಿನ ಶೋಕದಿಂದೆ ರಥಮಧ್ಯದೊಳ್ ಒಯ್ಯನೆ ಜೋಲ್ದು ಬಿಳ್ದನನ್ ಗುರುಸುತನನ್ ಕೃಪನ್ ಕೃಪೆಯಿನ್ ಆತ್ಮವಿಕಾಸದೊಳ್ ಆಱಿಸುತ್ತುಮ್ ಅಂತಿರೆ, ಗುರುಶೋಕಮ್ ಅಗ್ಗಳಿಸೆ ತಾಪವಿಯೋಗಮುಮ್ ಅಕ್ಕುಮ್ ಆಗಡುಮ್. ಗುರುವೆನೆ ಪೇಳಿಮ್, ಆ ಗುರುವಿಯೋಗಭರಮ್ ಗುರುವಾಗದಿರ್ಕುಮೇ. ಅನ್ನೆಗಮ್ ಪನ್ನಗಕೇತನನ್ ಶೋಕಮನ್ ಆಱಿಸಲೆಂದು ಕರ್ಣ ಶಲ್ಯ ಸೌಬಲ ಸಮೇತನ್ ಬಂದು ಅಶ್ವತ್ಥಾಮನನ್ ಇಂತು ಎಂದನ್.

**ದುರ್ಯೋಧನ:** ಪುದಿದ ಔರ್ವಾನಳನ್ ಅಬ್ಧಿಯನ್ ಸುಡುವವೊಲ್ ಶಸ್ತ್ರಾಗ್ನಿಯಿನ್ ತೀವ್ರಕೋಪದಿನ್ ಉದ್ವೃತ್ತ ಬಲಾಬ್ಧಿಯನ್ ಸುಡೆ, ಕರಮ್ ಬೆಂಬಿಳ್ದು, ದುರ್ಯುಕ್ತಿಯಿಂದೆ ಅದಯಮ್ ಧರ್ಮಜನ್ ಗುರುವನ್ ಇಕ್ಕಿದನ್. ಇನ್ ನೀನ್ ಆತನನ್ ಬೇಗಮ್ ಇಕ್ಕದೆ ಕಣ್ಣೀರ್ಗಳನ್ ಇಕ್ಕೆ, ಚಂದ್ರಧವಳಮ್ ನಿನ್ನ ಅನ್ವಯಮ್ ಮಾಸದೇ. ಎನಗೆ ಕೂರ್ಪುದನ್ ಆ ಘಟಸಂಭವನ್ ನಿನಗೆ ಕೂರನ್. ಅಳಲ್ ನಿನತಲ್ತು. ಕೇಳ್, ಎನತುಮ್. ಆಱದ ಶೋಕಮನ್ ಇರ್ವೆಮುಮ್ ಮುನಿವರನ್ ತವೆ ಕೊಂದು ಒಡನೀಗುವಮ್.

(ಎಂಬುದುಮ್ ಅಶ್ವತ್ಥಮನ್ ಇಂತು ಎಂದನ್.)

**ಅಶ್ವತ್ಥಾಮ:** ಅಹಿಕೇತನಾ, ಗುರು ಮದೀಯ ವಿಮೋಹದಿನ್, ಜವನ್ ಕೃಪೆಯಿಮ್ ಬಿಸುಟಂತೆ ಕೊಕ್ಕರಿಸಿ ಬಿಲ್ ಬಿಸುಟಿರ್ದೊಡೆ, ಆ ಪದದೊಳ್ ದ್ರುಪದಾತ್ಮಜನ್ ಗುರುವ ಕೇಶಕಲಾಪಮನ್ ತೆಗೆದನ್ ಗಡ... ತೆ... ಗಂಡನುಮಾದನ್. ಈ ಪರಾಭವಕ್ಕೆ ಅನುರೂಪನ್ ಪೆಱತೊಂದುಮ್ ಇಲ್ಲ. ಭಾರ್ಗವನ್

ತಂದೆಯ ಅಳಿವಿಂಗೆ, ರಾಯ ಎಂಬ ಈ ಪೆಸರಿಲ್ಲದಂತು ಮುಯ್ಯೇಳು ಸೂಳ್ ಕಟ್ಟಾಯಮ್ ಪೊಂಪುಳಿವೋಗೆ ಎಂತು ಕೊಂದನ್, ಅಂತು ಈ ಎಮ್ಮಯ್ಯನಿನ್ ಆದುದು ಒಂದು ಪಗೆಯಿನ್ ಉಗ್ರಪಾಂಚಾಳ ರಾಜಾಯುಃ ಪಾರಮನ್ ಸೀಳ್ದು, ಅನ್ಯಭೂಪಬಲಮನ್ ಪರ್ದಿಂಗೆ ಬಿರ್ದಿಕ್ಕುವೆನ್. ಪಗೆಯ ಅಂದಮುಮ್ ಆ ರಾಮರ ಪಗೆಯೊಳ್ ಸಮಮ್. ಅವರ ಪಿಡಿವ ಬಿಲ್, ಎಮ್ಮ ಬಿಲ್. ಅಂಬುಗಳುಮ್ ಅವರ್ ಇತ್ತ ನಲ್ಲಂಬುಗಳ್ ಎನೆ, ಬಳಿಗಾಯದಂತು ಚಲಮನೆ ಕಾವೆನ್.

(ಎಂಬುದುಮ್, ತನ್ನ ಅಳಿಯನ ನುಡಿಗೆ ಶಾರದ್ವತನ್ ಸಂತೋಷಂಬಟ್ಟು ಕೌರವೇಶ್ವರನನ್ ಇಂತು ಎಂದನ್.)

**ಶಾರದ್ವತ/ಕೃಪ:** ನೀನ್ ಈತಂಗೆ ವೀರವಟ್ಟಮನ್ ಕಟ್ಟಿ, ರಿಪು ನೃಪಬಲಕ್ಕೆ ತೋಱಿ ಬಿಡುವುದು.

(ಎನೆ)

**ದುರ್ಯೋಧನ:** **'ಕಳಶಜನಿನ್ ಬಳಿಕ್ಕೆ ಕರ್ಣಂಗೆ ಎಂದು ನುಡಿದ ಬೀರವಟ್ಟಮನ್'** ಎಂತು ಕಟ್ಟುವೆನ್.

(ಎಂದೊಡೆ, ಅಶ್ವತ್ಥಾಮನ್ ಇಂತು ಎಂದನ್.)

**ಅಶ್ವತ್ಥಾಮ:** ಭೂಪರ್ ಎಂಬರ್ ನಿಜದೊಳೆ ಅವಿವೇಕಿಗಳ್ ಅಪ್ಪರ್. ಅದು ಅಕ್ಕೆ. ಫಣಿಧ್ವಜ, ನೀನ್ ಕಡುಕೆಯ್ದು ಕರ್ಣನನೆ ನಚ್ಚುವೆಯಪ್ಪೊಡೆ, ಯುದ್ಧದೊಳ್ ವೃಷಧ್ವಜನುಮನ್ ಇಕ್ಕಿ ಗೆಲ್ದ ಅರಿಗನೊಳ್ ತಲೆಮಟ್ಟು ಇದಿರಾಗಿ ನಿಂದು, ಸೂತಜನ್ ಇಱಿವನ್ ಗಡಮ್. ಪಟ್ಟಮೇ ಪಾಱಿ ಪಗೆಯನ್ ತಿಂಬುದೇ... ಏನ್ ಗಳ.

(ಎಂಬುದುಮ್ ಅಂಗರಾಜನ್ ಗುರುತನೂಜನನ್ ಇಂತು ಎಂದನ್.)

**ಕರ್ಣ:** ಎನಿತು ಅಳವು ಉಳ್ಳೊಡಮ್, ದ್ವಿಜನ ಗಂಡಗುಣಕ್ಕೆ ಅಗಿವನ್ನರ್ ಆರೊ. ವಿಷಮ್ ಒಳ್ಳೆಗೆ ಉಳ್ಳೊಡಮ್, ಅದು ನೆಟ್ಟನೆ ಒಳ್ಳೆಯೆ. ಕಾಳಿಯ ನಾಗನ್ ಆಗದು. ಅಣ್ಮಿನ ಪಡೆಮಾತು ಅದೊಂದೆ ನೆವಮಾಗಿರೆ, ಕೆಯ್ದುವನ್ ಇಕ್ಕಿ... ಸತ್ತ ಸಾವಿನ ಪಡಿಚಂದ ಮಾಗಿಯುಮ್, ಗಂಡವಾತುಗಳ್ ಇದೇನ್ ನಿಮಗೆ ಅಳ್ತಿಯೊ..

(ಎಂಬುದುಮ್)

**ಅಶ್ವತ್ಥಾಮ:** ತ್ರೈಲೋಕ್ಯ ಧರ್ನುರ್ಧರನಪ್ಪ ಎಮ್ಮಯ್ಯನ ಗಂಡವಾತನ್ , ಈ ಮೀಂಗುಲಿಗನ್ ಮೆಚ್ಚನ್. ಇವನನ್ ಮುನ್ ಕೊಂದು ಬಳಿಯಮ್ ಪಾಂಡವರನ್ ಕೊಲ್ವೆನ್.

(ಎಂದು ಬಾಳನ್ ಕಿಳ್ತು, ಕರ್ಣನ ಮೇಲೆ ಪಾಯ್ವುದುಮ್, ಕೃಪನ್ ಎಡೆವೊಕ್ಕು...)

**ಕೃಪ:** ಇದು ಆಗದು.

(ಎಂದು ಬಾರಿಸಿ)

ಈ ನಮ್ಮ ಸೈನ್ಯಮ್ ಅಸದಳಮಾಗಿಯುಮ್, ಇಂತು ಒರ್ವರ್ ಒರ್ವರೊಳ್ ಸೆಣಸಿ ಬಳವ್ಯಸನದೊಳೆ ಕೆಟ್ಟುದು. ಅಲ್ಲದೊಡೆ ಸುಯೋಧನ, ನಿನಗೆ ಮಲೆವ ಮಾರ್ವಲಮ್ ಒಳವೇ.

(ಎಂಬುದುಮ್, ಅಶ್ವತ್ಥಾಮನ್ ಕರ್ಣನೊಳಾದ ಮುಳಿಸನ್ ಅವಧಾರಿಸಲಾಜಿದೆ ಸುಯೋಧನನನ್ ಇಂತು ಎಂದನ್...)

**ಅಶ್ವತ್ಥಾಮ:** ಆನ್ ಇರೆ, ನೀನ್ ಈ ಸೂತಸುತಂಗೆ ಎಡೆಗೊಂಡು ಕೈವಾರದಿಂದೆ ಬೀರವಟ್ಟಮನ್ ಒಸೆದು ಇತ್ತೊಡಮ್ ಏನಾಯ್ತು... ಈ ಖಳನ್ ಧನಂಜಯ ಕ್ರೂರ ಬಾಣಗಣಾವಳಿಯಿಂದೆ ಅಳ್ಕಾಡಿದೊಡಲ್ಲದೆ, ಆನ್ ವೈರಿಸಂಹಾರಕಾರಣ ಚಾಪಮನ್ ಪಿಡಿಯೆನ್ ಗಡಾ.

(ಎಂಬುದುಮ್, ಮುಳಿಸುವೆರಸಿದ ಮುಗುಳ್ನೆಯಿನ್ ಕರ್ಣನ್ ಇಂತು ಎಂದನ್.)

**ಕರ್ಣ:** ಭುವನಂಗಳ್ ಪದಿನಾಲ್ಕುಮನ್ ನಡುಗಿಸಲ್ ಸಾಮರ್ಥ್ಯಮುಳ್ಳ ಎನ್ನ ಕೆಯ್ದುವಿನೊಳ್ ತೀರದುದು, ಆವ ಕೆಯ್ದುವಿನೊಳಮ್ ತೀರ್ದಪುದೇ. ನಿನ್ನ ಕೆಯ್ದುವನ್ ಎಂತುಮ್ ಬಿಸುಟಿರ್ದ ಲೆಕ್ಕಮೆ ವಲಮ್. ನಿಷ್ಕಾರಣಮ್ ಕೆಯ್ದುವಿಕ್ಕುವ, ಕಣ್ಣೀರ್ಗಳನ್ ಇಕ್ಕುವ ಈ ಎರಡುಮನ್ ನಿಮ್ಮಯ್ಯನೊಳ್ ಕಲ್ತಿರೇ.

(ಎಂಬುದುಮ್ ಅಶ್ವತ್ಥಾಮನ್ ಕರ್ಣನ ನುಡಿಗೆ ಸಿಗ್ಗಾಗಿ...)

**ಅಶ್ವತ್ಥಾಮ:** ಮುನಿಸನ್ ಮುಂದಿಟ್ಟು ಬಿಲ್ಲನ್ ಬಿಸುಡಲೆ ಮುನ್ನಮ್ ಬಗೆದೆನ್. ಇನ್ ನಿನ್ನನೆ ಪೀನಮ್ ನಚ್ಚಿ ನಿನ್ನಾಳ್ದನ ನುಡಿಯಿಸೆ, ಉರ್ಕಿನಿಮ್ ನೀನ್ ಆಡಿದೈ. ಎನಗೆ ಮಾತನಾಡಲ್ಕೆ ಈ ಸೂಳ್ ಅಲ್ತು. ಇನ್ ಸೇನಾಧಿಪ ಪದವಿಯೊಳ್ ನೀನೆ ನಿಲ್. ನೀನುಮ್ ಆನುಮ್ ದುರ್ಯೋಧನನನ್ ಸಕ್ಕಿಟ್ಟು ಮಾಜಿಸಾಂತ ಅದಟರೊಳ್ ಅಳವನ್ ನಾಳೆ ತೋಱುವಮ್. ನಿನ್ನ ಶರಾಸಾರಂಗಳ್ ಸಾರಂಗಳ್. ಉಳಿದ ಇತರರ ಕೆಯ್ದುಗಳ್ ಎಂತುಮ್ ಅಸಾರಮ್. ಇದಿರ್ಚಿದ ಅರಿನೃಪಧ್ವನಿಗಳೊಳ್ ನಾಮ್ ಸಾರಾಸಾರತೆಯಮ್ ಆರಯ್ವಮ್.

(ಎಂಬುದುಮ್, ದುರ್ಯೋಧನನ್ ಕರ್ಣನುಮನ್ ಅಶ್ವತ್ಥಾಮನುಮನ್...)

**ದುರ್ಯೋಧನ:** ನಿಮ್ಮೊಳಗೆ ನೀಮ್ ಮುಳಿಯಲ್ ಬೇಡ. ನಿಮ್ಮ ಪುರುಷಕಾರಮನೆ ಬಗೆದು ನೆಗಳ್ವುದು. ಆನುಮ್ ಎನ್ನ ಎತ್ತಿಕೊಂಡ ಕಜ್ಜಮನ್ ನೆಗಳ್ದಿಲ್ಲದೆ ಇರೆನ್.

(ಎಂದು ಆ ಎಡೆಯಿನ್ ಎಳ್ದು, ನಾಯಕರನ್ ಬೀಡಿಂಗೆ ಪೋಗಲ್ವೇಳ್ದು, ಅರಮನೆಯನ್ ಪೊಕ್ಕು...)



## ೮೬. ಕರ್ಣನಿಗೆ ಸೇನಾಧಿಪತಿ ಪಟ್ಟ

(೪೬ ನೆಯ ಗದ್ಯದಿಂದ ೫೨ ನೆಯ ಪದ್ಯ)

### ಪಾತ್ರಗಳು

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಕೃಪ:** ಕೌರವರ ಮತ್ತು ಪಾಂಡವರ ವಿದ್ಯಾ ಗುರು.

**ಕರ್ಣ:** ಅಂಗರಾಜ್ಯದ ಒಡೆಯ.

# ಕರ್ಣನಿಗೆ ಸೇನಾಧಿಪತಿ ಪಟ್ಟ

ನಾಯಕರನ್ ಬೀಡಿಂಗೆ ಪೋಗಲ್ ಪೇಳ್ದು, ಅರಮನೆಯನ್ ಪೊಕ್ಕು ಮಜ್ಜನ ಭೋಜನ ತಾಂಬೂಲ ಅನುಲೇಪನಂಗಳಿನ್ ಸಂಗರ ಪರಿಶ್ರಮಮನ್ ಆಱಿಸಿ, ಮಂತ್ರಶಾಲೆಗೆ ವಂದು ಶಲ್ಯ ಶಾರದ್ವತ ಕೃತವರ್ಮ ದುಶ್ಶಾಸನಾದಿಗಳನ್ ಬರಿಸಿ, ಯಥೋಚಿತ ಪ್ರತಿಪತ್ತಿಗಳಿಂದ ಇರಿಸಿ...

**ದುರ್ಯೋಧನ:** ಅಂತರ್ಭೇದದೊಳ್ ಆ ಗಾಂಗೇಯರನ್ ಅಂತು ಛಿದ್ರಿಸಿದರ್. ಈಗಳ್ ಇಂತು ಪುಸಿದು ಈ ಘಟೋದ್ಭವನನ್ ಕೊಂದರ್. ಆ ಕೌಂತೇಯರ ಆಯಕ್ಕೆ ಗೆಂಟು ಎಂತೆಂತು ಅಕ್ಕುಮ್. ಅದನ್ ಮತ್ ಉದ್ಯಮಮೆ ಪೇಳ್ಗೆ. ಆ ವೈರಿಗಳ್ಗೆ ಆನ್ ಎಂತು ಒಲ್ವೆನ್. ಒಳ್ಪನ್ ತಳೆವಂತು ತೇಜಮ್ ಎನಗೆ ಇನ್ ಎಂತಕ್ಕು. ಇನ್ ಪೇಳಿರೇ.

(ಎನೆ ಶಾರದ್ವತನ್ ಇಂತು ಎಂದನ್.)

**ಕೃಪ:** ಚಲಮನೆ ಪೇಳ್ವೊಡೆ, **'ಅಯ್ವರುಮನ್ ಅಯ್ದು ಅಳಿಯೂರೊಳೆ ಬಾಳಿಸು'** ಎಂದು ಮುನ್ ಬಲಿ ಬಲಸೂದನನ್ ನುಡಿಯೆಯುಮ್ ಕುಡದೆ ಇರ್ದುದೆ ಪೇಳ್ಗುಮ್ ಮೆಯ್ಗಲಿತನಮನ್. ಸರಿತ್ಸುತ ಘಟೋದ್ಭವರನ್ ಪೊಣರ್ದು ಇಕ್ಕಿ ಗೆಲ್ದರೊಳ್ ಕಲಹಮೆ ಎಯ್ದೆ ಪೇಳ್ಗುಮ್.

ಕೌರವೇಶ್ವರಾ, ಇನ್ ಪೆಱತು ಪೇಳ್ವಡೆ ಆವುದೊ. ಅದಱಿಂದಮ್ ಇನ್ ಪೆಱತು ಮಂತಣಕ್ಕೆ ಎಡೆಯಿಲ್ಲ. ಮುನ್ನೆ ಚಕ್ಷುಷ್ಮನೆಂಬ ಮನುವಾದ ಕಾಲದೊಳ್, ಧರಾತಳಮನ್ ಒಲ್ಲಣಿಗೆಯನ್ ಪಿಳಿವಂತೆ ತಳಮ್ ಎಯ್ದೆ ಸುರುಳ್ವಿನಮ್ ಮುಯ್ಯೇಳು ಸೂಳ್ ಪಿಳಿದ ಸಾಹಸಮುಮನ್, ಇಂದ್ರಂಗೆ ತನ್ನ ಸಹಜ ಕವಚಮನ್ ತಿದಿಯುಗಿದು ಕೊಟ್ಟ ಚಾಗದ

ಪೆಂಪುಮನ್ ದಿಗ್ವಿಜಯಂಗೆಯ್ದು ಮಿಡಿದನಿತು ಬೇಗದಿನ್ ಜರಾಸಂಧನನ್ ನೆಲಕ್ಕೆ ಇಕ್ಕಿ ಪುಡಿಯೊಳ್ ಪೊರಳ್ಚಿ ಮಲ್ಲಯುದ್ಧದೊಳ್ ಪಿಡಿದು ಅಡಿಗೊತ್ತಿದ ಭುಜಬಲ ಭೀಮನನ್ ಗೆಲ್ದ ಸಾಹಸಮುಮನ್, ನಮ್ಮ ಪಡೆಯೆಲ್ಲಮನ್ ತೊತ್ತಳದುಳಿದು ಕೊಲ್ವ ಘಟೋತ್ಕಚನೆಂಬ ರೂಕ್ಷ ರಾಕ್ಷಸನನ್ ಕೊಂದ ಬೀರಮುಮನ್ ಆಲೋಕಾಂತರಮ್ ನೆಗಳೆ ನೆಗಳ್ದ ಕಲಿತನದ ಚಾಗದ ಬಗೆ ತನ್ನೊಳ್ ನೆಗಳ್ತೆವೆತ್ತು ನೆಗಳ್ದಿರೆ ಸಂದಂಗೆ, ಅಗಣಿತಗುಣಂಗೆ ಕರ್ಣಂಗೆ ಒಗಸುಗಮೇ. ಅರಸಾ, ಬೀರವಟ್ಟಮನ್ ಕಟ್ಟು. ರಥಯಾನ ಪಾತ್ರದಿನ್ ಪರರಥಿನೀ ಜಳನಿಧಿಯ ಪಾರಮನ್ ಸಲ್ವ ಜಗತ್ಪ್ರಥಿತಭುಜ ದರ್ಪದಿಂದೆ ಅತಿರಥಮಥನನ್ ಕರ್ಣನ್ ಕರ್ಣಧಾರನ್ ಅಲ್ಲನೆ.

(ಎಂದು ನುಡಿದ ಕೃಪನ ಮಾತನ್ ನೃಪನ್ ಮನದೆಗೊಂಡು ಕರ್ಣನ ಮೊಗಮನ್ ನೋಡಿ.)

**ದುರ್ಯೋಧನ:** ಅಂಗಮಹೀತಳಾಧಿಪಾ, ನಿನಗೆ ಪಾಂಡವಬಲಮ್ ಉಂತೆ ನಡುಗುವುದು. ಅರ್ಜುನನ್ ಎಂಬನ್ ಉರ್ಕುಡುಗಿ ಸುರುಳ್ವನ್. ಈ ಎಡೆಗೆ ಪೆಱರ್ ಆರ್ ದೊರೆ ಪೇಳ್. ವೀರಪಟ್ಟಮನ್ ತಡೆಯದೆ ಕಟ್ಟಿ, ವೈರಿಗಳ ಪಟ್ಟನೆ ಪಾಱಿಸಿ, ಎನ್ನ ಬೆಳ್ಗೊಡೆಯುಮನ್, ಎನ್ನ ಪಟ್ಟಮುಮನ್, ಎನ್ನುಮನ್ ಕಾವುದು.

(ಎಂಬುದುಮ್)

**ಕರ್ಣ:** ನಿನ್ ಆಳ್ಗಳೊಳ್ ಆನ್ ಆರ ದೊರೆಯನ್. ಎನಗೆ ಕಾರುಣ್ಯಮ್ ಗೆಯ್ವೆಯಾಗಿ ಬೆಸಸಿದೆ. ನಿನ್ನ ದಯೆಗೆಯ್ದ ವೀರವಟ್ಟಮ್ ಎಂಬುದು ಎನಗೆ ಎಣ್ಬೆರಲ ಪಟ್ಟಮ್.

(ಎಂಬುದುಮ್ ಬದ್ದವಣಮ್ ಬಾಜಿಸಿ, ಕರ್ಣನನ್ ಕನಕಪೀಠದೊಳ್ ಕುಳ್ಳಿರಿಸಿ, ಪಱೆಗಳ್ ಭೋರೆಂದು ಓರಂತೆ ಮೊರೆಯೆ, ಮಂಗಳಗೀತಿಗಳ್ ನೆರೆಯೆ, ಗಣಿಕಾನೀಕಮ್ ಬಂದು ಆಡೆ, ಕುರುಪರಿವೃಢನ್ ಪುಣ್ಯಜಲಂಗಳನ್ ತರಿಸಿ ಮಿಸಿಸುತ್ತೆ, ಕರ್ಣಂಗೆ ಆ ವೀರಪಟ್ಟದ ಪಟ್ಟಮನ್ ತಾನ್ ತನ್ನ ಕೈಯೊಳೆ ಕಟ್ಟಿದನ್.) ❖

# ೮೭. ಭೀಷ್ಮರ ಬಳಿಗೆ ಬಂದ ಕರ್ಣ

(೫೩ ನೆಯ ಗದ್ಯದಿಂದ ೫೯ ನೆಯ ಗದ್ಯ)

## ಪಾತ್ರಗಳು

ಭೀಷ್ಮ: ಶಂತನು ಮತ್ತು ಗಂಗಾದೇವಿಯ ಮಗ.

ಕರ್ಣ: ಅಂಗರಾಜ್ಯದ ಒಡೆಯ.

## ಭೀಷ್ಮರ ಬಳಿಗೆ ಬಂದ ಕರ್ಣ

ಸಿಡಿಲ ಬಳಗಮನ್ ಒಳಕೊಂಡಂತೆ ತಳತಳಿಸಿ ಪೊಳೆವ ಕೆಯ್ದುಗಳ್ ತೀವಿದ ವಾರುವದ ಬೋರಗುದುರೆಗಳೊಳ್ ಪೂಡಿದ ಪಸುರ್ವೊನ್ನ ರಥಮನ್ ಏಱಿ, ಮುನ್ನೊರ್ವನೆ ಶರಶಯನದೊಳ್ ಇರ್ದ ಗಾಂಗೇಯನಲ್ಲಿಗೆ ಬಂದು, ರಥದಿಂದಮ್ ಇಳಿದು, ಮೂಱು ಸೂಳ್ ಬಲವಂದು, ತದೀಯ ಪಾದಪದ್ಮಂಗಳನ್ ತಲೆಯೊಳ್ ಇಟ್ಟುಕೊಂಡು...

**ಕರ್ಣ:** ಆನ್ ಮಾತಱಿಯದೆ ಮುಳಿದುಮ್ ನಿಮ್ಮಡಿಯನ್ ನೋಯೆ ನುಡಿದೆನ್. ಉಱಿದೆ ಏಳಿಸಲ್ ಎಮ್ಮಳವೆ ಏನ್ ಅಜ್ಜ. ಆ ಮನದ ಉಮ್ಮಚ್ಚಮನ್ ಮಱೆವುದು. ನಿಮ್ಮನ್ ಎರೆಯಲೆ ಬಂದೆನ್. ಆ ಪಾಂಡುಸುತರನ್ ನಿಮ್ಮಡಿಯುಮ್ ಧುರದೊಳ್ ಗೆಲಲ್ ಅರಿಯರನ್ ಎಮ್ಮಂದಿಗರ್ ಗೆಲ್ವರೆಂಬುದು ಅಚ್ಚರಿಯಲ್ತೆ. ಎಂತುಮ್ ಹರಿಗನೊಳ್ ಇಱಿದು, ಎನ್ನ ಚಲಮನೆ ಮೆಱೆವೆನ್.

(ಎಂಬುದುಮ್, ಕುರುಪಿತಾಮಹನ್ ಅಹರ್ಪತಿಸುತನನ್ ಇಂತು ಎಂದನ್.)

**ಭೀಷ್ಮ:** ನುಡಿವುದನ್ ನೀನ್ ಪತಿಭಕ್ತಿಯ ಪೆಂಪಿಮ್ ನುಡಿದೈ. ಪೆಱತಂದದಿನ್ ನುಡಿದೆಯಲ್ತೆ. ಮದಾಯಮ್ ಅಮೋಘಮ್. ಸೂಳ್ ಪಡೆಯಲ್ಕೆ ಎನಗೆ ಅಕ್ಕುಮ್. ಇನ್ ಎಡೆಯೊಳ್ ಎಂದೆನ್. ಅದು ಎಂದುದು ಅದೇನ್ ತಪ್ಪಾದುದೆ. ನಮ್ಮ ಒವಜರ್ ಜಸಮ್ ಪಡೆದ ಭಾರ್ಗವರ್ ಅಪ್ಪುಱಿಂದಮ್ ನಂಟರುಮ್. ಅಂಗಮಹೀಪತೀ, ಅದಲ್ಲದೆಯುಮ್ ನೀನ್ ಎಮಗೆ ಕುಂತಿಯ ಗಾಂಧಾರಿಯ ಮಕ್ಕಳ ಲೆಕ್ಕದೆ ಮಮ್ಮನೈ. ಕುರುಮಹೀಪತಿ ನಿನ್ನನೆ ನಚ್ಚಿದನ್. ನಿನ್ನ ಶರಾವಳಿಗಳ್ಗೆ ಅರಿಸಾಧನಸಂಪದಮ್ ಮುನ್ನಮ್ ನಡುಗುತ್ತುಮ್ ಇರ್ಪುದು. ಅಂತೆ

ಶಸ್ತ್ರಸಂಪನ್ನನೆ ಆಗಿ, ಶಲ್ಯನನೆ ಸಾರಥಿಯಾಗಿರೆ ಮಾಡಿ, ನೀನ್ ನಿನ್ನಯ ಬಲ್ಲ ಮಾಳ್ಕೆಯೊಳ್ ಕಾದು. ಅಂಗವಲ್ಲಭಾ, ನಿನಗೆ ಇದನ್ ನುಡಿದೆನ್.

**ಕರ್ಣ:** ನೆಗಳ್ದ ಕುಲದ ಚಲದ ಒಳ್ಪಿನ ಭೂಪನನ್ ಎನಗೆ ತೇರನ್ ಎಸಗು ಎಂದೊಡೆ ಸದ್ವಿನಯಮ್ ಉಳಿದು ಉರ್ಕಿ, ಕುಲಹೀನನೆಂಬ ಪರಿವಾದಮ್ ಈಗಳ್ ಎನಗೆ ಆಗಿರದೇ. ಆಯದ ಕಟ್ಟಾಳ್ ನೀಮ್ ಈ ಯುಗದೊಳ್ ಮೊದಲ್, ಪೆಱರುಮ್ ಒಳರೆ. ಧಾತ್ರನಿಮ್ ಸಾವಕ್ಕೆ ಜಯಶ್ರೀಯಕ್ಕೆ ಕಟ್ಟಾಯದ ಬಳಿಸಂದು ಆನ್ ನಿಮ್ಮನ್ ಮೆಚ್ಚಿಸುವೆನ್.

(ಎಂಬುದುಮ್ ಸಿಂಧುತನುಜನ್ ಅಂಗಾಧಿರಾಜನ ನಯದ ವಿನಯದ ಪಾಳಿಯ ಪಸುಗೆಯ ನುಡಿಗಳ್ಗೆ ಮನದೆಗೊಂಡು...)

**ಭೀಷ್ಮ:** (ತನ್ನ ಮನದಲ್ಲಿ)

ಈತನ್ ಕುಲಹೀನನಲ್ಲನ್. ಉಭಯಕುಲ ಶುದ್ಧನಾಗಲೆವೇಳ್ಕುಮ್.

(ಎಂದು ನಿಶ್ಚೈಸಿ...)

**ಭೀಷ್ಮ:** ನೀನ್ ಎಮಗೆ ಇಂಬು ಕೆಯ್ವೊಡಮ್, ಸುಯೋಧನನ ರಾಜ್ಯಮನ್ ಒಲ್ವೊಡಮ್ ಶಲ್ಯನನೆ ಸಾರಥಿ ಮಾಡಿ ಕಾದುವುದು.

(ಎಂದು ಪರಸಿ)

**ಭೀಷ್ಮ:** ಪೋಗು.

(ಎಂಬುದುಮ್)

**ಕರ್ಣ:** ಮಹಾ ಪ್ರಸಾದಮ್.

(ಎಂದು ಪೊಡೆವಟ್ಟು ಸಂಗ್ರಾಮ ಭೂಮಿಗೆ ವಂದು, ಹಸ್ತ್ಯಶ್ವರಥ, ಪದಾತಿಬಲಂಗಳನ್ ಒಂದು ಮಾಡಿ ಮಕರವ್ಯೂಹಮನ್ ಒಡ್ಡಿದನ್.)



# ೮೮. ಶಲ್ಯನನ್ನು ಕರ್ಣನ ಸಾರಥಿಯಾಗಲು ಒಪ್ಪಿಸಿದ್ದು

(೮೮ ನೆಯ ಗದ್ಯದಿಂದ ೧೦೨ ನೆಯ ಗದ್ಯ)

**ಪಾತ್ರಗಳು**

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಶಲ್ಯ:** ಮದ್ರ ದೇಶದ ರಾಜ. ಮಾದ್ರಿಯ ಸೋದರ. ಪಾಂಡವರ ಮತ್ತು ಕೌರವರ ಸೋದರ ಮಾವ.

**ಕರ್ಣ:** ಅಂಗರಾಜ್ಯದ ಒಡೆಯ.

## ಶಲ್ಯನನ್ನು ಕರ್ಣನ ಸಾರಥಿಯಾಗಲು ಒಪ್ಪಿಸಿದ್ದು

ರಾಜರಾಜನಲ್ಲಿಗೆ ಅಂಗರಾಜನ್ ಬಂದು, ಹಯೋಪಾಯಕುಶಲರಪ್ಪ ಗಾಂಗೇಯರ್ ಅಱುಪಿದ ಮಾತನ್ ಏಕಾಂತದೊಳ್ ಅಱುಪುವುದುಮ್...

**ದುರ್ಯೋಧನ:** ತ್ರಿಣೇತ್ರನೊಳ್ ಕಲ್ತ ಅಶ್ವಹೃದಯದೊಳಮ್, ರಥಕಲ್ಪದೊಳಮ್ ಶಲ್ಯನ್ ಮುರಾಂತಕಂಗಮ್ ಪ್ರವೀಣನ್ ಅಪ್ಪುದಱಿಂದ, ಆತನನ್ ಎಂತಾನುಮ್ ಒಡಂಬಡೆ ನುಡಿದು ನಿನಗೆ ಸಾರಥಿ ಮಾಡುವೆನ್.

(ಎಂದು ದಿನಕರತನೂಜನನ್ ಬೀಡಿಂಗೆ ಪೋಗಲ್ ಪೇಳ್ದು, ಪೊನ್ನ ಪಣ್ಣುಗೆಯ ಪಿಡಿಯನ್ ಏಱಿ, ದಿನಕರನ ಬಳಿದಪ್ಪಿದ ಕಿರಣಂಗಳ್ ಕಳ್ತಲೆಯನ್ ಕಂಡಳ್ಕಿ ತನ್ನ ಮಱೆಯನ್ ಪೊಕ್ಕಂತೆ ಕೆಯ್ ದೀವಿಗೆಗಳ್ ಬೆಳಗೆ, ಕಿಱಿದಾನುಮು ಮಾನಸರ್ ಬೆರಸು ರಾಜರಾಜನ್ ಮದ್ರರಾಜನ ಮನೆಗೆ ಬರ್ಪುದುಮ್, ಆತನ್ ಅತ್ಯಂತ ಸಂಭ್ರಮಾಕ್ರಾಂತ ಹೃದಯನಾಗಿ ಬೇಗಮ್ ಇದಿರೇಳೆ...)

**ದುರ್ಯೋಧನ:** ಅಂತೆ ಕುಳ್ಳಿರಿರಪ್ಪೊಡೆ ಇನ್ ನಿಮಗೆ ಆಣೆ.

(ಎಂದು ಇರವೇಳ್ದು, ಇಳಾಕಾಂತನುಮ್ ತೊಡೆಸೋಂಕಿ ಕುಳ್ಳಿರೆ...)

**ಶಲ್ಯ:** ಬಾಳ್ತೆಯುಳ್ಳೊಡೆ ನೀನೆ ಬರ್ಪಂತುಟು ಆದುದೆ. ಪೇಳ, ನೀನ್ ಕೆಮ್ಮನೆ ಬಳಿಯಟ್ಟಲಾಗದೆ. ಇನ್ ಎಂತುಮ್, ಏನ್ ಇಳಾಧಿಪಾ... ಏನ್ ಮನೆವಾಳ್ತೆಯನ್ ಬೆಸಸಲ್ಕೆ ಬಂದೆ. ಬೆಸಸು.

**ದುರ್ಯೋಧನ:** ಆನ್ ನುಡಿಯಲ್ ಶಂಕಿಸಿದಪೆನ್.

**ಶಲ್ಯ:** ಏಕೆ ಶಂಕಿಸುವಯ್. ನೀನ್ ಬೆಸವೇಳ್.

**ದುರ್ಯೋಧನ:** ಮಾವ, ನಿಮ್ಮ ದಯೆಯಿಂದಮ್ ಜಯವಧು ಎಮ್ಮನ್ ಕೂರ್ತುರ್ಱ ಒಸೆದುಮ್ ಇರ್ಕುಮ್. ರಥಮನ್ ಹರಿ ಪುಸಿಯೆನೆ ಚೋದಿಸುವಂತೆವೊಲ್ ಇರ್ದು, ಅದೆಂತು ನರನನ್ ಗೆಲಿಪನ್. ಅಂತೆ ವಿಸಸನದೊಳ್ ನೀಮುಮ್ ಕರ್ಣಂಗೆ ಪೆಸರನ್ ಮಾಡಿ ಗೆಲ್ಲಂಗೊಳ್ಳಿಮ್.

(ಎಂಬುದುಮ್, ಮದ್ರರಾಜನ್ ಉಮ್ಮಚ್ಚರದೊಳ್ ಉಮ್ಮನೆ ಬೆಮರ್ತುರ್ಱ ಕಿನಿಸಿ ಕಿಂಕಿಱಿವೋಗಿ...)

**ಶಲ್ಯ:** ಕಲಿಯನೆ ಪಂದೆ ಮಾಳ್ಪ, ಕಡು ಪಂದೆಯನ್ ಒಳ್ಗಲಿ ಮಾಳ್ಪ; ತಕ್ಕನನ್ ಪೊಲೆಯನೆ ಮಾಳ್ಪ, ಮುನ್ ಪೊಲೆಯನನ್ ನೆಱಿ ತಕ್ಕನೆ ಮಾಳ್ಪ; ತಮ್ಮೊಳ್ ಅಗ್ಗಲಿಸಿ ಪೊದಳ್ದು ಪರ್ವಿದ ಅವಿವೇಕತೆಯಿನ್ ನೃಪಚಿತ್ತವೃತ್ತಿ ಸಂಚಲಮ್. ಅದಱಿಂದೆ ಇಳಾಧಿನಾಥರನ್ ಓಲಗಿಸಿ ಬಾಳ್ವುದೆ ಕಷ್ಟಮ್. ಅನುಪಮ ವಿಕ್ರಮಕ್ರಮಮ್, ಉದಾರಗುಣಮ್, ಋತವಾಕ್ಯಮ್ ಎಂಬ ಪೆಂಪು ಮೂಱಿ ನಾಲ್ಕೆ ಗುಣಮ್. ಅತ್ತ ರಾಜಬೀಜ ಸಂಜನಿತ ಗುಣಮ್ ಮದಮ್, ಮದಮನ್ ಆಳ್ದ ಅವಿವೇಕತೆಯಿಂದಮ್, ತೊಳ್ತಿನ ಮೊಲೆವಾಲನುಂಡ ಗುಣಮ್ ಅಲ್ತೆ. ಇವನ್ ನರೇಂದ್ರರೊಳ್ ಆರ್ ಕಿಡಿಪರ್.

ಪಿಂದೆ ಕಡಂಗಿ ತೇರನ್ ಎಸಗು ಎಂಬವನ್ ಅಂಬಿಗನ್, ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದೆ ಇರ್ಪವನುಮ್ ತುಱುಕಾಱನಾಗೆ, ಮತ್ಸ್ಯಂದನ ಚೋದನ ಕ್ರಮಮ್ ಅದುಮ್ ಪೊಲೆಯಂಗೆ ಅಮರ್ದುರ್ಱ ಇರ್ಕುಮ್. ಅಂತುಟಮ್ ನೀನ್ ದಯೆಗೆಯ್ದು ಪೇಳ್ದೆ ಫಣಿರಾಜಕೇತನಾ. ಇದನ್ ಆರ್ ಪಡೆವರ್. ಎನಿತು ಒಲ್ಲದಿರ್ದೊಡಮ್ ಸಜ್ಜನರುಮ್, ಪತಿಹಿತರುಮ್ ಅಱಿಯವೇಳ್ಕುಮ್. ನೀನ್ ಇನ್ ಎನಿತುಮ್ ಕೂರದೊಡಮ್, ನಿನ್ನ ನುಡಿಯನ್ ಆನ್ ಆಜಿರಂಗದೊಳ್ ಮೀಱುವೆನೇ.

(ಎಂದು ನೊಂದು ನುಡಿದ ಮದ್ರರಾಜನ ನುಡಿಗೆ ಫಣಿರಾಜಕೇತನನ್ ಇಂತು ಎಂದನ್.)

**ದುರ್ಯೋಧನ:** ಮಾಮ, ನೀಮ್ ಇನಿತನ್ ಕೆಮ್ಮನೆ ಎನಗೆ ಮನಮ್ ನೊಂದು ಬೆಸಸಿದಿರ್ ಬಿನ್ನಪಮನ್. ನೀಮ್ ಅವಧಾರಿಸಿಮ್. ಎಂತೆನೆ ಅಂಗಮಹೀಶನ್ ಸಾಮಾನ್ಯದ ಮನುಜನಲ್ಲನ್. ಕುಲಹೀನನೆ ಅಪ್ಪೊಡೆ, ಕೇವಲಬೋಧಮ್ ಪರಶುರಾಮನ್ ನಿರ್ಮಲಿನ ಕುಲಂಗಲ್ಲದೆ ಪಿಡಿಯಲ್ ಅಲ್ಲದಂತಪ್ಪ ದಿವ್ಯಬಾಣಾವಳಿಯನ್ ಏನ್ ಈಗುಮೇ. ಮಣಿಕುಂಡಲಮುಮ್, ಕವಚಮ್, ಮಣಿಯದ ಚಾರಿತ್ರಮ್, ಉಗ್ರತೇಜಮುಮ್, ಈ ಒಳ್ಗುಣಮುಮ್ ಕಲಿತನಮುಮ್ ಪ್ರಣತಾರೀ ಸೂತಸುತನೊಳ್ ಇವು ಏನ್ ಒಡವುಟ್ಟುಗುಮೇ. ಕಲಿತನದ, ನೆಗಳ್ದ, ಕಸವರಗಲಿತನದ, ಪೊದಳ್ದ ಪರಮಕೋಟಿಗೆ ಸಲೆ ಕರ್ಣನಲ್ಲದೆ ಪೆಱರ್ ಆರ್ ಎನಿಸುವ ಕಲಿತನಮನ್ ಹರಿಗೆ ಕವಚಮ್ ಇತ್ತುದೆ ಪೇಳ್ಗುಮ್.

(ಎಂದು ಕುರುಕುಲ ಚೂಡಾಮಣಿ ಶಲ್ಯನ ಹೃಚ್ಛಲ್ಯಮ್ ಎಲ್ಲಮುಮ್ ಕಳಲೆ ನುಡಿದೊಡೆ, ಆತನ್ ಇಂತು ಎಂದನ್.)

**ಶಲ್ಯ:** ನೃಪ, ನೀನ್ ಅಱಿಯದೆಯುಮ್ ನೆಗಳ್ವನ್ನನ್ ಅಲ್ಲೆ. ಆನ್ ಅಱಿವೆನ್. ಅದಂತೆ ಕರ್ಣನ ಎಣೆಗಂತೊಣೆಗಮ್ ನೃಪರ್ ಆರುಮ್ ಇಲ್ಲ. ತೇರನ್ ಒಸೆದು, ಆನ್ ಎಸಗುತ್ತಿರೆ ರಿಪುಸೇನೆ ಬೆಳ್ಕುಱೆ, ನಾಳೆ ಕರ್ಣನನ್ ಗೆಲಲ್ ರಣರಂಗ ಭೂಮಿಯೊಳ್ ಫಲ್ಗುಣನುಮ್ ಅಚ್ಯುತನುಮ್ ನೆಱೆವರೆ. ಒಂದೆ ಗಡ, ನರನ್ ಹರಿಯ ಪೇಳ್ದ ಒಂದು ಅಂದವೆ ಎಸಗುವಂತೆ, ಕರ್ಣನುಮ್ ಎನ್ನೆಂದ ಒಂದು ಓಜೆಯೊಳ್ ಎಸಗದೊಡೆ, ಸ್ಯಂದನದಿಂದೆ ಇಳಿದು ಪೋಪೆನ್. ತೇರನ್ ಎಸಗೆನ್.

(ಎಂಬುದುಮ್ ಭೂಭುಜನ್ ಅಂಗಮಹೀಪತಿಯನ್ ಬರಿಸಿ...)

**ದುರ್ಯೋಧನ:** ಮಹಾ ಆಜಿಯಲ್ಲಿ ಮಾವನ್ ತಾನ್ ಏನ್ ಎಂಬನ್, ಅದನ್ ಅಂತೆ ಮೀಱದೆ ನೀನ್ ಒಡಂಬಡು.

(ಎಂದು ಪ್ರಾರ್ಥಿಸಿದನ್. ಅಂತು ಇರ್ವರುಮನ್ ಒರ್ವರ್ ಒರ್ವರೊಳ್ ಒಡಂಬಡಿಸಿ ತನ್ನೊಡನೆ ಎಳ್ದು ನಿಂದಿರ್ದ ಮದ್ರರಾಜನನ್ ಇರಲ್ವೇಳ್ದು, ಕರ್ಣನುಮ್ ತಾನುಮ್ ನಿಜನಿವಾಸಂಗಳ್ಗೆ ಪೋದರ್.) ❖

# ೮೯. ಧರ್ಮರಾಯನ ಕಳವಳ

(೧೦೨ ನೆಯ ಗದ್ಯದಿಂದ ೧೦೫ ನೆಯ ಪದ್ಯ)

## ಪಾತ್ರಗಳು

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

# ಧರ್ಮರಾಯನ ಕಳವಳ

ಆ ಪಡೆಮಾತನ್ ಅಜಾತಶತ್ರು ಕೇಳ್ದು ಮುರಾಂತಕಂಗೆ ಬಳಿಯನಟ್ಟಿ ಬರಿಸಿ...

**ಧರ್ಮರಾಯ:** ರಣರಂಗದೊಳ್ ಸೂತಸುತನನ್ ಉಂತೆ ಗೆಲಲ್ ಅರಿದು ಎಂಬುದು ಒಂದು ಪಂಬಲೆ ಪಿರಿದು. ಆತಂಗೆ ನಾಳೆ ಶಲ್ಯನ್ ಒಸೆದು ತೇರ್ ಎಸಪನ್ ಗಡಮ್. ಈ ಕಲಹಮ್ ಇದೆಂತು ದಲ್. ಬಿದಿರ ಗಂಟುಗಳನ್ ಕಳೆದಂತೆ ಮತ್ ಮನಃಸ್ಖಲನೆಯನ್ ಉಂಟುಮಾಡಿದಪುದು. ಅಚ್ಯುತಾ, ಇಲ್ಲಿಗೆ ಕಜ್ಜಮ್ ಆವುದು.

(ಎಂಬುದುಮ್)

**ಕೃಷ್ಣ:** ನೀನ್ ಎಂದಂತೆ ರಥಕಲ್ಪಮ್ ಎಂಬುದು ಶಲ್ಯಂಗೆ ಒಡವುಟ್ಟಿದುದು. ಆದೊಡಮ್ ಅವರ್ ಇರ್ವರ್ಗಮ್ ಒರ್ವರ್ ಒರ್ವರೊಳ್ ಮೂಗುದುಱಿಸಲಾಗದ ಕಡ್ಡಮ್. ಅವರ್ಗೆ ಎಂತುಮ್ ಒಡಂಬಡಾಗದು. ಅದಲ್ಲದೆಯುಮ್, ಗಂಡರ್ ಕರ್ಣಗಂಡು ನುಡಿವ ಪಸುಗೆಯನ್ ಕಲ್ತರ್ ಅಲ್ತೆ. ಆ ಗಂಡವಾತುಮ್ ಮುನ್ ಕರ್ಣನ್ ಪುಟ್ಟೆ ಪುಟ್ಟಿತ್ತು. ಅಳವು ಅಮರ್ದು ಪೂಣ್ದು ಈವ ಚಾಗಮ್ ಒಡವುಟ್ಟಿತ್ತು. ಭಾರತಮ್ ಕರ್ಣಂಗೆ ಒಡ್ಡಿತ್ತು ದಲ್ ಎನೆ... ಜಗದೊಳ್ ಸಂದನ್. ಸಂದೊಡೆ ಏನ್, ನಾಳೆ ಹರಿಗನ್ ಆಂತು ಕರ್ಣಾಂತಾಕೃಷ್ಣ ಬಾಣಾವಳಿಯೊಳೆ ಕರ್ಣನನ್ ಕೊಲ್ಲುಗುಮ್.

(ಎಂಬಿನೆಗಮ್ ಆಗಳ್ ಪ್ರಭಾತಸಮೀರಮ್ ವಿಕಚಾಂಬುಜ ಸೌರಭಮ್ ಒಸೆದು ಸೇವಿಸುವ ಆ ಪೆಣ್ದುಂಬಿಗಳ ಸರಮನ್ ಎತ್ತಿ ತಱುಂಬುತ್ತು ಬಂದುದು.)



# ೯೦. ಕರ್ಣನ ಪರಾಕ್ರಮ

(೧೧೬ ನೆಯ ಗದ್ಯದಿಂದ ೧೨೦ ನೆಯ ಪದ್ಯ)

**ಪಾತ್ರಗಳು**

**ಕರ್ಣ:** ಅಂಗರಾಜ್ಯದ ಒಡೆಯ.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಶಲ್ಯ:** ಮದ್ರ ದೇಶದ ರಾಜ. ಮಾದ್ರಿಯ ಸೋದರ. ಪಾಂಡವರ ಮತ್ತು ಕೌರವರ ಸೋದರ ಮಾವ.

# ಕರ್ಣನ ಪರಾಕ್ರಮ

ಇತ್ತ ಕರ್ಣನುಮ್ ಉದೀರ್ಣವೀರ ರಸಾಸ್ವಾದನಲಂಪಟನಾಗಿ...

**ಕರ್ಣ:** ನೀಮ್ ಎಲ್ಲಮ್ ಇಂದು ಎನ್ನ ಕಾಳೆಗಮನ್ ಸುರಿಗೆಗಾಳೆಗಮನ್ ನೋಳ್ಪಂತೆ ನೋಳ್ಪುದು.

(ಎಂದು ಕೌರವಬಲದ ನಾಯಕರೆಲ್ಲರುಮನ್ ಒಡ್ಡಿ ಪಾಂಡವ ಬಲಕ್ಕೆ ಮಿಳ್ತು ಬರ್ಪಂತೆ ಬಂದು ತಾಗಿದಾಗಳ್, ತನಗೆ ಇದಿರೊಳ್ ಅದಿರದೆ ಆಂತ, ಸೋಮಕ ಶ್ರೀಜಯ ಪ್ರಮುಖ ಕೋಸಲಾಧೀಶ ಸೈನ್ಯಂಗಳನ್ ಅಲ್ಲಕಲ್ಲೋಲಮ್ ಮಾಡಿ, ಪೆಸರಱಿಕೆಯ ನಾಯಕರನ್ ಅಱುವತ್ತು ಸಾಸಿರ್ವರನ್ ಒರ್ವನನ್ ಕೊಲ್ವಂತೆ ಕೊಂದು, ನಿಟ್ಟಾಲಿಗೊಂಡು ಯುಧಿಷ್ಠರನನ್ ಮುಟ್ಟೆವಂದಾಗಳ್...)

**ಧರ್ಮರಾಯ:** ಅಣ್ಮಿ ಸತ್ತೆ.

(ಎನುತುಮ್ ನಿಶಿತಾಸ್ತ್ರಮನ್ ಉರ್ಚಿಕೊಂಡು ವಕ್ಷಮನ್ ಇರದೆ ಎಚ್ಚೊಡೆ, ಶರಮನ್ ಕಲಿ ಚಕ್ಕನೆ ಕಿಳ್ತು, ಉರಃ ಪ್ರದೇಶಮನ್ ಇಸೆ, ನೆತ್ತರೊಕ್ಕು ಪತಿ ಮುಚ್ಚೆಯೊಳ್ ಇಚ್ಚೆಯೆಗೆಟ್ಟು ಜೋಲ್ದೊಡೆ, ದಿನೇಶಜನ್ ನಸುನೊಂದು ನಂದಿಸದೆ ತನ್ನನೆ ಆದಮೆ ನಿಂದಿಸಿದನ್.)

**ಕರ್ಣ:** (ತನ್ನ ಮನದಲ್ಲಿ)

ಅಂತು ಕೊಂತಿಗೆ ನಾಲ್ವರೊಳ್ ಆರುಮನ್ ಕೊಲ್ಲೆನ್ ಎಂದು ನುಡಿದ ತನ್ನ ನನ್ನಿಗೆ ಬನ್ನಮ್ ಬಂದಪುದು.

(ಎಂದು ಚಿಂತಿಸುತ್ತ ಇರ್ದನ್. ಇತ್ತಲ್ ಅರಸನನ್ ಪೆಱಗಿಕ್ಕಿ ನಕುಳ ಸಹದೇವರ್ ಇರ್ವರುಮ್ ಬಂದು ಆಂತೊಡೆ...)

**ಕರ್ಣ:** (ತನ್ನ ಮನದಲ್ಲಿ)

ಇವರನ್ ಏಗೆಯ್ವುದು..

(ಎಂದು ಕರುಣಿಸಿ, ಶಲ್ಯನ ಮನಮನ್ ನೋಡಲೆಂದು ಬೆಸಗೊಂಡಡೆ, ತನ್ನ ಅಳಿಯಂದಿರ ಸಾವಿಂಗಾಱದೆ ಶಲ್ಯನ್ ಇಂತು ಎಂದನ್.)

**ಶಲ್ಯ:** ಎರೆದನ ಪೆಂಪುಮ್ ಆಂತ ಅಧಿಕನಪ್ಪನ ಪೆಂಪುಮ್ ಈವ ಕಾವ ನಿನ್ನ ಎರಡು ಗುಣಂಗಳುಮ್ ಬಯಸುತಿರ್ಪುವು. ನಿನ್ನೊಳ್ ಇವಂದಿರ್ ಏತಱೊಳ್ ದೊರೆ. ದೊರೆವೆತ್ತ ಕಾಳೆಗದ ನಿನ್ನೊಳಮ್ ನರನೊಳಮ್ ಗೆಲ್ಲದ ಸೋಲದ ಮಾತು ಇರ್ದುದು. ಸಿಸುಗಳ್ ಬಳಲ್ದ ಭೂಪನಮ್ ಸಿಬಿರಕ್ಕೆ ಉಯ್ಗೆ. ಅದಲ್ಲದೆಯುಮ್ ಅತ್ತ ದುರ್ಯೋಧನಂಗಮ್ ಭೀಮಂಗಮ್ ಅನುವರಮ್ ಪೊಣರ್ದು ಇರ್ದುದು. ಅರಸನನ್ ಬೇಗಮ್ ಪೋಗಿ ಕೆಯ್ಕೊಳ್ವಮ್.

(ಎಂದು ಬರೆವರೆ, ಯುಧಿಷ್ಠರನ್ ಅಳಿಯೆ ನೊಂದ ನೋವನ್ ಕಂಡು, ಪಾಂಡವಬಲದ ನಾಯಕರ್ ಉತ್ತಾಯಕರಾಗಿ ತಂತಮ್ಮ ಚತುರ್ವಲಂಗಳನ್ ಒಂದು ಮಾಡಿಕೊಂಡು ಕಾಲಾಗ್ನಿಯನ್ ಕೀಡಿ ಸುತ್ತುವಂತೆ ಕರ್ಣನನ್ ಸುತ್ತಿ ಮುತ್ತಿಕೊಂಡು, ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳ್ ಇಟ್ಟುಮ್ ಎಚ್ಚುಮ್ ಇಱಿದುಮ್ ಅಗುರ್ವುಮ್ ಅದ್ಭುತಮುಮಾಗೆ ಕಾದುವಾಗಳ್...)

**ಕರ್ಣ:** (ತನ್ನ ಮನದಲ್ಲಿ)

ಎನಗಮ್ ಅರಾತಿ ಸಾಧನಮ್ ಇದಿರ್ಚುಗುಮ್. ಅಳ್ಕದೆ ಇದಿರ್ಚೆ ಬಾಳ್ಗುಮ್ ಇನ್ನೆನೆ ದೋಷಮ್ ಪೆಱತು ಉಂಟೆ. ಎನಗೆ ಅಂತು ಅದೆ ದೋಷಮ್. ಅದು ಆಗಲ್ ಆಗದು.

(ಎಂದು ಇನತನಯನ್ ತಗುಳ್ದು ಇಸೆ, ನಿಶಾತಶರಾಳಿಗಳ್ ಎಯ್ದೆ

ಚಕ್ಕು ಚಕ್ಕನೆ ಕೊಳೆ, ವೈರಿ ಭೂಪರಾ ಶಿರಂಗಳ್ ಮೊಕ್ಕು ಮೊಕ್ಕನೆ ಎಂದು ಉರುಳ್ದುವು. ಆ ಪ್ರಸ್ತಾವದೊಳ್ ಮಂತ್ರಪದ ಪ್ರವೀಣ ಬಹುಸಾಧನ ಹೂಂಕರಣಾದಿ ಮಂತ್ರಮ್ ಆಮಂತ್ರಿತ ಡಾಕಿನೀ ದಶನ ಘಟ್ಟನ ಜಾತ ವಿಭೀಷಣ ಮದೇಭ ಅಂತ್ರ ನಿಯಂತ್ರಿತ ಅಶ್ವ ಶವ ಮಾಂಸರಸ ಮತ್ತ ಯೋಗಿನಿ ತಂತ್ರಮ್ ಕರ್ಣನ ಗೆಲ್ದ ಕೊಳ್ಗುಳಮ್ ಏನ್ ಅಗುರ್ವನ್ ಒಳಕೊಂಡುದೊ...)



# ೯೧. ಧರ್ಮರಾಯನ ಹತಾಶೆ

(೧೨೦ ನೆಯ ಗದ್ಯದಿಂದ ೧೩೫ ನೆಯ ಗದ್ಯ)

## ಪಾತ್ರಗಳು

ಅರ್ಜುನ: ಪಾಂಡುರಾಜ ಮತ್ತು ಕುಂತಿಯ ಮಗ.

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ.

ಭೀಮ: ಪಾಂಡುರಾಜ ಮತ್ತು ಕುಂತಿಯ ಮಗ.

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ಕರ್ಣ: ಅಂಗರಾಜ್ಯದ ಒಡೆಯ.

# ಧರ್ಮರಾಯನ ಹತಾಶೆ

ಅನ್ನೆಗಮ್ ಇತ್ತ ಸಂಸಪ್ತಕ ನಿಕುರುಂಬದೊಳಗೆ ಒರ್ವರುಮನ್ ಕಿಱಿವೀಳಳ್ ಈಯದೆ ರಸಮನ್ ಕೊಲ್ವಂತೆ ಎಂತಾನುಮ್ ಕೊಂದು, ಕರ್ಣನೊಳ್ ಪೊಣರಲ್ ಬರ್ಪ ವಿಕ್ರಾಂತತುಂಗನ್ ನಿಜ ಪತಾಕಿನಿಯ ನಡುವೆ ಮೆಱೆವ ಪತಾಕಾ ವಿರಾಜಮಾನಮಪ್ಪ ತಮ್ಮಣ್ಣನ ರಥಮನ್ ಕಾಣದೆ, ಕೌರವಬಲ ಜಳನಿಧಿಯೊಳ್ ಬಳ್ವಳ ಬಳೆದು ಒಗೆದ ಕೇಸುರಿಯಂತೆ ತಳತಳಿಸಿ ಮಿಳಿರ್ವ ಪವನತನೂಜನ ಕೇಸರಿಕೇತನಮಪ್ಪ ಪಳಯಿಗೆಯನ್ ಕಂಡು ಮುಟ್ಟೆ ವರ್ಪನ್ನೆಗಮ್, ಅರಸನನ್ ಬೀಡಿಂಗೆ ಕಳಿಪಿ ಮಗುಳ್ದು ಬಂದ ನಕುಳ ಸಹದೇವರಿಂದ ಅರವಿಂದಬಾಂಧವ ತನೂಜನ ಮಹಾಪ್ರಹರಣಹತಿಯೊಳ್ ಯಮನಂದನನ ನೋವುಮನ್ ಆತ್ಮೀಯಬಲದ ನಾಯಕರ ಸಾವುಮನ್ ಅಱಿದು...

**ಅರ್ಜುನ:** (ಕೃಷ್ಣನೊಡನೆ ಮಾತನಾಡುತ್ತ)

ಪವನಸುತಂಗೆ ಪಾಸಟಿಗಳ್ ಒರ್ವರುಮಿಲ್ಲ. ಅದಱಿಂದಮ್ ಆಂತ ಕೌರವಬಲದ ಉರ್ಕುಮ್ ಒಂದಿನಿಸು ಮಾಣಿಸಿ ಇಳೇಶ್ವರನಲ್ಲಿಗೆ ಪೋಪಮ್.

(ಎಂದು ಅವನತ ವೈರಿ ವೈರಿಬಲ ವಾರಿಧಿಯನ್ ವಿಶಿಖೌರ್ವವಹ್ನಿಯಿಮ್ ತವಿಸಿ, ಅಲ್ಲಿಗೆ ಮರುತ್ತನೂಭವನನ್ ಪೇಳ್ದು, ಭೂಪನನ್ ಇರದೆ ಎಯ್ದಿ, ತಾನುಮ್ ಹರಿಯುಮ್ ಭೂಪತಿಗೆ ಆನತರಾಗಲೊಡಮ್, ಪತಿ ಒಸೆದು ಪರಸಿ...)

**ಧರ್ಮರಾಯ:** ಕಾನೀನನ ದೊರೆಯ ಕಲಿಯನ್ ಉಗ್ರಾಹವದೊಳ್ ಯಮಸ್ಥಾನಮನ್ ಎಂತು ಎಯ್ದಿಸಿದಿರೊ. ನರನಾರಾಯಣರ್ ಎಂಬ ಇರ್ವರುಮ್ ಒಡಗೂಡಿದೊಡೆ ಉರ್ವರೆಯೊಳ್ ನಿರುತಮ್ ಗೆಲ್ವರ್ ಆರ್ ಎನೆ, ನೆಗಳ್ದ ನಿಮ್ಮಿರ್ವರ ದೊರೆಗಮ್

ಬಗೆವೊಡೆ ಅಗ್ಗಳಮ್ ನರರ್ ಒಳರೇ. ಎಂತೆನೆ ಮುಯ್ಯೇಳ್ ಸೂಳ್ ಎಳೆಯನ್ ತಳದೊಳೆ ಆತನ್ ಪಿಳಿದನ್ ಎಂಬುದನ್ ಆನ್ ಮುನ್ನ ಎಂತುಮ್ ನಂಬೆನೆ. ಇಂದಿನ ಗಂಡವಾತಿನೊಳ್ ಸೂತಜನನ್ ನಂಬಿದೆನ್. ಮಕ್ಕಳ್ ಪೆತ್ತರೊಳ್ ಕುಂತಿಯೆ ಪೆತ್ತಳ್ ಎಂಬವರೆ, ಕರ್ಣಂಬೆತ್ತ ಅಕ್ಕನೆ ಕೊಂತಿಮಾದೇವಿಗಮ್ ಉತ್ತರಮಾದಳ್ ಎಂದು ಎರಡುಮ್ ಪಡೆಗಳ್ ಪೊಗಳ್ದುವು. ಇನ್ನುಮ್ ಕರ್ಣನ ರೂಪೆ ದಲ್ ಎನ್ನ ಎರ್ದೆಯೊಳಮ್ ಕಣ್ಣೊಳಮ್ ಸುಳಿದಪುದು. ಆಂತು ಎನ್ನೆಚ್ಚ ಶರಮುಮನ್ ಗೆಲ್ದು, ಎನ್ನುಮನ್ ಅಂಜಿಸಿದನ್ ಎಂದೊಡೆ, ಇನ್ ಏನ್ ಎಂಬೆನ್. ಅಂತಪ್ಪ ಅದಟನನ್ ಆಜಿಯೊಳ್ ಎಂತೆಂತು ಇದಿರಾಂತು ಗೆಲ್ದಿರ್.

(ಎನೆ, ಕಂಸಾಂತಕನ್ ನೃಪನನ್ ಎಂದನ್.)

**ಕೃಷ್ಣ:** ಕರ್ಣನುಮ್ ಆಂತಿರೆ, ಇಂದು ನೀಮ್ ನೊಂದುದನ್ ಕೇಳ್ದು, ಈಗಳ್ ಆರಯ್ಯಲೆಂದು ಬಂದೆವು. ಅಪಾರಗುಣಾ, ಕೊಂದೆವಿಲ್ಲವಿನ್ನುಮ್. ಬಳವತ್ ಕ್ರೂರ ಅರಾತಿಯನ್ ಉಪಸಂಹಾರಿಪೆವು. ಏನ್ ಪಿರಿಯನಾದನ್.

(ಎಂಬುದುಮ್ ಆಗಳ್ ನರಕಾಂತಕನನ್ ನರೇಂದ್ರನ್ ನುಡಿದನ್.)

**ಧರ್ಮರಾಯ:** ಆನ್ ಅರಸುಗೆಯ್ವ ಪಳುವಗೆಯನ್ ಅದನ್ ಪರಿಹರಿಸಿದೆನ್. ಆತನನ್ ಈ ಕಿರೀಟಿ ಗೆಲ್ದು ಎನಗೆ ಪಟ್ಟವನ್ ಮಾಡುವನೇ. ಏನ್ ಮೊಗ್ಗೆ. ಕರ್ಣನ್ ಇಂತು ನಿಮ್ಮಂದಿಗರ್ ಇಱಿಯೆ ಸಾವನೇ. ಇನ್ ಅಮ್ಮ, ಸುಯೋಧನನೊಳ್ ಸುಖಮ್ ಇರಿ. ಆನುಮ್ ಪಗೆಯನ್ ಮಱೆದು ತಪೋನಿಯೋಗದೊಳ್ ಇರ್ಪೆನ್.

(ಎಂದು ತನ್ನ ನೋಯೆ ನುಡಿದ ನಿಜಾಗ್ರಜನ ನುಡಿಗೆ ಮನದೊಳ್ ಏವೈಸಿಯುಮ್, ಏವೈಸದೆ ವಿನಯಮನೆ ಮುಂದಿಟ್ಟು ವಿನಯವಿಭೂಷಣನ್ ಇಂತು ಎಂದನ್.)

**ಅರ್ಜುನ:** ಮುಳಿದು ಇಂತು ಬೆಸಸೆ ನಿಮ್ಮಡಿಯೊಳೆ ಮಾರ್ಕೊಂಡು ಎಂತು ನುಡಿವೆನ್, ಉಸಿರೆನ್. ನಿಮ್ಮನ್ ಮುಳಿಯಿಸಿದ ಸುರಾಸುರರುಮನ್ ಒಳರ್ ಎನಿಸೆನ್. ಕರ್ಣನೆಂಬನ್ ಎನಗೆ ಏನ್ ಪಿರಿಯನ್.

ನರಸಿಂಗಂಗಮ್ ಜಾಕಬ್ಬೆ ಅರಸಿಗಮ್ ಅಳವು ಒದವೆ ಪುಟ್ಟಿ ಪುಟ್ಟಿಯುಮ್, ಅರಿಕೇಸರಿಯೆನೆ ನೆಗಳ್ದುಮ್ ಅರಾತಿಯ ಸರಿದೊರೆಗಮ್ ಬಂದೆನಪ್ಪೊಡೆ, ಆಗಳ್ ನಗಿರೇ. ಪುಟ್ಟೆ ಮುಳಿಸು, ಒಸಗೆಗಳೆ ಕಡುಗಟ್ಟಮ್ ಮುಳಿಸೆ, ಒಸಗೆ ಎಂಬ ನೃಪತನಯನ್ ಅವನ್ ಮುಟ್ಟುಗಿಡೆ ಪಾರದರದೊಳ್ ಪುಟ್ಟಿದನ್. ಅರಸಂಗಮ್ ಅರಸಿಗಮ್ ಪುಟ್ಟಿದನೇ. ಅರಸ, ನೇಸಱಿಂದೊಳಗೆ ಆನ್ ದಿನಕರ ಸುತನನ್ ಇಕ್ಕಿ ಬಂದಲ್ಲದೆ ಭವತ್ಪದಾಬ್ಜಮನ್ ಕಾಣೆನ್ ದಲ್.

(ಎಂದು ಉದಶ್ರುಜಳಲವಾರ್ದ್ರ ಕಪೋಳನ್ ಎಳ್ದನ್. ಅಂತು ಭೂನಾಥನ್ ತನ್ನ ಅಳವನ್ ಅಱಿದುಮ್ ಅಱಿಯದೆ ಕಿಡಿ ನುಡಿದು...)

**ಧರ್ಮರಾಯ:** ತಪೋವನದೊಳಲ್ಲದೆ ನೀಗೆನ್.

(ಎಂದು ಎಳ್ದು ನಿಂದಿರ್ದನನ್, ಅಸುರಾಂತಕನುಮ್ ತಾನುಮ್ ಎಂತಾನುಮ್ ಪ್ರಾರ್ಥಿಸಿದೊಡೆ, ಒಡಂಬಟ್ಟ ಅಜಾತಶತ್ರುಗೆ ಪೊಡೆವಟ್ಟು, ರಥಮನ್ ಏಱಿ ಕೌರವಧ್ವಜಿನಿಗೆ ಭಯಜ್ವರಮ್ ಬರ್ಪಂತೆ ಬಂದು, ಪವನತನಯಂಗೆ ಅಂತಕತನಯನ ಸಮಾವಸ್ಥೆಯನ್ ಪೇಳ್ದು..)

**ಅರ್ಜುನ:** ಇಂದಿನ ಅನುವರಮ್ ಎಲ್ಲಮನ್ ನಿಮ್ಮೊರ್ವರ ಮೇಲಿಕ್ಕಿ ಪಿರಿದುಮ್ ಪೊಳ್ತು ತಡೆದಿರ್ಪೆವು.

(ಎನೆ, ಹಿಡಿಂಬಾಂತಕನ್ ಇಂತು ಎಂದನ್.)

**ಭೀಮ:** ನರಮಾತಂಗ ತುರಂಗ ಸೈನ್ಯಮ್ ಇದಿರಾಂತು ಈರೆಂಟು ಲಕ್ಕಂಬರಮ್ ಎನ್ನ ನಿಶಾತಹೇತಿಹತಿಯಿಮ್ ಕರಗಿತ್ತು. ಮತ್ತೆ ಅಂತುಮ್, ಈ ತೋಳ್ ತೀನ್ ಕರಗಲ್ಕೆ ಆರ್ತಪುದಿಲ್ಲ. ಅರಿಗ, ಅದಕ್ಕೆ ನೀನ್ ವೇಳ್ಪುದೇ. ಸಂಗರಾಜಿರದೊಳ್ ಕೌರವರೆಂಬ ಕಾಕಕುಳಕೆ ಎನ್ನ ಈ ಒಂದೆ ಬಿಲ್ ಸಾಲದೇ.

(ಎಂದ ಭೀಮನನ್ ಅಕಲಂಕರಾಮನ್)

**ಅರ್ಜುನ:** ನಿಮ್ಮ ಭುಜಬಲಕ್ಕೆ ಅದು ಏನ್ ಪಿರಿದು. ನೀಮ್ ಎನ್ನ ಕಾಳೆಗಮನ್ ಸುರಿಗೆಗಾಳೆಗಮನ್ ನೋಳ್ಪಂತೆ ತೊಡೆಯನ್

ಪೊಯ್ದು ಆರ್ದು ನೋಡುತ್ತುಮ್ ಇರಿಮ್.

(ಎಂದು ಪವನಜನನ್ ಒಡಗೊಂಡು, ಪವನ ಜವದಿನ್ ಕರ್ಣನ ರಥಮ್ ಎಲ್ಲಿತ್ತು... ಎತ್ತ ಪೋದುದು... ಎನುತುಮ್ ಬರ್ಪ ಅತಿರಥ ಮಥನನ ರಥದ ಬರವನ್ ಕಂಡು, ಕೌರವ ಬಲಮೆಲ್ಲಮ್ ಒಲ್ಲನುಲಿದು ಓಡಿ ವೈಕರ್ತನನ ಮಱಿಯನ್ ಪುಗುವುದುಮ್...)

**ಕರ್ಣ:** ಮದೀಯ ಮನೋರಥಮ್ ಇಂದು ದೊರೆಕೊಂಡುದು.

(ಎಂದು ದಿನಕರತನೂಜನ್ ಎರಡು ಮುಯ್ವುಮನ್ ನೋಡಿ, ಸಮರಾನಂದಂಬೆರಸು ಶಲ್ಯನನ್ ರಥಮನ್ ಎಸಗಲ್ ಪೇಳ್ದು, ದಿವ್ಯಾಸ್ತ್ರಂಗಳ ದೊಣೆಗಳನ್ ಎರಡುಮ್ ದೆಸೆಯೊಳಮ್ ಬಿಗಿದು, ಕಾಳವಟ್ಟದ ಬಿಲ್ಲನ್ ಕೆಂದಳದೊಳ್ ಅಮರೆ ನೀವಿ ಜೇವೊಡೆದಾಗಳ್...)



# ೯೨. ದುಶ್ಶಾಸನನ ಸಾವು

(೧೪೪ ನೆಯ ಗದ್ಯದಿಂದ ೧೬೧ ನೆಯ ಗದ್ಯ)

## ಪಾತ್ರಗಳು

ಭೀಮ: ಪಾಂಡುರಾಜ ಮತ್ತು ಕುಂತಿಯ ಮಗ.

ದ್ರೌಪದಿ: ಅರ್ಜುನನ ಹೆಂಡತಿ.

ಹಿಡಿಂಬೆ: ಭೀಮನ ಹೆಂಡತಿ.

ಸೈನಿಕರು: ಕೌರವರ ಮತ್ತು ಪಾಂಡವರ ಸೇನೆಯವರು.

ದುಶ್ಶಾಸನ: ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. ದುರ್ಯೋಧನನ ತಮ್ಮ.

# ದುಶ್ಶಾಸನನ ಸಾವು

ಅಂತು ಮುಗಿಲೂಱಿದ ಮೂಱುಲೋಕಮುಮ್ ಕರ್ಣಾರ್ಜುನರ ಯುದ್ಧಮನ್ ನೋಡಲ್ ನೆರೆದಲ್ಲಿ...

**ಭೀಮ:** (ತನ್ನ ಮನದಲ್ಲಿ)

ನೆರವಿವಡೆದು ಎನ್ನ ಪ್ರತಿಜ್ಞೆಯನ್ ನೆಱಪಲ್ ಇಂದು ಅವಸರಮ್ ಪಡೆದೆನ್.

(ಎಂದು ಕೌರವಕುಲ ಹಿಮಕರ ಆವಿಲ ಪ್ರಚಯ ವರ್ಷವಾರಿದನಪ್ಪ ಪವನತನಯನ್ ಬದ್ಧವಪುವಾಗಿ ದುರ್ಯೋಧನಾನುಜರನ್ ಪೆಸರ್ವೆಸರೊಳೆ ಕರೆದು ಮೂದಲಿಸಿದೊಡೆ, ಮುನ್ನೆ ತಮ್ಮೊಡವುಟ್ಟಿದರ್ ಸತ್ತ ಅಳಲೊಳ್ ಅನಿಬರುಮ್ ಒಂದಾಗಿ ಬಂದು ತಾಗಿದಾಗಳ್, ಮಸಕಮ್ ಕುಂದದೆ ಪಾಯ್ವ ಅರಾತಿಶರ ಸಂಘಾತಂಗಳನ್ ಕೂಡೆ ಖಂಡಿಸಿ, ಬಿಲ್ಲನ್ ಮುಱಿಯೆಚ್ಚೊಡೆ, ಅಂತು ಅನಿಬರುಮ್ ಬಾಳ್ ಕಿಳ್ತು ಮೇಲ್ವಾಯ್ದೊಡೆ ಅರ್ಬಿಸೆ, ತಿಣ್ಣಮ್ ತೆಗೆದು ಅರ್ಧಚಂದ್ರಶರದಿನ್ ಸೂಳ್ ಸೂಳೊಳ್ ಎಚ್ಚಾಗಳ್, ಉರುಳ್ದ ಕೌರವಶಿರಃಪದ್ಮಂಗಳಿಮ್ ಕೊಳ್ಗುಳಮ್ ಅರ್ಚಿಸಿದಂತೆ ಇರ್ದುದು. ಅಂತು ದುರ್ಯೋಧನ ದುಶ್ಶಾಸನರ್ ಇರ್ವರುಮ್ ಉಳಿಯೆ, ಉಳಿದ ಕೌರವರೆಲ್ಲರುಮನ್ ಜೀರಗೆಯೊಕ್ಕಲ್ಮಾಡಿ ಕೆಡೆದ ಪೆಣಂಗಳನ್ ಎಡಗಲಿಸಿ ನಿಂದು....)

**ಭೀಮ:** ಚಲದಿನ್ ಕೃಷ್ಣೆಯ ಕೇಶಮನ್ ಪಿಡಿದ ನಿನ್ನಿಂದೆ ಆದ ಅಳಲ್, ನಿನ್ನ ಉರಃಸ್ಥಲಮನ್ ಪೋಳದೆ ಪೋಪುದಲ್ತು. ಎನಗೆ ಅಳ್ಕಿ ಅದೇಕೆ ಇರ್ದಪಯ್. ನಿನ್ನ ಅನುಜರನ್ ಕಂಡು ಬಾಳ್ವ ಪಂಬಲ್ ನಿನಗೆ ಅದೇನ್ ಇನ್ ಉಂಟೆ. ಎಂತುಮೇನ್ ಎನ್ನ ತೋಳ್ ಬಲೆಯೊಳ್ ಸಿಲ್ಕಿದೆ.

(ಎಂದು ಮೊದಲಿಪುದುಮ್ ದುಶ್ಶಾಸನನ್ ತಾಗಿದನ್. ಅಂತು ತಾಗಿದಾಗಳ್, ಕಱುಪಿ ಎಳ್ದ ಪಗೆಯ, ಬೇರ್ವರಿದ ಉಱುಮಿಕೆಯ, ಪೊದಳ್ದ ಗಂಡಮಚ್ಚರದ ಒದವಿನ್ ನೆಱನನೆ ಮೊದಲಿಸುತ್ತುಮ್, ನೆಱನನೆ ಆಗಳ್ ಒರ್ವರ್ ಒರ್ವರನ್ ತೆಗೆದು ಎಚ್ಚರ್. ಸುರಿಗಿ ಇಱಿವ ತೆಱದಿನ್ ಓರೊರ್ವರನ್ ಇಸೆ, ನಡೆ ನಟ್ಟಕೋಲ ಬಳಿವಿಡಿದು, ಎತ್ತಮ್ ಅವಂದಿರ ನವರುಧಿರಂಗಳ್ ಮುಳಿಸಿನ ತೆರಳ್ದ ದಳ್ಳುರಿಗಳಮ್ ಇಳಿಸಿ ಸುರಿದವು. ಅಂತು ನಿಜನಿಶಿತ ಮಾರ್ಗಣಂಗಳಿಂದಮ್ ಅಂಬು ತಪ್ಪ ಜೆಟ್ಟಿಗ ಬಿಲ್ಲಾಳಂತೆ ಎಚ್ಚು ಪಾಯ್ವ ಅರಾತಿಯ ಮೆಯ್ಯ ನೆತ್ತರನ್ ಕಂಡು..)

**ಭೀಮ:** ಸೂಳೇಸಿನೊಳ್ ಇವನ ನೆತ್ತರ್ ಒಕ್ಕೊಡಮ್, ತನಗೆ ಬಸಿಱಾರೆ ಕುಡಿಯಲುಮ್, ದ್ರೌಪದಿಯ ಕೇಶಪಾಶಮನ್ ತೊಯ್ದು ಮುಡಿಯಲುಮ್ ನೆಱೆಯದು.

(ಎಂದು ಅವನನ್ ಬಂಚಿಸಿ ಗದೆಗೊಂಡು ಅವನ ವರೂಥಮನೆ ತಿಣ್ಣಮ್ ಇಟ್ಟೊಡೆ, ಅವನ್ ಗದೆಗೊಂಡು ಎಯ್ತರೆ, ಪವನಸುತನ್ ರಥದಿಂದೆ ಇಳಿದು ಅವನಿಯೊಳ್ ಅವನುಮನ್ ಉರುಳ್ಚಿದನ್. ಬಳೆ ನುರ್ಗುತ್ತಿರೆ ಗಂಟಲನ್ ಮೆಟ್ಟಿ...)

**ಭೀಮ:** ಇವನ್ ದುಶ್ಶಾಸನನ್. ಭೀಮನಿನ್ ಬಳಸಂಪನ್ನನ್. ಅವುಂಕಿ ಕೊಂದಪೆನ್. ಇದನ್ ಮಾರ್ಕೊಳ್ವ ಬಲ್ಲಾಳ್ಗೆ ಅಸುಂಗೊಳೆ ಬಾಳ್ ಎತ್ತಿದೆನ್. ಪಿಂಗಾಕ್ಷ, ಏಕೆ ಕಣ್ಣ ಮಿಡುಕಯ್. ನೀನ್ ಏಕೆ ಮಿಳ್ಮಿಳ ನೋಡುತ್ತು ಉಳನೆ ಇರ್ದೆ.

(ಎಂದು ಅದಟರನ್ ಭೀಮನ್ ಪಳಂಚಿ ಅಲ್ವಿದನ್. ಅಂತು ಮುಳಿದ ಪವನಜನ ಕೋಪಾಟೋಪಮನ್ ಕಂಡು, ಕೌರವಬಲದ ನಾಯಕರೊಳ್ ಒರ್ವರಪ್ಪೊಡಮ್ ಮಿಟ್ಟೆಂದು ಮಿಡುಕಲ್ ಅಣ್ಮದಿರೆ, ಪವನಾತ್ಮಜನ್ ದ್ರುಪದಾತ್ಮಜೆಗೆ ಬಳಿಯನ್ ಅಟ್ಟುವುದುಮ್, ಆ ವನಿತೆ ಜಯವನಿತೆ ಬರ್ಪಂತೆ ಬಂದು, ಉಸಿರೊತ್ತಿಮ್ ತಿದಿಯಂತಿರೆ; ಒತ್ತಿದ ಬಸಿಱ್; ಪೋತಂದ ಕಣ್; ಬಿಟ್ಟ ಬಾಯ್; ಮಸಕಮ್ ಕುಂದಿದ ಮೆಯ್; ವಲಮ್ ಬಡಿವ ಕಾಲ್; ಭೂಭಾಗದೊಳ್ ತಂದು ತಾಟಿಸುತುಮ್ ಕೋಟಲೆಗೊಳ್ವ

ರತ್ನಮಕುಟದ್ಯೋತ ಉತ್ತಮಾಂಗಮ್ ವಿರಾಜಿಸುವನ್ನಮ್ ಪುಡಿಯೊಳ್ ಪೊರಳ್ವ, ಪಗೆಯನ್ ಕಣ್ಣಾರ್ವಿನಮ್ ನೋಡಿದಳ್. ಆಸತ್ತು ತಿರಿದ ಅರಣ್ಯಾವಾಸದ ಪರಿಭವದ ಕುದಿಪಮನ್ ನೀಗಿ, ದುಶ್ಶಾಸನನ್ ಇರ್ದ ಇರವುಮ್ ಆ ದ್ರೌಪದಿಯಾ ಮನದೊಳ್ ಸುಖಾವಾಸಮನ್ ಎಯ್ದಿಸಿದುದು. ಆಗಳ್ ವೃಕೋದರನ್ ತನ್ನ ತಳೋದರಿಯ ಮುಖಮನ್ ನೋಡಿ...)

**ಭೀಮ:** ನಿನ್ನ ಎನ್ನ ಪ್ರತಿಜ್ಞೆಯನ್ ನೆಱಪುವಮ್ ಬಾ.

(ಎಂದು ಕೆಲದೊಳ್ ಕುಳ್ಳಿರಿಸಿ, ದೃಢ ಕಠಿನ ಹೃದಯನಪ್ಪ ಹಿರಣ್ಯಾಕ್ಷನ ಉರಮನ್ ಪೋಳ್ವ ನಾರಸಿಂಗನಂತೆ, ಸುರಿಗೆಯೊಳ್ ಉರಮನ್ ಡೊಕ್ಕನೆ ಬಿಕ್ಕನೆ ಬಿರಿಯಿಱಿದು, ಬರಿಯನ್ ಅಗಲೊತ್ತಿ, ಮನಮ್ ಕೊಕ್ಕರಿಸದೆ ಬೆಲಗಸೆಯಿನ್ ಪವನಸುತನ್ ನೆತ್ತರನ್ ಅಳುರ್ಕೆಯೆ ಮೊಗೆಮೊಗೆದು, ನೆತ್ತಿಯೊಳ್ ಎಱೆದೆಱೆದು, ಇನಿಸು ಅಱೆಯೊತ್ತಿ, ಬಳಿಕ್ಕೆ ಇಳಿಯೆ, ಪೊಸೆದು ಜಡೆಗೊಂಡಿರ್ದ ಉದ್ವೃತ್ತ ಕುಚಯುಗೆಯ ಕೇಶಮನ್, ಎಯ್ದೆ ಪಸರಿಸಿದ ಅದಟಿನ್ ಎತ್ತಮ್ ಪಸರಿಸಿದನ್. ಪಸರಿಸಿ ಪಂದಲೆಯನ್, ಮೆಟ್ಟಿಸಿ, ವೈರಿಯ ಪಲ್ಲಪಣಿಗೆಯಿನ್ ಬಾರ್ಚಿ, ಪೊದಳ್ದ ಒಸಗೆಯಿನ್ ಅವನ ಕರುಳ್ಗಳೆ ಪೊಸವಾಸಿಗಮಾಗೆ ಕೃಷ್ಣೆಯನ್ ಮುಡಿಯಿಸಿದನ್. ಅಂತು ತನ್ನ ಪಗೆಯುಮ್ ಬಗೆಯುಮ್ ಒಡನೊಡನೆ ಮುಡಿಯೆ, ರಿಪು ವಿಪುಳ ರುಧಿರಜಲಂಗಳೊಳಮ್, ರುಚಿರ ತದೀಯ ಅಂತ್ರಮಾಲೆಯನೆ ಮಾಲೆ ಮಾಡಿ ಮುಡಿಯಿಸಿ, ಕೃಷ್ಣೆಯ ಮೊಗಮನ್ ನೋಡಿ ಮುಗುಳ್ನಗೆ ನಕ್ಕು, ಕೌರವಕುಳವಿಳಯಕೇತು ಇಂತು ಎಂದನ್.)

**ಭೀಮ:** ಇದಱೊಳ್ ಶ್ವೇತಾತಪತ್ರಸ್ಥಗಿತದಶದಿಶಾ ಮಂಡಲಮ್ ರಾಜಚಕ್ರಮ್ ಪುದಿದು ಅಳ್ಕಾಡಿತ್ತು; ಇದಱೊಳೆ ಕುರುರಾಜಾನ್ವಯಮ್ ಅಡಂಗಿತು; ಇದಱಿಂದಮ್ ಮತ್ ಪ್ರತಾಪಕ್ಕೆ ಅಗುರ್ವು ಉರ್ವಿದುದು; ಅಬ್ಜದಳಾಕ್ಷೀ, ನೋಡ... ಇದುವೆ ಮಹಾಭಾರತಕ್ಕೆ ಆದಿಯಾಯ್ತು. ಭವತ್ಕೇಶಪಾಶಪ್ರಪಂಚಮ್ ಬಗೆಯೆ ಸಾಮಾನ್ಯಮೆ ಪೇಳ.

(ಎಂದು ನುಡಿದು...)

**ಭೀಮ:** ನೀನುಮ್ ನಿನ್ನ ಪ್ರತಿಜ್ಞೆಯನ್ ನೆಱಪಿದೆ. ಆನುಮ್ ಎನ್ನ ಪ್ರತಿಜ್ಞೆಯನ್ ನೆಱಪುವೆನ್.

(ಎಂದು ದ್ರೌಪದಿಯನ್ ಪಿಡಿಯನ್ ಏಱಿಸಿ ಬೀಡಿಂಗೆ ಕಳಿಪಿ, ರಾಕ್ಷಸಕ್ರೀಡೆಯನ್ ಆಡಲ್ ಬಗೆದು, ಹಿಡಿಂಬೆಯನ್ ನೆನೆದು ಬರಿಸಿ, ಒಸರ್ವ ಬಿಸುನೆತ್ತರನ್ ರಕ್ಕಸನ ಅಂದದೆ ಕುಡಿದು, ಕಂಡಗಳನ್ ಅರ್ವಿಸೆ ಮೆಲ್ದು ಮೆಲ್ದು...)

**ಭೀಮ:** ಕರ್ಬಿನ ರಸಕ್ಕಮ್ ಇನಿಸು ಇಂಪುಗಾಣೆನ್.

(ಎಂದು ಅನಿಲಸುತನ್ ಸವಿಸವಿದು...)

**ಭೀಮ:** ಬಿಕ್ಕ ಬಿಕ್ಕನೆ ಸವಿ ನೋಡು ಎನ್ನಾಣೆ.

(ಎಂದು ರಕ್ಕಸಿಗಮ್ ಅದನ್ ಸವಿದೋಱಿ, ನೆತ್ತರೆಲ್ಲಮ್ ತವೆ, ಅವನ ಕರುಳ ಪಿಣಿಲನ್ ಮುಳಿಸಿಂದ ನೋಣೆದನ್. ಅಂತು ಕುಡಿದು ನಿಜವಿರೋಧಿ ರುಧಿರಾಸವದೊಳ್ ಅಳವಿಗಳಿಯೆ ಸೊರ್ಕಿ ತಾನುಮ್ ಹಿಡಿಂಬೆಯುಮ್ ಅವನ ಬರಿಯ ನರವಿನ ಅಡಗಿನ ಇಡುವಿನ ಎಡೆಯ ಕೆನ್ನೆತ್ತರೊಳ್, ಒರ್ವರ್ ಒರ್ವರನ್ ತಳ್ಕಿಱಿದುಮ್, ಬೊಬ್ಬಿಱಿದುಮ್, ತ್ರಿಪುಂಡ್ರಮಿಟ್ಟುಮ್, ಕೂಕಿಱಿದುಮ್, ತೇಗಿಯುಮ್, ಪಸಿಗೆವರಿದುಮ್, ಬವಳಿವರಿದುಮ್, ಬಾನಂಗುಳಿಗೆವರಿದುಮ್, ಸೂಳ್ವರಿದುಮ್ ಆಡುವಾಗಳ್ ಉಭಯಬಲಂಗಳ್ ಬೆಕ್ಕಸಂಬಟ್ಟು ನೋಡಿ...)

**ಸೈನಿಕರು:** ಆದ ಮುಳಿಸಿಂದಮ್ ಎಲ್ಲನ್ ತೇದುಮ್ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಚ್ಛೋದಮನೆ ಕುಡಿದು ಮಾಣ್ದ ವೃಕೋದರನ್ ಆವ ತೆಱದೊಳಮ್ ಏನ್ ದೋಷಿಗನೆ. ಮುಳಿಸನ್ ಮಾಡಿದ ಅರಾತಿನಾಥರ ಅಡಗನ್ ಸುಪ್ಪಲ್ಗೆ, ಕೆನ್ನೆತ್ತರನ್ ಕೆನೆಗೊಂಡು ಆಱಿದ ಪಾಲ್ಗೆ, ದೊಂಡೆಗರುಳಮ್ ಕರ್ಬಿಂಗೆ ಲೆಕ್ಕಕ್ಕೆ ತಂದು, ಇನಿಸುಮ್ ಮಾಣದೆ, ಪೀರ್ದು ಪೀರ್ದು ನೋಣೆದು ಅಂತೆ ಈ ಮಾಳ್ಕೆಯಿನ್ ಭೀಮಸೇನನವೋಲ್ ಪೂಣ್ದುದನ್ ಎಯ್ದೆ ಪೂಣ್ದ ಪಗೆಯನ್ ಕೊಂಡಾಡದನ್ ಗಂಡನೇ.

(ಎಂದು ಜರಾಸಂಧಾರಿಯ ಗಂಡವಾತನ್ ಕೊಂಡಾಡುತ್ತಿರೆ, ಭೀಮಸೇನನ್ ಆ ನೆರೆದ ನೆರವಿಗೆ ಇಂತು ಎಂದನ್.)

ಭೀಮ: ಎಲ್ಲರುಮ್ ಕೇಳಿಮ್, ಪೊಲ್ಲದು ಪೂಣ್ದು... ಪುಚ್ಚಳಿಯದೆ ಉರ್ಕಿದ ಕೌರವರನ್ ಪೊರಳ್ಚಿ ಕೊಂದು... ಇಲ್ಲಿಯೆ ವೈರಿಶೋಣಿತಮನ್ ಈಂಟಿ... ತದಂತ್ರದೆ ಕೃಷ್ಣೆಗೆ ಧಮ್ಮಿಲ್ಲಮನ್ ಇಂಬಿನಿಮ್ ಮುಡಿಸಿ... ಕೌರವನಾಯಕನ ಊರುಭಂಗಮ್ ಒಂದಲ್ಲದುದು ಎಲ್ಲಮನ್ ಓಳಿಯೆ ನೆಱಿಪಿದೆನ್ ಗಡ.

(ಎಂದು ನುಡಿದು ಗಜಱಿ ಗರ್ಜಿಸಿ ಕಾಲದಂಡಮನ್ ಪೋಲ್ವ ತನ್ನ ಗದಾದಂಡಮನ್ ಕೊಂಡು ತಿರಿಪಿ ಬೀಸುತ್ತುಮ್ ಬರ್ಪ ಭೀಮಸೇನನ್ ಕರ್ಣನ ಮಗನ್ ವೃಷಸೇನನ್ ಕಂಡು...)



# ೯೩. ವೃಷಸೇನನ ಹೋರಾಟ

(೧೬೧ ನೆಯ ಗದ್ಯದಿಂದ ೧೬೮ ನೆಯ ಪದ್ಯ)

## ಪಾತ್ರಗಳು

ವೃಷಸೇನ: ಕರ್ಣನ ಮಗ.

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ಅರ್ಜುನ: ಪಾಂಡುರಾಜ ಮತ್ತು ಕುಂತಿಯ ಮಗ.

## ವೃಷಸೇನನ ಹೋರಾಟ

ಕಾಲದಂಡಮನ್ ಪೋಲ್ವ ತನ್ನ ಗದಾದಂಡಮನ್ ಕೊಂಡು ತಿರಿಪಿ ಬೀಸುತ್ತುಮ್ ಬರ್ಪ ಭೀಮಸೇನನನ್ ಕರ್ಣನ ಮಗನ್ ವೃಷಸೇನನ್ ಕಂಡು...

**ವೃಷಸೇನ:** ದಡಿಗನ ಮಿಳ್ತುವನ್ ಮಿದಿದೊಡಲ್ಲದೆ ಮಾಣೆನ್.

(ಎಂದು ಕೂರ್ಪು ಉಡುಗದೆ ಬಂದು ತಾಗೆ, ಯಮಳರ್ ತಡೆಗೊಂಡೊಡೆ...)

**ವೃಷಸೇನ:** ತಾವುಮ್ ಎಮ್ಮೊಳಮ್ ತೊಡರ್ದಪರ್.

(ಎಂದು ಅವಂದಿರ ರಥಂಗಳನ್ ಅಚ್ಚುಡಿ ಎಚ್ಚು, ಭೀಮನನ್ ತಡೆಯದೆ ಮುಟ್ಟೆ ಪೆರ್ಚೆ, ಮುರಾಂತಕನ್ ಕಪಿಕೇತನನನ್ ನುಡಿದನ್.)

**ಕೃಷ್ಣ:** ಇವನ ಶರಕಲ್ಪಮ್, ಇವನ ಅದಟು, ಇವನ ಅಳವು, ಇವನ ಅಣ್ಮು ನಿನಗಮ್ ಅಗ್ಗಳಮ್. ಇವನನ್ ಪವನಸುತನ್ ಗೆಲ್ಲನ್. ನೀನ್ ಇವನೊಳ್ ಪೊಣರ್.

(ಎಂದೊಡೆ ಅವನೊಳ್ ಅರಿಗನ್ ಪೊಣರ್ದನ್.)

**ವೃಷಸೇನ:** ಪೊಣರ್ದೊಡಮ್ ಅನುವರಮ್ ಇವನಲ್ಲಿ ಎನಗೆ ನರನೊಳ್ ತೊಣೆವೆತ್ತಪ್ಪುದು.

(ಎಂದು ಅಱಿಕೆಯ ಕೂರ್ಗಣೆಗಳೊಳೆ ಪೂಳ್ದು, ತನ್ನ ಅಳವು ಅಣಿಯರಮ್ ಎನೆ ನಾಲ್ಕು ಶರದೆ ಪಾರ್ಥನನ್ ಎಚ್ಚನ್. ಇಸೆ ನರರಥತುರಂಗಮಂಗಳನ್ ಮುತ್ತಿಮುಸಱಿ ಪರಿಬಂಧಿಸಿದುವು. ಅಂತು ಆರ್ದು ಎಸಗಲ್ ಪೊಣರಲ್ ಮಿಡುಕಲ್ ಮಿಸುಕಲ್ ಅವನ ಸರಲ್ಗಳ್ ಅಣಮ್ ಈಯದಾದುವು. ಆಗಳ್ ಅದನ್ ಕಂಡು

ಪರಸೈನ್ಯಭೈರವನ್ ಮುಕುಂದನನ್ ಇಂತು ಎಂದನ್.)

**ಅರ್ಜುನ:** ಸ್ಯಂದನಬಂಧನಮ್ ಎಂಬುದನ್ ಇಂದು ಈ ವೃಷಸೇನನಿಂದಮ್ ಅಱಿದೆನ್. ಇದನ್ ಮುನ್ನೆ ಎಂದುಮ್ ಕಂಡಱಿಯೆನ್. ಇದರ್ಕೆ ಆನ್ ಬೆಱಗಾದೆನ್ ದಲ್ . ಮುಕುಂದಾ, ಎನಗೆ ಬೆಸಸು.

**ಕೃಷ್ಣ:** ಪರಶುರಾಮನಿನ್ ಕರ್ಣನೆ ಚಾಪವಿದ್ಯೆಯನ್ ಬಲ್ಲನ್. ಕರ್ಣನಿನ್ ಈತನೆ ಬಲ್ಲನ್. ಇವನ ಸರಲ್ ಎನಿತು, ಅನಿತುಮನ್ ಎಡೆವಿಡದೆ ತಱಿದು ತಲೆಯನ್ ತಱಿಯಾ.

(ಎಂಬುದಮ್ ಅಳವಿಗಳಿಯೆ ಬಳೆದು ಪುದುಂಗೊಳಸಿದ ಬಿದಿರ ಸಿಡುಂಬನ್ ಎಡೆಗೊಳೆ ಕಡಿವ ಪೋಡುಗಾಱನಂತೆ ಪರಶು ಚಕ್ರಾಸಿಧೇನುಗಳಿಂದಮ್ ತನ್ನ ತೋಡುಮ್ ಬೀಡಿಂಗಮ್ ರಥಮನ್ ಎಸಗುವ ಮುರಾಂತಕನ ಕೆಯ್ಗಮ್ ಎಡೆಮಾಡಿ, ವಿನಾಯಕನ್ ತನಗೆ ದಯೆಯಿನ್ ಇತ್ತ ಜಯಾಸ್ತ್ರಮನ್ ಭೋಂಕನೆ ದೊಣೆಯಿನ್ ಉರ್ಚಿಕೊಂಡು ಶರಾಸನದೊಳ್ ಅಂತು ಅದನ್ ಆಗಡೆ ಪೂಡಿ, ಧಾತ್ರಿ ತಿಱ್ರನೆ ತಿರಿವನ್ನೆಗಮ್ ತೆಗೆದು ಎಳೆದು, ಕಂಧರ ಸಂಧಿಯನ್ ಎಯ್ದೆ ನೋಡಿ, ತೊಟ್ಟನೆ ನರನ್ ಎಚ್ಚೊಡೆ, ವೈರಿಶಿರಸ್ಸರೋರುಹಮ್ ಉಚ್ಚಳಿಸಿ ಬಿಳ್ದುದು.)



# ೯೪. ಕರ್ಣಾರ್ಜುನರ ಕಾಳೆಗ

(೧೬೯ ನೆಯ ಗದ್ಯದಿಂದ ೨೧೮ ನೆಯ ಪದ್ಯ)

## ಪಾತ್ರಗಳು

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಕರ್ಣ:** ಅಂಗರಾಜ್ಯದ ಒಡೆಯ.

**ಶಲ್ಯ:** ಮದ್ರ ದೇಶದ ರಾಜ. ಪಾಂಡವರ ಮತ್ತು ಕೌರವರ ಸೋದರ ಮಾವ.

**ಅಶ್ವಸೇನ:** ಒಂದು ಹಾವು.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

## ಕರ್ಣಾರ್ಜುನರ ಕಾಳೆಗ

ಅಂತು ನೋಡೆ... ನೋಡೆ... ತನ್ನ ಪಿರಿಯ ಮಗನಪ್ಪ ವೃಷಸೇನನನ್ ಅಂತಕನ ಅಣಲೊಳ್ ಅಡಸಿ, ತನ್ನುಮನ್ ಅಣಲೊಳ್ ಅಸಡಲೆಂದು ಇರ್ದ ವಿಕ್ರಮಾರ್ಜುನನನ್ ನೋಡಿ ಮಗನ ಅಳಲ್ ಒಂದು; ಭೂಪತಿಯ ತಮ್ಮನೊಳ್ ಆದ ಅಳಲ್ ಒಂದು; ನೊಂದು ಬಿನ್ನಗೆ ಮೊಗದಿಂದೆ ಕುಂದಿ ಫಣಿಕೇತನನ್ ಇರ್ದ ಅಳಲ್ ಒಂದು; ತನ್ನನ್ ಆವಗೆಯ ಉರಿ ಅಳ್ವವೋಲ್ ಅಳುರೆ, ತನ್ನ ನೆಗಳ್ತೆಗೆ ಮುಯ್ವನಾಂತು ಮುನ್ ಪೊಗಳಿಸಿ ಬಳ್ದುದನ್ ನೆನೆದು, ಕರ್ಣನ್ ಅಸುಂಗೊಳೆ ಬಂದು ತಾಗಿದನ್.

ಅಂತು ಬಂದು ತಾಗಿದಾಗಳ್ ಉಭಯಸೈನ್ಯ ಸಾಗರಂಗಳೊಳ್ ಬಧಿರಿತ ಸಮಸ್ತ ದಿಕ್ತಟಮ್, ಅಧರಿತ ಸರ್ವೇಭ್ಯ ಗರ್ಜಿತಮ್, ಕ್ಷುಭಿತಾಂಭೋನಿಧಿ ಸಲಿಲಮ್, ಧುರ ವಿಧಾನ ಪಟುಪಟಹ ಕಹಳ ಭೇರೀರಭಸಮ್ ಪರೆದುದು. ಧುರದೊಳ್ ಹರಿಯುಮ್ ಶಲ್ಯನುಮ್ ನರನ ದಿನಪತನಯನ ರಥಮನ್ ಆದರದಿನ್ ಚೋದಿಸೆ, ಆದಿತ್ಯನ ಸಾರಥಿ ಬೆಱಗಾದನ್. ಮಾತಾಳಿ ಮಾತುಗೆಟ್ಟನ್. ಅಂತು ಇರ್ವರುಮ್ ಒರ್ವರ್ ಒರ್ವರನ್ ಮುಟ್ಟೆವಂದಲ್ಲಿ, ವಿಕ್ರಾಂತತುಂಗನ್ ಅಂಗಾಧಿರಾಜನನ್ ಇಂತು ಎಂದನ್.

**ಅರ್ಜುನ:** ನಿನ್ನನ್ ದುರ್ಯೋಧನನ್ ಪಿರಿದು ಪೊರೆದನ್. ನಿನಗೆ ಎನ್ನೊಳಮ್ ಕಲುಷಮ್ ಪಿರಿದು. ಕರ್ಣಂಗೆ ಭಾರತಮ್ ಒಡ್ಡಿತ್ತು. ನಿನಗಮ್ ಏನ್ ಬೆಸನ್ ಪಿರಿದು. ರಾಗಮ್ ಮಿಕ್ಕಿರ್ದ ಅಗುರ್ವಿನ ಸೂನು ನಿರ್ನೆರಮ್ ಅಳಿಯೆಯುಮ್ ನೋಡುತ್ತೆ ಇಂತು ಇರ್ದೆ. ಇರ್ಪುದು ಪಾಳಿಯೇ. ಎನ್ನ ಪೆಸರ್ ಕೇಳ್ದು ಸೈರಿಸದನ್, ನಯದೆ ಈಗಳ್ ಎನ್ನ ರೂಪನ್ ಕಂಡುಮ್, ನಿನ್ನ ಅರಸನ ಅಣುಗದಮ್ಮನ, ನಿನ್ನ ತನೂಭವನ ಸಾವುಗಂಡುಮ್ ಮಾಣ್ಬಾ. ಭಯಮ್ ಏಕೆ

ಅಕ್ಕುಮ್. ಅದು ಎಂತುಟು ಎಂದು ಅದಟುಮನ್ ಪೆರ್ಮಾತುಮನ್ ಈ ಭೂತಧಾತ್ರಿಯೊಳ್ ಮುನ್ನೆ ಓರಂತೆ ನೆಗಳ್ಚಿ, ಬಳಿಯಮ್ ಕಾನೀನ, ನೀನ್ ಈ ಮಹಾಜಿಯೊಳ್ ಎನಗೆ ಅಂಜಿ ಇಂತು ಏನ್ ಮಾಣ್ದೆ. ಪೆಱತೇನ್ ಪೋ ಅಣ್ಣ **'ಮಾತು ಲೇಸು ಸೆಟ್ಟಿಯ ಬಳ್ಳಮ್ ಕಿಱಿದು'** ಎಂಬುದೊಂದು ನುಡಿಯನ್ ನೀನ್ ನಿಕ್ಕುವಮ್ ಮಾಡಿದಯ್. ಪೆಸರ್ ಎಸೆಯೆ ಬೀರಮನ್ ಪಾಡಿಸಿಯುಮ್ ಪೊಗಳಿಸಿಯುಮ್ ಉರ್ಕಿ ಬಿಳ್ದು, ಆಹವದೊಳ್ ಕುಸಿದು ಪೆಱಪಿಂಗೆ, ಪೇಳ್ ಮಾನಸರ್ ಇನ್ನೂಱು ವರ್ಷಮನ್ ಏನ್ ಬಳ್ದಪರೇ.

(ಎಂದ ನೃಪಪರಮಾತ್ಮನ ಪಾಳಿಯ ಪಸುಗೆಯ ನುಡಿಗೆ ಪರಮಾರ್ತನಾಗಿ ತನ್ನನ್ ಉದ್ಘಾಟಿಸಿ ನುಡಿದೊಡೆ, ಉಮ್ಮಚ್ಚದೊಳ್ ಮೆಚ್ಚದೆ ದರಹಸಿತವದನಾರವಿಂದನಾಗಿ ದಶಶತಕರತನೂಜನ್ ಇಂತು ಎಂದನ್...)

**ಕರ್ಣ:** ಎಳೆಯನ್ ಮುನ್ ಕೋಳ್ಪಟ್ಟುಮ್, ಬಳೆದೊಟ್ಟುಮ್, ಮುಟ್ಟು ಗೆಟ್ಟುಮ್ ಇರ್ದು, ಈಗಳ್ ಬಳ್ವಳನೆ ನುಡಿದಪುದೆ. ನುಡಿವಂತೆ ಅಳವುಮ್ ಪೆರ್ಮಾತುಮ್ ಆಯಮುಮ್ ನಿನಗಾಯ್ತೇ. ಮದೀಯ ನಾಥನ್ ನಿಮ್ಮನ್ ಏಳ್ಕಟ್ಟಿಮ್ ಎಳೆದು ನಾಳ್ಕಡಿಗಳಿದೊಡೆ, ಬೇರನ್ ಬಿಳ್ಕೆಯನೆ ತಿಂದ ದೆವಸದೊಳ್ ಅಳ್ಕಾಡಿದ ಬೀರಮ್ ಈಗಳ್ ಏನ್ ಪೊಸತಾಯ್ತೇ. ಮತ್ ತನಯನ, ಅರಸನನುಜನ ಸತ್ತ ಅಳಲನ್ ನಿನ್ನೊಳ್ ಅಱಿಸಲೆಂದು ಇರ್ದೆನ್. ಬೆಳ್ಕುತ್ತು ಇರ್ದೆನಪ್ಪೊಡೆ ಏನ್ ತೊದಳ್. ಇತ್ತಣ ದಿನನಾಥನ್ ಇತ್ತ ಮೂಡುಗುಮ್ ಅಲ್ತೇ.

ಕಸವರದ ಸವಿಯುಮನ್, ಭಯರಸಕದ ಸವಿಯುಮನ್ ಅದೆಂತು ಆನ್ ಅಱಿಯದುದನ್ ವಸುಮತಿ ಅಱಿವುದು. ನೀನ್ ಪುರುಡಿಸಿ ನುಡಿದೊಡೆ, ನಿನ್ನ ನುಡಿದ ಮಾತು ಏಱುಗುಮೇ. ಒಡಲುಮ್ ಪ್ರಾಣಮುಮ್ ಎಂಬ ಇವು ಕಿಡಲ್ ಆದುವು. ಜಸಮ್ ಅದೊಂದೆ ಕಿಡದು. ಅದನ್ ಆನ್ ಬಲ್ವಿಡಿವಿಡಿದು ನೆಗಳ್ದೆನ್. ಉಳಿದ ಅಳಿವಡೆ ಮಾತನ್ ಮಾಡಿ, ನೀನೆ ಕೆಮ್ಮನೆ ನುಡಿವಯ್. ಪುಟ್ಟುವುದು ಬಿದಿ ವಸದಿಂದೆ. ಬಿದಿ ಪುಟ್ಟಿಸುವನ್. ಪುಟ್ಟಿದಂದು ಇವಂಗೆ ಬಿಯಮ್ ಇದು; ಇವಂಗೆ ಒಳ್ಪು ಇದು; ಇವಂಗೆ ವಿನೋದಮ್ ಇದು; ಇವಂಗೆ ಸಾವ ಪಾಂಗು ಇದು; ಇವಂಗೆ ಪಡೆಮಾತು ಇದು; ಪರಾಕ್ರಮಮ್ ಇದು

ಎಂಬುದನ್ ಎಲ್ಲ ಮಾಳ್ಕೆಯಿನ್ ಬಿದಿ ಸಮಕಟ್ಟಿ ಕೊಟ್ಟೊಡೆ, ಎಡೆಯೊಳ್ ಕಿಡಿಸಲ್ ಕುಡಿಸಲ್ ಆರ್ ಸಮರ್ಥರ್. ಅಮ್ಮ, ಈ ಬಾಯ್ ಮಾತಿನೊಳ್ ಏವಂದಪುದು. ಅಣ್ಮಿ ಕಾದುಕೊಳ್.

(ಎನುತಮ್ ಭೋರೆಂದು ಇಸೆ, ಪೊಸಮಸೆಯಂಬಿನ ತಂದಲ ಬೆಳ್ಸರಿಗಳ್ ನರನನ್ ಕವಿದುವು. ದೊಣೆಗಳಿನ್ ಉರ್ಚುವ, ತಿರುವಾಯ್ಪೊಣರ್ಚಿ ತೆಗೆನೆಱೆವ ಬೇಗಮನ್ ಕಾಣದೆ ದೇವಗಣಮ್ ಇನಸುತನಾ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು. ಪಾತಮ್, ಲಕ್ಷ್ಯಮ್, ಶೀಘ್ರಮ್, ಘಾತಮ್, ಬಹುವೇಗಮ್ ಎಂಬ ಇವು ಅಯ್ದು ಏಸಿನೊಳಮ್ ಅಂತು ಈತನ ದೊರೆಯಿಲ್ಲ. ಆತನ ಬಿಲ್ಬಲ್ಮೆ ಅಂಬರತಲದೊಳ್ ಸುರರಿನ್ ಎನಿಸಿದುದು. ಆಗಳ್ ಪರಸೈನ್ಯಭೈರವನ್ ಪ್ರಳಯಭೈರವಾಕಾರಮನ್ ಕೆಯ್ಕೊಂಡು ಕಾದೆ, ಶರಸಂಧಾನಾಕರ್ಷಣ ಹರಣಾದಿ ವಿಶೇಷ ವಿವಿಧ ಸಂಕಲ್ಪ ಕಳಾ ಪರಿಣತಿಯನ್ ಅರಿಗನ್ ಮುಳಿದು ತರತರದೊಳೆ ಇಸುವ ಶರನಿಕರಂಗಳ್ ಮೆಱೆದುದು.

ಮುನಿದು ಇಸುವ ಇನಜನ ಸರಲನ್ ಮೊನೆಯಿನ್ ಗಱಿವರೆಗಮ್ ಎಯ್ದೆ ಸೀಳ್ದುವು. ಕಣೆಗಳ್ ಘನಪಥಮನ್ ಅಳುರ್ದು ಸುಟ್ಟಪುವು ಎನೆ ಕೋಲಪೊಗೆಯುಮ್ ಅಂಬಿನ ಕಿಡಿಯುಮ್ ನೆಗೆದುವು. ಕೂಡೆ ಕಡಿವ ಅಂಬನ್ ಅಂಬು ಎಡೆಮಾಡದೆ ಬಿಡದೆ ಒರಸೆ ಪುಟ್ಟಿದ ಉರಿಗಳ್ ಅಗುರ್ವಮ್ ಮಾಡೆ, ಕವಿದು ಅಳುರ್ವ ಬೆಂಕಿಯೊಳ್ ಅಮರ ಸುಂದರಿಯರ್ಕಳ್ ಮೊಗಮನ್ ಆಡಿಸಿದರ್. ಮೊನೆಯಂಬಿನ ತಂದಲೊಳ್ ಅರ್ಜುನನನ್ ಕರ್ಣನುಮನ್ ಇನಿಸು ಕಾಣದೆ, ಅಣಮ್ ಮೆಲ್ಲನೆ ಬಗಿದು ನೋಡಿ, ಕುಡುಮಿಂಚಿನಂತೆ ಮೇಗೆ ಒಗೆದು ನಾರದನ್ ನರ್ತಿಸಿದನ್. ಕವಿವ ಶರಾಳಿಯನ್ ನಿಜಶರಾಳಿಗಳ್ ಅಳ್ವಿ ತೆರಳ್ದಿ ತೂಳ್ದಿ ಮಾರ್ಕವಿದು, ಪಳಂಚಿ ಹಾಯ್ದು, ಒರಸೆ ಪುಟ್ಟಿದ ಕಿರ್ಚು ಅಳರ್ದು ಎಳ್ದು, ಅಜಾಂಡದ ಅಂತುವರಮ್ ಅಗುರ್ವು ಪರ್ವಿ, ದಳ್ಳುರಿ ಪೆರ್ಚಿ, ಕರಮ್ ಅರ್ವಿಸೆ ಕಂಡು ಗುಣಾರ್ಣವನ ಅಸ್ತ್ರಕೌಶಲಮ್ ಖಾಂಡವವನದಾಹಮನ್ ನೆನೆಯಿಸಿತ್ತು. ಆಗಳ್ ಮದ್ರರಾಜನ್ ಅಂಗಾಧಿರಾಜನನ್ ಇಂತು ಎಂದನ್.)

**ಶಲ್ಯ:** ಈ ಅಂಬುಗಳೊಳ್ ಏನ್ ತೀರ್ದಪುದು. ದಿವ್ಯಾಸ್ತ್ರಂಗಳಿಂದೆ ಎಚ್ಚು. ಪಗೆಯನ್ ಸಾಧ್ಯಮ್ ಮಾಡು.

(ಎಂಬುದುಮ್ ಕೊಂತಿಗೆ ತನ್ನ ನುಡಿದ ನುಡಿವಳಿಯನ್ ನೆನೆದು, ಪುರಿಗಣೆಯ ದೊಣೆಗೆ ಕೆಯ್ಯನ್ ನೀಡದೆ, ರೌದ್ರತರದ ದೊಣೆಗೆ ಕೆಯ್ಯನ್ ನೀಡಿದಾಗಳ್, ಮುಳಿಸನ್ ನೆಱಪಲ್ಕೆ ವಿಸ್ಫುಲಿಂಗ ಪಿಂಗಲಿತ ಭುವನ ಭವನ ಆಭೋಗಮ್ ಅರ್ಧಾವಲೀಕ ಶರರೂಪದಿಂದೆ ದೊಣೆಯಿಂದ ತಾನ್ ಪೊಳೆದು ಅಸುಂಗೊಳೆ ಕಯ್ಗೆ ಬರೆ, ಅದನ್ ತಿರಿಪಿದೊಡೆ ಇಳೆ ತಿಱ್ರನೆ ತಿರಿದುದು. ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್. ಭರದೆ ತೆಗೆನೆಱೆಯೆ ಕಿವಿವರೆಗೆ ಮೆಯ್ದೆಗೆದ ಅರವಿಂದೋದ್ಭವನಿನ್ ಆ ಬ್ರಹ್ಮಾಂಡಮ್ ಒಗೆದುದು. ಅದನ್ ಕರ್ಣನ್ ತುಡೆ, ಸುಯೋಧನನ ಸಕಲ ರಾಜ್ಯಶ್ರೀಯುಮ್ ನಡನಡನಡುಗಿ ಸಡಿಲಿಸಿದ ತೋಳನ್ ಸಡಿಲಿಸಲ್, ಆಗಳ್ ಅಣ್ಮಳೆ ದಲ್, ಅದಱ ಅಗುರ್ವು ಏನ್ ಪಿರಿದೋ. ಆ ಕರ್ಣನ್ ಆ ಕರ್ಣಾಂತಮ್ ತೆಗೆ ನೆಱೆದು ಇಸಲ್ಕೆ ಬಗೆದೊಡೆ...)

**ಶಲ್ಯ:** ಉಡುಗು... ಉಡುಗು... ಇಸಲ್. ಈ ಭೀಕರ ಬಾಣಮನ್ ಆದ ವಿವೇಕದೆ ಉರದೆಡೆಗೆ ತುಡದೆ ತಲೆಗೆಯೆ ತುಡುವಾ... ಉರದೆಡೆಗೆ ತುಡೆ, ಜಯಶ್ರೀಗೆ ಇರಲ್ ಎಡೆ ನಿನಗಪ್ಪುದು. ಆ ಸುಯೋಧನನೊಳ್ ಶ್ರೀಗೆ ಇರಲ್ ಎಡೆಯಪ್ಪುದು ಮೇಣ್ ದಿನಕರಸುತ, ತೊದಲುಂಟೆ... ಬಗೆಯ ಸಂದೆಯಮುಂಟೇ.

(ಎಂಬುದುಮ್, ಶಲ್ಯನ ನುಡಿದ ನುಡಿಯನ್ ಅವಧಾರಿಸಿ, ತನ್ನ ಮನದೊಳೆ ಕರ್ಣನ್ ಇಂತು ಎಂದನ್.)

**ಕರ್ಣ:** ಎನಿತುಮ್ ಶಲ್ಯನ ಪೇಳ್ದ ಪಾಂಗೆ ತೊದಳಿಲ್ಲ. ಅಂತಾದೊಡೆ ಆ ಶಕ್ರಪುತ್ರನನ್ ಆನ್ ಕೊಂದೊಡೆ, ಧರ್ಮಪುತ್ರನ್ ಅಳಿಗುಮ್. ತಾಯೆಂದೆ ಮುನ್ ಕೊಂತಿ ಬಂದು ಎನ್ನನ್ ಇನಿಸನ್ ಪ್ರಾರ್ಥಿಸಿ ಪೋದಳ್. ಅದನ್ ಆನ್ ಮಾಣ್ದು ಇರ್ದೆನ್. ಇರ್ದಾಗಳ್ ಒಳ್ಪಿನ ಪೆರ್ಮಾತಿನ ನನ್ನಿ ಬನ್ನದೊಳ್ ಒಡಂಬಟ್ಟು ಇರ್ಪುದನ್ ಮಾಳ್ಪೆನೇ. ತನಗೆ ಉಱುವಂತುಟಾಗೆ ಕಡು ನನ್ನಿಯ ಪೆಂಪುಮನ್ ಆಂತು ಭೂಭುಜರ್ ತನಗೆ ಇನಿತು ಊನಮಾಗೆ ಮೆಱೆದ ಆ

ಭುಜವೀರ್ಯಮನ್ ಆಂತು ಮಾಣ್ಬುದೇ. ತನಗುಱುವ ನನ್ನಿಯನೆ ಪೂಣ್ದು, ಪಿರಿದುಮ್ ಬಲಸ್ಥನಪ್ಪನನೆ ಕಱುತ್ತು ಕಾದಿ ನೆಗಳ್ದಾತನೆ ನನ್ನಿಯ ಬೀರದ ಆಗರಮ್. ಪಾಂಡವರ್ ಎನ್ನನ್ ಇನ್ನುಮ್ ಅಱಿಯರ್. ನೀಮ್ ಅಱಿಪಲ್ ಎಂದು ಚಕ್ರಿಗೆ ಆನ್ ಅಱಿಪಿರ್ದೆನ್. ಪೃಥೆಯುಮ್ ಮದೀಯ ಸುತರೊಳ್ ವೈಕರ್ತನನ್ ನನ್ನಿಯನ್ ನಿಱಿಸಲ್ಕೆ ಅಮೋಘಮ್ ಆರ್ಕುಮ್ ಎಂದು ಮನದೊಳ್ ನಂಬಿರ್ದಳ್. ಇನ್ ಪೆಂಪು ಎಱಿಕಂಬೆತ್ತಿರೆ, ಎನ್ನ ನುಡಿಯನ್ ಕೆಯ್ಕೊಂಡ ಕಟ್ಟಾಯಮನ್ ಕಾವೆನ್.)

(ಎಂಬುದನೆ ಬಗೆದು, ಪೆಱತನ್ ಅಣಮ್ ಬಗೆಯದೆ, ಮದ್ರಪತಿಯನ್ ಎಂದನ್ ಕರ್ಣನ್.)

**ಕರ್ಣ:** **'ಮುನ್ ತೊಟ್ಟ ಅಂಬನ್, ಅದನ್ ಉಗಿದು, ಭಯದಿನ್ ಕುಂದಿಸಿದನ್'** ಎಂದು ಲೋಕಮ್ ನಗದೇ.

(ಉಡುಗು... ಉಡುಗು... ಉಡುಗು... ಎಂದು ಇಸೆ, ಬಱಿಸಿಡಿಲ್ ಎಱಿಪಂತೆ ಎಱಿಪ ಸರಲ ಬರವನ್ ಕಂಡು, ಆಗಡೆ ಚಕ್ರಿ ನರರಥಮನ್ ನೆಲನೊಳ್ ಎಣ್ಬೆರಲ್ ಅಡಂಗೆ ನಿಪುಣತೆಯಿನ್ ಒತ್ತಿದನ್. ಒತ್ತುವುದನ್ ಶರ ಇರದೆ ಎಯ್ದುತ್ತೆ ಕಿರೀಟಿಯ ಕಿರೀಟಮನ್ ಕೊಱೆದೊಡೆ, ಭಯಮ್ ಇಂದ್ರನನ್ ಪರ್ವಿತ್ತು. ಆಗಳ್ ಆ ಸಂಕಟದೊಳ್ ಅಳಲ್ ಈಶ್ವರನನ್ ಮುತ್ತಿತ್ತು. ಒಳಗಱಿಯದೆ ಕೌರವಬಲಜಳನಿಧಿ ಬೊಬ್ಬಿಱಿದು ಮೇಲುದಮ್ ಬೀಸಿದೊಡೆ, ಉಚ್ಚಳಿಸಿದ ಮಕುಟದ ಮಣಿಗಳ ಪೊಳೆಪುಗಳಿಂದೆ ಎಂಟುಮ್ ದೆಸೆಯೊಳ್ ಉಳ್ಕಮ್ ಎಳ್ದುವು. ಅಂತು ರುಂದ್ರ ನೀಳಾದ್ರಿ ಇಂದ್ರರತ್ನಕೂಟಾಗ್ರಮ್ ಉದಗ್ರ ವಜ್ರಘಾತದಿಂದ ಉರುಳ್ವಂತೆ ರತ್ನಮಕುಟಮ್ ಅರಾತಿ ಶಾತ ಶರದಿನ್ ಉರುಳ್ವುದುಮ್, ಅಳಿ ನೀಲೋಜ್ಜ್ವಳ ಸಹಸ್ರ ಕುಂತಳಂಗಳ್ ಪರಕಲಿಸಿ ಬಂದು ಪೊಱಮುಯ್ವನ್ ಅಳ್ಳಿಱಿಯೆ, ಪಚ್ಚುಗಂಟಿಕ್ಕಿ ಗಾಂಡೀವಧನ್ವಮ್ ಸನ್ನದ್ಧನಾಗಿ ಇರ್ಪನ್ನೆಗಮ್...)

**ಅಶ್ವಸೇನ ಹಾವು:** (ತನ್ನಲ್ಲಿಯೇ)

ಪುರಿಗಣೆಯಪ್ಪ ಕಾರಣದಿನ್ ಅಂತು ಅದು ತಪ್ಪಿದೆನ್.

(ಎಂದು ನೊಂದು ಪಲ್ಮೊರೆದು ಅಹಿರೂಪದಿನ್ ಮಗುಳ್ದು ಇನ ನಂದನನಲ್ಲಿಗೆ ಬಂದು...)

ಎನ್ನನ್ ಅಂತರಿಸದೆ ತೊಟ್ಟು ಬೇಗಮ್ ಇಸು. ರಸಾಂಬರ ಧರಣೀ ವಿಭಾಗದೊಳಗೆ ಆವ ಎಡೆ ಪೊಕ್ಕೊಡಮ್ ಅಂಗನಾಯಕಾ, ವೈರಿಯನ್ ಈಗಳೆ ಕೊಂದಪೆನ್.

**ಕರ್ಣ:** ನೀನ್ ಆರ್ಗೆ... ಏನ್ ಎಂಬೆ... ಅದಾವುದು ಕಾರಣದಿಂದಮ್ ಎನ್ನ ದೊಣೆಯನ್ ಪೊಕ್ಕಿರ್ದೆ.

**ಅಶ್ವಸೇನ:** ಆನ್ ಅಶ್ವಸೇನನ್ ಎಂಬ ಪನ್ನಗನೆನ್.

(ಎಂದು ತನ್ನ ವೈರ ಕಾರಣಮನ್ ಅಱಿಯೆ ಪೇಳ್ದೊಡೆ ದರಹಸಿತವದನಾರವಿಂದನಾಗಿ...)

**ಕರ್ಣ:** ಶರರೂಪದೊಳಿರೆ ನಿನ್ನನ್ ಆನ್ ಶರಮೆಂದು ತೊಟ್ಟೆನ್. ಅಱಿದು ನಿನ್ನನ್ ತುಡುವೆನೆ. ನೆರದೊಳ್ ಕೊಲ್ವಂತೆ ನನಗೆ ಗಾಂಡೀವಧನ್ವನ್ ಏನ್ ಅರಿಯನೆ.

(ಎಂಬುದುಮ್ ಆಗಳ್...)

**ಕರ್ಣ:** ನೀನ್ ನಿನ್ನ ಪಗೆಯನ್ ಆರ್ಪೊಡೆ ಅದನ್ ನೆಱಿಪು.

(ಎನೆ, ನೆಗೆದು ಬರ್ಪ ವಿಷಪನ್ನಗನನ್ ಪನ್ನತನ್ ಅರಿಗನ್ ಎಡೆಯೊಳ್ ತನ್ನಯ ಗರುಡಾಸ್ತ್ರದಿಂದೆ ಕುಱಿದಱಿದಱಿದನ್. ಆಗಳ್ ಅಂಗರಾಜಂಗೆ ಶಲ್ಯನ್ ಕಿನಿಸಿ ಮುಳಿಸಿನೊಳೆ ಕಣ್ಣಾಗಣದೆ...)

**ಶಲ್ಯ:** ಇಂತಪ್ಪ ಏಕಗ್ರಾಹಿಗಮ್ ಒರಂಟಂಗಮ್ ರಥಮನ್ ಎಸಗೆನ್.

(ಎಂದು ವರೂಥದಿಂದ ಇಳಿದು ಪೋಗೆ...)

**ಕರ್ಣ:** (ತನ್ನಲ್ಲಿಯೇ)

ಅರಿಗನ ಬಟ್ಟಿನಂಬುಗಳ ಬಲ್ಸರಿ ಸೋಂಕುಗುಮ್ ಏಳಿಮ್. ಎನ್ನ ತೋಳ್ ನೆರಮ್ ಎನಗೆ, ಎನ್ನ ಬಿಲ್ಲೆ ನೆರಮ್.

(ಎಂದು ವರೂಥತುರಂಗಮಂಗಳನ್ ತುರಿಪದೆ ತಾನೆ ಚೋದಿಸುತಮ್, ಆರ್ದು ಇಸುತುಮ್ ಕಡುಕೆಯ್ದು ಕಾದೆ, ಭೀಕರ ರಥಚಕ್ರಮನ್ ಧಾತ್ರಿ ಕೋಪದಿನ್ ಪಿಡಿದು ನುಂಗಿದಳ್. ಅಂತು ತನ್ನಮ್ ಮುನ್ನೆ ಮುಯ್ಯೇಳ್ ಸೂಳ್ವರಮ್ ಒಲ್ಲಣಿಗೆಯನ್

ಪಿಳಿವಂತೆ ಪಿಂಡಿ ಪಿಳಿದ ಪಗೆಗೆ ರಥಚಕ್ರಮನ್ ನುಂಗುವುದುಮ್, ರಥದಿಂದ ಇಳಿದು ಗಾಲಿಯನ್ ಎತ್ತುವಾಗಳ್....)

**ಕೃಷ್ಣ:** ಇವನನ್ ಈ ಪದದೊಳ್ ಕಡಿದೊಟ್ಟದಾಗಳ್ ಗೆಲಲ್ ಆಱಿ.

(ಎಂದು ನುಡಿದ ಮುಕುಂದನ ನುಡಿಗೆ ಕೊಕ್ಕರಿಸಿ, ಜಗದೇಕಮಲ್ಲನ್ ಇಂತು ಎಂದನ್.)

**ಅರ್ಜುನ:** ಬಱುವನ್... ಸಾರಥಿಯಿಲ್ಲ... ಮೆಯ್ಗೆ ಮಱೆಯುಮ್ ತಾನಿಲ್ಲ. ಅದು ಎಂತು ಈಗಳ್ ಆನ್ ಇಱುವೆನ್. ನೋಡಿರೆ... ಮತ್ತಮ್ ಒಂದನ್ ಇಸಲುಮ್ ಕೈಯ್ ಏಳದು... ಏಕೆ ಎಂದುಮ್ ಆನ್ ಅಱಿಯೆನ್... ಕೂರ್ಮೆಯೆ ಮಿಕ್ಕು ಬಂದಪುದು... ಇದರ್ಕೆ ಏನ್ ಗೆಯ್ವೆನ್... ಏನ್ ಎಂಬೆನ್... ಆನ್ ಮುನ್ನಿನ ವೈರಮನ್ ಮಱೆದೆನ್... ಇದಿಂತು ಭೂಧರಾ ಏನ್ ಕಾರಣಮ್.

(ಎಂಬುದುಮ್)

**ಕೃಷ್ಣ:** (ತನ್ನ ಮನದಲ್ಲಿ)

ಎನಿತು ಅಱಿಯದಿರ್ದೊಡಮ್ ಸೋದರಿಕೆಯೆ ಮಿಕ್ಕು ಬರ್ಕುಮಾಗದೆ.

(ಎಂದು ತನ್ನ ಅಂತರ್ಗತದೊಳ್ ಬಗೆದು, ಅಸುರಾಂತಕನ್ ಇಂತು ಎಂದನ್.)

**ಕೃಷ್ಣ:** ನೆಗಳ್ದ ಅಭಿಮನ್ಯುವನ್ ಚಲದಿನ್ ಅಂದು ಇಱಿದು, ನಿಜಾಗ್ರಜಾತನನ್ ಸುಗಿವಿನಮ್ ಎಚ್ಚು, ಬೀರದೊಳೆ ಬೀಗುವ ಸೂತಸುತಂಗೆ ನೀನುಮ್ ಆಜಿಗೆ ಸೆಡೆದಿರ್ದೆಯಪ್ಪೊಡೆ ಇರು, ಚಕ್ರನಿಘಾತದಿನ್ ಇಕ್ಕಿ, ಬೀರಮ್ ಉರ್ವಿಗೆ ಪಡಿಚಂದಮಾಗೆ ತಱಿದೊಟ್ಟಿ, ಜಯಾಂಗನೆಗೆ ಆಣ್ಮನ್ ಆದಪೆನ್.

(ಎಂಬ ಅನ್ನೆಗಮ್ ಧರಾತಳಮ್ ಅಳರೆ, ರಥದ ಗಾಲಿಯನ್ ಕಿಳ್ತು, ಮತ್ತಮ್ ರಥಮನ್ ಅಪ್ರತಿರಥನ್ ಏಱಿ, ನಿಟ್ಟಾಲಿಯಾಗೆ ಮುಟ್ಟಿವಂದು ಕಿಡಿಗುಟ್ಟೆ ಮರ್ಮೋದ್ಘಾಟನಂಗೆಯ್ದು ಕಾದುವಾಗಳ್, ಕಪಿಧ್ವಜನ್ ವನದಂತಿಯಂತೆ ಧ್ವಾಂಕ್ಷಧ್ವಜಮನ್ ಉಡಿದು ಕೆಡೆವಿನಮ್ ಎಚ್ಚಾಗಳ್ ಪಳಯಿಗೆ ಬಿಳ್ದೊಡೆ, ಬೀರದ

ಪಳವಿಗೆಯನ್ ನಿಱಿಸಲೆಂದೆ ಹರಿವಕ್ಷಮನ್ ಅಳ್ದು ಅಳಿವೋಗೆ ಎಚ್ಚು ಮುಳಿಸು ಅವಗಳಿಯಿಸುತಿರೆ, ನರನ ಬಿಲ್ಲ ಗೊಣೆಯುಮನ್ ಎಚ್ಚನ್. ಬೆಳಗುವ ಸೊಡರ್ಗಳ ಬೆಳಗು ಪೋಪ ಪೊಳ್ತಱೊಳ್ ಅಗ್ಗಳಿಸುವವೊಲ್ ದಿನಪಸುತನ್ ಅಸ್ತಮಯ ಸಮಯದೊಳ್ ತೇಜಮ್ ಪಜ್ಜಳಿಸೆ ತಳತಳಿಸಿ ತೊಳ ತೊಳ ತೊಳಗಿದನ್.

ಅಂತು ಕರ್ಣ ನಿಶಿತ ವಿಕರ್ಣಹತಿಯಿಂದಮ್ ಅಸುರಾಂತಕನ್ ಕಳಿಯೆ ನೊಂದು, ಕಸೆಯನ್ ಬಿಟ್ಟು, ಅಭಿಮಂತ್ರಿಸಿ ಚಕ್ರಮನ್ ಅಸುರವೈರಿ ಇಡುವಾಗಳ್, ಬಾರಿಸಿ, ಪೆಱತು ಗೊಣೆಯದಿಂದೆ ಬಿಲ್ಲನ್ ಏಱಿಸಿ ತ್ರಿಭುವನಂಗಳ್ ಅಳ್ಳಾಡುವಿನಮ್, ಮುನ್ನಮ್ ಇಂದ್ರಕೀಲನಗೇಂದ್ರದೊಳ್ ಪಶುಪತಿಯನ್ ಆರಾಧಿಸಿ ಪಾಶುಪತಾಸ್ತ್ರಮ್ ಪಡೆದಂದು ತೆಲ್ಲಂಟಿಯೆಂದು ಗಿರಿಜೆಯ ಮೆಚ್ಚಿ ಕೊಟ್ಟ ನಿಶಿತಾಸ್ತ್ರಮನ್ ಅಂಜಲಿಕಾಸ್ತ್ರಮನ್ ಭಯಂಕರತರಮಾಗೆ ಕೊಂಡು ವಿಧಿಯಿಂದೆ ಅಭಿಮಂತ್ರಿಸಿ ಬಿಲ್ಲೊಳ್ ಪೂಡೆ, ಉರ್ವರೆ ನಡುಗಿತ್ತು; ಅಜಾಂಡಮ್ ಒಡೆದತ್ತು; ನೆಲನ್ ಪಿಡುಗಿತ್ತು; ಸಪ್ತಸಾಗರಮ್ ಉಡುಗಿತ್ತು. ಕದನತ್ರಿಣೇತ್ರನಾ ಸಾಹಸಮ್ ಅದೇನ್ ಪಿರಿದೋ. ಆಗಳ್ ಅಖಿಲ ಭುವನ ಭವನ ಸಂಹಾರಕಮಪ್ಪ ಅಂಜಲಿಕಾಸ್ತ್ರಮನ್ ಅಮೋಘಾಸ್ತ್ರಧನಂಜಯನ್ ಆಕರ್ಣಾಂತಂಬರಮ್ ತೆಗೆದು, ಆ ಕರ್ಣಾಂತಮ್ ಮಾಡಲ್ ಬಗೆದು, ಕಂಧರಸಂಧಿಯನ್ ನಿಟ್ಟಿಸಿ ಮುಳಿದು ಎಚ್ಚಾಗಳ್, ಮಹೋಗ್ರ ಪ್ರಳಯ ಶಿಖಿ ಶಿಖಾನೀಕಮನ್ ವಿಸ್ಫುಲಿಂಗಂಗಳುಮನ್ ಬೀಱುತ್ತುಮ್, ಔರ್ವಜ್ವಳನ ರುಚಿಯುಮನ್ ತಾನೆ ತೋಱುತ್ತುಮ್, ಆಟಂದು ಅಳುರುತ್ತಮ್ ಬಂದು ಕೊಂಡಾಗಳೆ, ಪಾಯ್ದು ಕೆನ್ನೆತ್ತರಿಂದೆ ಗಗನತಳಮ್ ಉಚ್ಚಳಿಸುತ್ತಿರ್ಪನ್ನೆಗಮ್ ಕರ್ಣೋತ್ತಮಾಂಗಮ್ ಅತ್ತ ಸಿಡಿಲ್ದು ಭರದೆ ಬಿಳ್ದುದು.

ಅಂತು ತಲೆ ನೆಲದೊಳ್ ಉರುಳ್ದೊಡೆ, ಲೋಕಕ್ಕೆಲ್ಲಮ್ ಅಗುಂದಲೆಯಾದ ಬೀರಮ್ ಎಸೆಯೆ, ಪ್ರಾಣಮ್ ಒಡಲಿಂದಮ್ ತೊಲಗೆಯುಮ್ ತೊಲಗದ ನನ್ನಿಯನ್ ಉದಾಹರಿಸುವಂತೆ ಪತ್ತೆಂಟು ಕೋಲನ್ ಎಚ್ಚ ಅಟ್ಟೆಯುಮ್ ನೆಲದೊಳ್ ಆಚಂದ್ರಸ್ಥಾಯಿಯಾಗೆ ಚತುರ್ದಶಭುವನಂಗಳನ್ ಪಸರಿಸಿ

ನಿಂದೊಡೆ ಎಸೆದ ಉದಾಹರಣಮ್ ಒಳ್ಪಿನ ಉದಾಹರಣಮುಮ್ ಆಗೆ, ಗುಣಾರ್ಣವನ ಶರಪರಿಣತಿಯಿಂದೆ ಕುಲಶೈಲಮ್ ಬೀಳ್ವಂತೆ ನೆಲನ್ ಅದಿರೆ ಬಿಳ್ದಾಗಳ್, ಚಾಗದ ನನ್ನಿಯ ಕಲಿತನದ ಆಗರಮ್ ಎನೆ, ನೆಗಳ್ದ ಕರ್ಣನ ಒಡಲಿಂದೆ ಎಂತುಮ್ ಪೋಗಲ್ಕೆ ಅಱಿಯದೆ ಸಿರಿ ಆಗಳ್ ಕರಿಕರ್ಣತಾಳ ಸಂಚಳೆಯಾದಳ್. ಕುಡುಮಿಂಚಿನ ಸಿಡಿಲುರುಳಿಯೊಳ್ ತೇಜೋರೂಪಮ್ ಒಂದು ಮೂರ್ತಿ ಒಡಂಬಡಮ್ ಪಡೆಯೆ, ಒಡಲಿಂದೆ ಆಗಳ್ ನಡೆ ನೋಡೆ ನೋಡೆ ದಿನಫನೊಳ್ ಒಡಗೂಡಿದುದು.. **"ಪುರಿಗಣೆಯನ್ ಪಿಡಿದನೆ... ಎರಳ್ನುಡಿದನೆ... ಬಳ್ಕಿದನೆ... ಚಲಮನ್ ಪಿಡಿದು, ತಾನೆ ತನ್ನನೆ ಅಳಿದನ್"** ಎಂದು ದೇವರ ಪಡೆ ಇನತನೂಜನ ಗಂಡಮ್ ಗಡಣದೆ ಪೊಗಳ್ದುದು...)

**ಸೈನಿಕರ ಮಾತು:** ಅಣ್ಣ, ಭಾರತದೊಳ್ ಇನ್ ಪೆಱರ್ ಆರುಮನ್ ನೆನೆಯದಿರ್. ಒಂದೆ ಚಿತ್ತದಿನ್ ನೆನೆವೊಡೆ ಕರ್ಣನನ್ ನೆನೆಯ. ಕರ್ಣನೊಳ್ ಆರ್ ದೊರೆ... ಕರ್ಣನ ಏಱು... ಕರ್ಣನ ಕಡು ನನ್ನಿ... ಕರ್ಣನ ಅಳವು... ಅಂಕದ ಕರ್ಣನ ಚಾಗಮ್.

(ಎಂದು ಕರ್ಣನ ಪಡೆಮಾತಿನೊಳ್ ಪುದಿದು, ಭಾರತಮ್ ಕರ್ಣ ರಸಾಯನಮ್ ಅಲ್ತೆ. ಅಂತು ರಿಪುಕುರಂಗಕಂಠೀರವನ ಕೆಯ್ಯೊಳ್ ವೈಕರ್ತನನ್ ಸಾಯೊಲೊಡಮ್, ಮೇಲುದಮ್ ಬೀಸಿ ಬೊಬ್ಬಿಱಿದು ಆರ್ವ ಪಾಂಡವಪತಾಕಿನಿಯೊಳ್ ಬದ್ದವಣದ ಪಱೆಗಳ್ ಕಿವಿ ಸದ್ದಮ್ ಕಿಡೆ ಮೊಳಗೆ, ದುಂದುಭಿ ರವದ ಒಂದು ಉದ್ಧಾನಿ ನೆಗಳೆ, ಮುಗುಳ ಅಲರೊದ್ದೆ ಅಂಬರತಳದೊಳ್ ಕರಮ್ ಸಿದ್ಧಮಾದುದು.)



# ೯೫. ದುರ್ಯೋಧನನ ಸಂಕಟ

(೨ ನೆಯ ಗದ್ಯದಿಂದ ೨೦ ನೆಯ ಗದ್ಯ)

**ಪಾತ್ರಗಳು**

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಧೃತರಾಷ್ಟ್ರ:** ದುರ್ಯೋಧನನ ತಂದೆ.

**ಗಾಂಧಾರಿ:** ದುರ್ಯೋಧನನ ತಾಯಿ.

## ದುರ್ಯೋಧನನ ಸಂಕಟ

ಅನ್ನೆಗಮ್ ಅತ್ತ ದುರ್ಯೋಧನನ್ ಅತಿ ಸಂಭ್ರಮಾಕುಳಿತ ಪರೀತ ಪರಿವಾರ ಜನ ಉಪನೀತ ಚಂದನ ಕರ್ಪೂರ ಮಿಶ್ರಿತ ಹಿಮಶಿಶಿರಧಾರಾ ಪರಿಷೇಕದಿಂದೆ ಎಂತಾನುಮ್ ಮೂರ್ಛೆಯಿಂದೆ ಎಳ್ಚತ್ತು, ಕರ್ಣನನ್ ನೆನೆದು ಸ್ಮರಣಮಾತ್ರದೊಳೆ ಶೋಕಸಾಗರಮ್ ಕರೆಗಣ್ಮೆ ಸೈರಿಸಲಾಱದೆ...

**ದುರ್ಯೋಧನ:** ನೀನುಮ್ ಅಗಲ್ದೆ. ಇನ್ ಎನಗೆ ಪೇಳ್, ಪೆಱರ್ ಆರ್ ಎನಗೆ ಆಸೆ. ನಿನ್ನನ್ ಇನ್ ಆನುಮ್ ಅಗಲ್ವೆನೇ. ಕೆಳೆಯ, ಆಂತರನ್ ಯಮಸ್ಥಾನಮನ್ ಎಯ್ದಿಸುತ್ತೆ ಬೆನ್ನನೆ ಬಂದಪೆನ್. ಇದುವೆ ದಂದುಗಮ್. ಇಂತು ಎರ್ದೆ ಮುಟ್ಟಿ ಕೂರ್ತು ಅಂಗವಿಷಯಾಧಿಪ, ನೀನ್ ಪೊಱಗಾಗೆ ಮಾನಸವಾಳಮ್ ಬಾಳ್ವೆನೇ ಪೇಳ್.

ಇವಗೆ **'ಒಡಲ್ ಎರಡು; ಒಂದೇ ಜೀವಮ್'** ಎಂಬುದನ್ ಲೋಕಮ್ ಎಂಬುದು. ಈಗಳ್ ಆ ನುಡಿ ಪುಸಿಯಾಯ್ತು. ನಿನ್ನ ಅಸು ಕಿರೀಟಿಯ ಶಾತಶರಂಗಳಿಂದೆ ಪೋಪೊಡಮ್, ಈ ನಾಣಿಲಿ ಜೀವಮ್ ಇನ್ನುಮ್ ಈ ಒಡಲೊಳ್ ಇರ್ದುದು ಎಂದೊಡೆ ಅಂಗವಲ್ಲಭಾ, ನಿನ್ನೊಳ್ ಎನ್ನ ಕಡುಗೂರ್ಮೆಯುಮ್ ಅಳ್ಕಱುಮ್ ಆವ ಎಡೆಯೊಳೆ.

ಧರ್ಮತನಯನ್ ಸೋದರನೆಂದು ಅಱಿಯನ್. ನಿರ್ವ್ಯಾಜದಿನ್ ನಿನ್ನನ್ ಆನ್ ಅಱಿವೆನ್. ಮುನ್ನ ಅಱಿದಿರ್ದುಮ್ ಎನ್ನ ಅರಸನ್ ಆನ್ ಏಕೆ ಇತ್ತೆನಿಲ್ಲ. ಪೇಳ್, ಅಱಿಪಲ್ಕೆ ಒಲ್ದೆನುಮಿಲ್ಲ. ಕಾರ್ಯವಶದಿನ್ ಕೂರ್ಪಂತೆವೋಲ್ ಅಂಗ ನೃಪತೀ, ಮುಳಿಸಿಂದಮ್ ನಿನ್ನನ್ ಆನ್ ನೆಱೆ ಕೊಂದೆನ್.

ಕೌಂತೇಯರ್ ಏನ್ ಕೊಂದರೇ. ಉದಧಿ ತರಂಗ ತಾಟಿತ ಧರಾತಳಮನ್ ನಿನಗೆ ಇತ್ತು, ನಿನ್ನ ಕೊಟ್ಟುದನೆ **'ಪಸಾದಮ್'** ಎಂದು ಪೊಡೆವಟ್ಟು, ಮನೋಮುದದಿಂದೆ ಕೊಂಡು ಬಾಳ್ವ ಬಯಕೆ. ಇದುವೆ ಮುನ್ ನಿನಗೆ. ಅದನ್ ಕಿಡಿಪಂದು ಎಲೆ ಕರ್ಣ, ಆ ವೃಕೋದರರನ ಕಾಯ್ಪನೆ ಪೊತ್ತಿಸಿದ ಎನ್ನ ಕಾಳೆಗಮ್ ನಿನಗೆ ಕೇತುವಾದುದು.

(ಎಂದು ಕರ್ಣನೊಳ್ ಆದ ಶೋಕಾನಲನೊಳ್ ಬಾಯಳಿದು, ಮೆಯ್ ಮಱೆದು ಪಳಯಿಸುವ ನಿಜ ತನೂಜನ ಶೋಕಮನ್ ಆಱಿಸಲೆಂದು ಧೃತರಾಷ್ಟ್ರನುಮ್ ಗಾಂಧಾರಿಯುಮ್ ಬರೆವರೆ, ಬರವನ್ ಗೆಂಟಱೊಳ್ ಕಂಡು, ದುಶ್ಶಾಸನನ ಸಾವನ್ ನೆನೆದು, ತಾಯ್ತಂದೆಯ ಮೊಗಮನ್ ನೋಡಲ್ ನಾಣ್ಚಿ...)

**ದುರ್ಯೋಧನ:** ಆನುಮ್ ದುಶ್ಶಾಸನನುಮ್ ಕಾನೀನನುಮ್ ಒಡನೆ ಪೋಗಿ ಬೀಳ್ಕೊಂಡು ರಣಸ್ಥಾನಕ್ಕೆ ಪೋದೆವು. ಇನ್ ಮಗುಳ್ದು ಇವರ ಮೊಗಮನ್ ನಾಣ್ಚದೆ ಏನೆಂದು ಆನ್ ನೋಳ್ಪೆನ್.

**"ಪವನಜನ್ ಅಂತು ಪೂಣ್ದು ಯುವರಾಜನ ನೆತ್ತರನ್ ಆರ್ದು ಪೀರ್ದನ್. ಇಂತು ಅವಗಡದಿನ್ ದಿನೇಶಜನನ್ ಅಂಕದ ಗಾಂಡೀವಿ ಕೊಂದನ್. ಎಂತು ಪಾಂಡವರನ್ ಇದಿರ್ಚಿ ಸಾಧಿಸುವೆ. ಈಗಳ್ ಸಂಧಿಯನ್ ಒಲ್ವುದೆ ಕಜ್ಜಮ್"** ಎಂಬವರ್ಗಳ ಮಾತು ಕೇಳ್ವನಿತನ್ ಇನ್ ಎನಗಮ್ ಬಿದಿ ಮಾಡಿತಾಗದೇ .

(ಎಂಬ ಅನ್ನೆಗಮ್, ಎಯ್ದೆ ವಂದ ಪಿತೃದ್ವಂದ್ವ ಚರಣಕ್ಕೆ ವಿನಯವಿನಮಿತ ಉತ್ತಮಾಂಗನಾದನನ್. ಇರ್ವರುಮ್ ಪರಸಿ ತಡವರಿಸಿಯುಮ್ ತೆಬ್ಬರಿಸುಯುಮ್ ಅಳ್ಕಱೊಳ್ ಅಪ್ಪಿಕೊಂಡು, ಅಮೃತವರ್ಷಿ ಕರಪರಿಷೇಕದಿಂದೆ ಪುತ್ರಸ್ಪರ್ಶನಮ್ ಆಪ್ಯಾಯನಕೋಟಿಯಾಗೆ, ಪುಳಕಿತಗಾತ್ರರುಮ್ ಆನಂದ ಬಾಷ್ಪವಾರಿ ಧಾರಾ ಪರಿಕಲಿತ ನೇತ್ರರುಮಾಗಿ, ಕಿಱಿದಾನುಮ್ ಬೇಗಮ್ ಇರ್ದಲ್ಲಿ, ಕಾರ್ಯವ್ಯಗ್ರ ಪಾಪಿ ಪಾಶಾಶ್ರಿತರೆಲ್ಲರುಮ್ ಕೇಳಲೆಂದು ಮಹೀಭುಜನ್ ಇಂತು ಎಂದನ್.)

**ಧೃತರಾಷ್ಟ್ರ:** ಎನಗಮ್ ಪಾಂಡುಗಮ್ ಭೇದಮ್ ಇಲ್ಲ. ಎಳೆಯನ್ ಪಚ್ಚಿ ಆಳ್ವಮ್. ಆ ಪಾಂಡುನಂದನರುಮ್ ನಿನ್ನೊಳೆ ಸ್ಯೆದರೆ. ಈ ಕಲಹಮುಮ್ ನಿನ್ನಿಂದ ಆಯ್ತು ಎಂದೊಡೆ ಇನ್ ಮುನಿವಯ್. ಗಂಗೆಯ ಪೆರ್ಮಗಂಗೆ, ಘಟಸಂಭೂತಂಗೆ, ಕರ್ಣಂಗೆ ಅಸಾಧ್ಯನೊಳ್ ಆ ಗಾಂಡೀವಿಯೊಳ್ ಕಱುತ್ತು ಇಱಿವರ್ ಆರ್. ಇನ್ ಸಂಧಿಯನ್ ಮಾಡುವಮ್. ಪಗೆಗೆ ಕಣಿಯೊಂದು ಉಂಟೇ, ನಣ್ಪಿಂಗಮ್ ಆಗರಮ್ ಉಂಟೆ, ನೀನ್ ಬಗೆಯ. **"ಪಗೆಯುಮ್ ನಣ್ಪುಮ್ ಕೆಯ್ಕೊಂಡ ಕಜ್ಜದಿನ್ ಅರಸುಗಳ್ಗೆ ಪುಟ್ಟುಗುಮ್ ಅಲ್ತೆ"** ಎಂದ ಸಂದ ಈ ಅರ್ಥಶಾಸ್ತ್ರದೊಳ್ ಏಕೆ ಪೇಳ್ ಮಗನೆ, **"ಕಾರ್ಯಮ್ ಮಿತ್ರಾದಿ ಕಾರಕಮ್"** ಎಂಬುದನ್ ಏಕೆ ನೆಗಳ್ಕೆ.

ಎಮಗೆ ನೀನುಳ್ಳೊಡೆ ಎಲ್ಲರ್ ಒಳರ್. ಮನದೊಳ್ ಅಳಲ್ ಏನುಮಿಲ್ಲ. ಮಗನೇ, ಅದೆಂತೆನೆ ಭಾನುವೆ ಸಾಲದೆ, ಪಗಲ್ ಎನಿತಾನುಮ್ ದೀವಿಗೆಗಳ್ ಉರಿದೊಡೇನ್ ನಂದಿದೊಡೇನ್. ಅದಲ್ಲದೆಯುಮ್ ಪಾಂಡವರಪ್ಪೊಡೆ ಎನಗೆ ಪಾಂಡುರಾಜಂಗೆ ಬೆಸಕೆಯ್ವುದುದನೆ ಬೆಸಕೆಯ್ವರ್. ಎಂದುದನ್ ಮೀಱುವರಲ್ಲರ್. ಅವರನ್ ಆನ್ ಎಂತುಮ್ ಒಡಂಬಡಿಸಿ, ನೀನ್ ಎಂದುದನ್ ಎನಿಸುವೆನ್. ಇದರ್ಕೆ ಮಾರ್ಕೊಳ್ಳದೆ ಒಡಂಬಡು. ನಿನ್ನನ್ ಕೆಯ್ಯನ್ ಒಡ್ಡಿ ಬೇಡಿದಪ್ಪೆನ್.

(ಎಂದ ಧೃತರಾಷ್ಟ್ರನ ನುಡಿಗೆ ಅನುಬಲನಾಗಿ ಗಾಂಧಾರಿ ಇಂತು ಎಂದಳ್.)

**ಗಾಂಧಾರಿ:** ಕುರುಕುಳನಂದನಮ್ ಪವನನಂದನನೆಂಬ ಮದಾಂಧಗಂಧ ಸಿಂಧುರಮೆ ಕಱುತ್ತು ಪಾಯೆ, ಪಡಲಿಟ್ಟವೊಲ್ ಆದುದು. ಪುಣ್ಯದೆ ಒಂದು ಪೆರ್ಮರನ್ ಉಳಿವಂತೆ ನೀನ್ ಉಳಿದೆ. ಇನ್ ಇಱಿವನ್ನರುಮ್ ಇಲ್ಲ. ಮಗನೇ, ಮುತ್ತರುಮ್ ಕುರುಡರುಮ್ ಎನ್ನದೆ ಎಮ್ಮ ನುಡಿಕೇಳ್... ಬಗೆ... ತಂದೆಗೆ ಇಂಬುಕೆಯ್. ಈ ಕಲಹಮ್ ಇನಿತಱೊಳ್ ಅಸವಸದಿನ್ ಪೋಕೆ. ಧರ್ಮಸುತನನ್ ಆನ್ ನಿರಾಪೇಕಮ್ ಒಡಂಬಡಿಸುವೆನ್. ಮಗನೆ, ಎನಗೆ ಕೂರ್ಪೊಡೆ ಇಂತು ಈ ಕಜ್ಜಮ್ ಕೈಕೊಳ್.

(ಎಂದು ಅನುಬಂಧಿಸಿದ ಮೋಹಪಾಶದೊಳ್ ತಾಯ್ತಂದೆಯ ನುಡಿದ ನುಡಿಯನ್ ಕೇಳ್ದು ಅಭಿಮಾನಧನನ್ ಸುಯೋಧನನ್ ಇಂತು ಎಂದನ್.)

**ದುರ್ಯೋಧನ:** ನಿಮ್ಮ ಪೇಳ್ದುದು ದೋಷಮೆ. ಎಂತುಮ್ ಒಡಂಬಡಲ್ ಅಪ್ಪುದು ಒಂದೆ. ದುಶ್ಶಾಸನ ರಕ್ತಪಾನದೊಳೆ ಸೊರ್ಕಿದ ಪಾತಕನನ್ ಪೊರಳ್ಚಿ ಕೊಂದು, ಈ ಸಮರಾವನೀ ತಲದೊಳ್ ಬಲಿಗೆಯ್ವಿನಮ್ ಒಲ್ಲೆನಲ್ತೆ. ನಿರ್ದೋಷಿಗಳೊಳ್ ಪೃಥಾಸುತರೊಳ್ ಇನ್ ಮಗುಳ್ದುಮ್ ಪುದುವಾಳೆನ್ ಎಂಬೆನೇ.

**ಧೃತರಾಷ್ಟ್ರ:** ನೀನ್ ಇದಾವುದು ಮಾತಾಗಿ ನುಡಿವೈ. ಧರ್ಮನಂದನನ್ ಅನುಜರ್ ನಾಲ್ವರುಮನ್ ವೇಳೆಗೊಂಡು ಪೊಣರ್ದ ಆವ ಅನುವರದೊಳಮ್ ಕಾವನ್ ಎನೆ ಪೇಳ್, ಪವನನಂದನಂಗೆ ಅಳಿವು ಪೊಣರೆ, ತಾನ್ ಬಳ್ದಪನೇ...

(ಎನೆ ನೃಪನ್ ಎಂದನ್.)

**ದುರ್ಯೋಧನ:** ಅನುಜರ್ಕಳೊಳ್ ಓರ್ವನ್ ಅಳಿದೊಡೆ, ಧರ್ಮಜನ್ ಒಡನೆ ಅಳಿವ. ಅಲ್ಲಿ ನೂರ್ವರುಮ್ ತನ್ನ ಅನುಜರ್ಕಳ್ ಸಾಯೆ, ಸುಯೋಧನನ ಬಾಳ್ವುದನ್ ನಂಬಿದಿರೇ. **"ವೈರಿ ತಲೆದೋಱಲ್ಕೆ ಅಣಮ್ ಅಳ್ಕಿ ಪೋ ನೆಲನನ್ ಪೊಕ್ಕನ್"** ಎಂಬನ್ನೆಗಮ್ ಚಲದಿಂದೆ ಎಯ್ದುವ ಕರ್ಣನ ಉಗ್ರರಥಮನ್ ಮುನ್ ನುಂಗಿದ ಈ ದ್ರೋಹಿಯೊಳ್ ನೆಲದೊಳ್ ಪಂಬಲೆ ಮತ್ತಮ್. ಎನ್ನ ಮುಳಿಸಿಂಗೆ ಆನ್ ಕಾದುವೆನ್. ನೆಲೆಗಂಡು ನೆಲಕ್ಕೆ ಅಂತೆ ಪೇಸಿದೆನ್. ಗೆಲ್ದೊಡಮ್ ಚಿಃ ಅದನ್ ಮತ್ತಮ್ ಆನ್ ಆಳ್ವೆನೇ.

ನೀಮುಮ್ ಆ ನೆಗಳ್ದ ಪಾಂಡುವುಮ್ ತೊಡರದೆ ಒಂದಿಯೆ ಬಳ್ದಿರ್. ಒಂದು ಎಡಂಬಡು ನಿಮಗಿಲ್ಲ. ಜೂದೆ ನೆವಮಾಗಿರೆ ಪೂಣ್ದ ಇಡುವಗೆಗೆ ಆನೆ ಮೂಲಿಗನಾದೆನ್. ಎನ್ನೊಳಾದ ಕಿಸುರ್ ಎನ್ನೊಡವೋಪುದು. ಇದು ಒಳ್ಳಿತು. ಎನ್ನ ಪಿಂಬಡಿನೊಳೆ ನಣ್ಪಿನ ಅಯ್ಯ, ಧರ್ಮನಂದನನ್ ನಿಮಗಮ್ ಮಗನಲ್ಲನೆ. ಕರ್ಣನಿಮ್ ಬಳಿಕೆ ಎನಗೆ ಸಂಧಿಯ ಮಾತು ತಪ್ಪು. ಅದು ಆತನಿಲ್ಲದೆ ರಾಜ್ಯಮ್ ಎಂತಪ್ಪುದೋ. ಈ

ಗದೆಯುಮ್ ಈ ಭುಜದಂಡಮುಮ್ ಉಳ್ಳಿನಮ್ ಎನ್ನ ಪಗೆ ಕೊನರ್ತಪ್ಪುದೆ. ಪೇಳಿಮ್... ನೋವಱಿದು ಅಂಜುವುದೇಕೆ. ನಿಂದೊಡೆ ಅಯ್ಯ ಪೇಳಿಮ್... ನೊಸಲೊಳ್ ವಿಧಾತ್ರನಾ ಅಕ್ಕರಮ್ ಏನ್ ತಪ್ಪುದೋ.

ಕರ್ಣನನ್ ಅಳಿದುದಱಿಮ್ ನರನನ್ ಮುನ್ ಆನ್ ಕೊಲ್ವೆನ್. ಸಂಗರದೊಳ್ ಸೀಳ್ದೊಟ್ಟಿ ದುಶ್ಶಾಸನನ ಅಳಲನ್ ಅದನ್ ನೀಗುವೆನ್. ಅಂತಿರ್ವರುವನ್ ಕೊಂದಂದು ಮೇಣ್ ಅವರ ಇದಿರಿದಿರೊಳ್ ಕಾದಿ ಸತ್ತಂದು ಮೇಣ್ ವಿಸ್ಫುರಿತಮ್ ಮತ್ ಕೋಪಮುಮ್ ಪೋಕುಮ್. ನಿಮ್ಮ ಅಡಿಯಮನ್ ಬೀಳ್ಕೊಂಡೆನ್. ಇನ್ ಪೋಗಿ ಏಳಿಮ್.

(ಎಂದು ತಾಯ್ಗಮ್ ತಂದೆಗಮ್ ಎಱಗಿ ಪೊಡೆವಟ್ಟು ಪೋಗಲ್ ಪೇಳ್ದು, ಸಂಸಾರಾಸಾರತೆಯನ್ ಅಱಿದನುಮ್ ಮಹಾಸತ್ತ್ವನುಮ್ ಅಪ್ಪುದಱಿಮ್, ತನ್ನನ್ ತಾನೆ ಸಂತೈಸಿಯುಮ್ ಚೇತರಿಸಿಯುಮ್, ಮಜ್ಜನ ಭೋಜನಾನುಲೇಪನ ತಾಂಬೂಲಾದಿಗಳೊಳ್ ಮಹಾಹವ ಖೇದಮುಮನ್ ಮನಃಖೇದಮುಮನ್ ಆಱಿಸಿ...)



# ೯೬. ಕೃಪ ದುರ್ಯೋಧನ ಅಶ್ವತ್ಥಾಮರ ಮಾತುಕತೆ

(೨೦ನೆಯ ಗದ್ಯದಿಂದ ೩೦ನೆಯ ಪದ್ಯ)

## ಪಾತ್ರಗಳು

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಶಾರದ್ವತ:** ಕೌರವರ ಮತ್ತು ಪಾಂಡವರ ವಿದ್ಯಾಗುರು. ಈತನಿಗೆ ಕೃಪ ಎಂಬ ಮತ್ತೊಂದು ಹೆಸರಿದೆ.

**ಅಶ್ವತ್ಥಾಮ:** ದ್ರೋಣಾಚಾರ್ಯರ ಮಗ.

**ಶಲ್ಯ:** ದ್ರುಪದ ದೇಶದ ರಾಜ. ಪಾಂಡವರ ಮತ್ತು ಕೌರವರ ಸೋದರ ಮಾವ.

## ಕೃಪ ದುರ್ಯೋಧನ ಅಶ್ವತ್ಥಾಮರ ಮಾತುಕತೆ

ತನ್ನಮ್ ತಾನೆ ಸಂತೈಸಿಯುಮ್ ಚೇತರಿಸಿಯುಮ್, ಮಜ್ಜನ ಭೋಜನ ಅನುಲೇಪನ ತಾಂಬೂಲಾದಿಗಳೊಳ್ ಮಹಾ ಆಹವ ಖೇದಮುಮನ್ ಮನಃಖೇದಮುಮನ್ ಆಱಿಸಿ, ಮಂತ್ರಶಾಲಾಂತಸ್ಥಿತ ಕನಕ ವಿಷ್ಟರ ಆರೂಢನಾಗಿ ಶಲ್ಯ ಶಕುನಿ ಕೃಪ ಕೃತವರ್ಮ ಅಶ್ವತ್ಥಾಮ ಪ್ರಧಾನ ವೀರಪುರುಷರನ್ ಬರಿಸಿ, ಯಥೋಚಿತ ಪ್ರತಿಪತ್ತಿಗಳೊಳ್ ಇರಿಸಿ...

**ದುರ್ಯೋಧನ:** ಪೇಳಿಮ್ ಇನ್ ಎಮ್ಮ ಗೆಯ್ವ ನಿಯೋಗಮ್ ಏನ್.

(ಎನೆ, ಶಾರದ್ವತನ್ ಇಂತು ಎಂದನ್.)

**ಶಾರದ್ವತ/ಕೃಪ:** ಸಂಗತ ನೀತಿಶಾಸ್ತ್ರವಿದರಪ್ಪರ್ ಅವಂದಿರ ತಮ್ಮ ತಮ್ಮ ಕಜ್ಜಂಗಳ ಮೆಯ್ಗಳೊಳ್ ಪುಸಿದು ಅದನ್ ಕಡುನನ್ನಿಯೆ ಮಾಡಿ ತೋರ್ಪರ್. ಚಿತ್ರಕಮ್ ಉತ್ತುಂಗ ಸುಸೂಕ್ಷ್ಮ ಪಾರ್ಶ್ವಕೃಶಕೋಮಲ ನಿಮ್ನ ಘನೋನ್ನತ ಪ್ರದೇಶಂಗಳನ್ ಆ ಸಮಾನ ತಳದಲ್ಲಿಯೆ ತೋರ್ಪವೋಲ್.

ಅದಱಿನ್ ಎಂತಪ್ಪ ಬುದ್ಧಿಯೊಡೆಯರ ಪೇಳ್ವ ಸಾಮಾನ್ಯಮಪ್ಪ ಉಪಾಯಂಗಳುಮ್ ನಿನಗೆ ದೈವಮ್ ವಿಮುಖಮಪ್ಪುದಱಿಂದ ಅಪಾಯ ಬಹುಳಮಾಗಿ ಬಂದುದು. ಆಱುಮ್ ಗುಣಂಗಳನೆ ತಂದುವು. ಮೌಲ ಭೃತ್ಯ ಸುಹೃತ್ ಶ್ರೇಣಿ ಮಿತ್ರಾಟವಿಕ ತಂತ್ರಂಗಳ್ ಪಣ್ಣಿದ ಜಂತ್ರಂಗಳಂತೆ ಕಳಕುಳಮ್ ಆದುವು. ಆರ್ಗಮ್ ಅಭೇದ್ಯರುಮ್ ಅಸಾಧ್ಯರುಮಪ್ಪ ಅಯೋನಿಸಂಭವರೆ ಹೇಳಾಸಾಧ್ಯರಾದರ್. ಅದು ಕಾರಣದಿನ್, ಅಧಿಕರ್ ಭೀಷ್ಮ ದ್ರೋಣ ಅಂಗ ನಾಯಕರ್ ಅಳಿದರ್. ಈಗಳ್ ಇನ್ನುಳಿದರ್ ಮಹಾರಥರ್ ಅವರಿನ್ ಮೇಲ್ ಎಂಬನ್ನರಲ್ತೆ. ಮುನ್

ಕಳಿದುದಱೊಳ್ ಏನ್ ನಷ್ಟಮ್ ನಷ್ಟಮ್... ಮೃತಮ್ ಮೃತಮ್ ಎಂಬುದು. ಇನ್ ಅಳಲದಿರ್. ಭೂಪತಿ, ಇಲ್ಲಿಮ್ ಮೇಲಪ್ಪುದನ್ ಬಗೆ. ಇಱಿವೊಡೆ ಇನಿಬರುಮ್ ನೆರಮ್ ಒಳೆಮ್, ಇಱಿ. ಕಲಹಮ್ ಅಪಾಯ ಬಹುಳಮ್. ಇನ್ನುಮ್. ನಯದತ್ತ ಎಱಗುವೊಡೆ ಸಂಧಿ ಹರಿಗನೊಳ್ ಉಱುಗುಮ್. ನೃಪತೀ , ನಿನಗೆ ಇಂತು ಇವು ಎರಡೆ ಕಜ್ಜಮ್.

(ಎಂಬುದುಮ್ ಬಳಿಕ್ಕಿನ ನುಡಿಗೆ ಸೈರಿಸಲಾಱದೆ ಫಣಿಕೇತನನ್ ಇಂತು ಎಂದನ್.)

**ದುರ್ಯೋಧನ:** ಪಳವಾಡಯ್ದನೆ ಬೇಡೆಯುಮ್ ಕುಡದ ನಾನ್, ಏನೆಂದು ಸಂಧಾನಮನ್ ಗಳಿಯಿಪ್ಪೆನ್. ಅಂಗ ನೃಪನನ್ ನೀನ್ ಎತ್ತಿ ತಂದು ಎನ್ನ ಮುಂದೆ ಇಳಿಪಳ್ಕೆ ಆರ್ಪೊಡಮ್ ಗಳಿಯಿಪ್ಪೆನ್. ಕೃಪ, ನೀನ್ ಆವುದಾಗಿ ಈ ಮಾತನ್ ಪೇಳ್ದಪ್ಪೆ. ಇನ್ ಉಳಿ. ಕಳದೊಳಮ್ ಕೌಂತೇಯರನ್ ಕಾಣ್ಬಂತು ದುರ್ಯೋಧನನ್ ಅಲ್ಲನೇ.

(ಎಂಬುದುಮ್ ಜಳಧರಧ್ವನಿಯಿನ್ ಅಶ್ವತ್ಥಾಮನ್ ಇಂತು ಎಂದನ್.)

**ಅಶ್ವತ್ಥಾಮ:** ಕುಳಬಳ ಶೌರ್ಯ ಧೈರ್ಯಯುತರೆಲ್ಲರುಮನ್ ಪೆಱಗಿಕ್ಕಿ, ಕರ್ಣನನ್ ಪಳಯಿಸುತಿರ್ಪೆಯೇನೊ ಗಳ. ನಿನ್ನಯ ತಮ್ಮನ ನೆತ್ತರನ್ ಭಯಂಗೊಳೆ ಪವಮಾನಸೂನು ತವೆ ಪೀರ್ದ ಎಡೆಯೊಳ್, ಕಲಿಕರ್ಣನ್ ಅವನ ಉರ್ಕನ್ ಏಕೆ ಮಿಳಮಿಳ ನೋಡುತಿರ್ದನ್ ಪೇಳ್. ನಿನ್ನವೊಲ್ ಇಳಾಧಿಪರ್ ಉಂಟೆ. ಅಂಬಿಗನೊಳ್ ಇದು ಋಣ ಸಂಬಂಧಮ್ ನಿನಗೆ ಅಮೋಘಮ್ ಆದುದು. ಇದನ್ ಉಳಿದವರ್ ಆರ್ಗಮ್ ಬಿಡಿಸಲ್ಕೇನ್ ಬರ್ಕುಮೆ. ನೀನ್ ಎನ್ನನ್ ಬೆಸಸುವುದು. ಆಂತರನ್ ತವೆ ಕೊಲ್ವೆನ್.

(ಎಂದು ಅಶ್ವತ್ಥಾಮನ್ ಕರ್ಣನನ್ ಪಳಿದು ನುಡಿದೊಡೆ, ಆ ನುಡಿಗೆ ಮುನಿದು, ಕೊಲ್ವನಿತುವರಮ್ ಬಗೆದು ದುರ್ಯೋಧನನ್ ಇಂತು ಎಂದನ್.)

**ದುರ್ಯೋಧನ:** ನಿನ್ನಿಂದಮ್ ತ್ರಿಭುವನ ರಾಜ್ಯೋನ್ನತಿ ಬಂದು ಎನಗೆ ಸಾರ್ಗುಮಪ್ಪೊಡಮ್ ಒಲ್ಲೆನ್. ನೀನ್ ನುಡಿದು ಬರ್ದುಕಿದ್ಯೆ. ಪೆಱರ್ ಕರ್ಣನನ್ ನುಡಿದು ಎನ್ನಿದಿರೊಳ್ ಬರ್ದುಕುವರೇ. ನಿನಗಮ್ ದಿನೇಶತನಯಂಗಮ್ ನುಡಿ ಎನ್ನಯ ಪಕ್ಕದೆ ಆದೊಡಮ್ ಮಿಡುಕದೆ ಕೇಳ್ವೆನ್. ಅಲ್ಲಿ ಇರ್ವರುಮ್ ಸಮನ್. ಆತನ್ ಅತೀತನಾದ ಪಿಂಬಡಿನೊಳ್ ಅದೆಂತು ಪಳಿಯೆ ಕೇಳ್ವೆನೊ. ಪೇಳ್, ಕೇಳ್ದೊಡೆ **'ಚಿಃ ಪೆಱಿಂಪೆಱಿನ್ ನುಡಿದೊಡೆ ಕೇಳ್ದನ್'** ಎಂದು ಎನಗೆ ಸಗ್ಗದೊಳಿರ್ದ ಇನಾತ್ಮಜನ್ ನೋಯನೆ.

**ಅಶ್ವತ್ಥಾಮ:** ಈ ನುಡಿಯೆ ನಿನ್ನ ಕೂರ್ಮೆಗಮ್ ತಕ್ಕೂರ್ಮೆಗಮ್ ದೊರೆಯಪ್ಪುದಾದೊಡಮ್ ಅರಾತಿಸೈನ್ಯಮನ್ ತವೆ ಕೊಂದಲ್ಲದೆ ನಿನ್ನ ಮೊಗಮನ್ ನೋಡೆನ್.

(ಎಂದು ಅಶ್ವತ್ಥಾಮನ್ ಆಸ್ಥಾನದಿಂದ ಎಳ್ದು ಪೋದನ್. ಆಗಳ್ ಭೂನಾಥನ್ ಮದ್ರರಾಜನನ್ ಇಂತು ಎಂದನ್.)

**ದುರ್ಯೋಧನ:** ಇನತನಯಂಗೆ ಸಾವುಮ್, ಎನಗೆ ಇನಿತೊಂದು ಅಳಲುಮ್ ದಿನೇಶಪುತ್ರನೆ ನಿಮಗೆ ಇಂಬುಕೆಯ್ಯದುದಱಿನ್ ದೊರೆಕೊಂಡುದು. ನಿಮ್ಮ ಅನುಬಲದಿಂದಮಲ್ಲದೆ ವೀರಲಕ್ಷ್ಮಿ ಎನಗೆ ಆಗದು ದಲ್. ಎನಗೆಯೆ ಸಲೆ ಪಟ್ಟಮನ್ ಸಮಂತು ಮಾಳ್ಪೊಡೆ ಏನ್ ತೊದಳೊ. ನೀಮೆ ದಲ್ ವೀರಪಟ್ಟಮನ್ ಆಂಪುದು.

(ಎಂಬುದುಮ್ ಶಲ್ಯನ್...)

**ಶಲ್ಯ:** ಇಂತು ಇರ್ದ ಇನಿಬರೊಳಮ್ ಆನ್ ಆವ ಆಳ ದೊರೆಯೆನ್. ಬೆಸನಮ್ ನೀಮ್ ಎನಗೆ ದಯೆಗೆಯ್ವಿರ್ ಎಂಬುದೆಲ್ಲಮ್ ಎನಗೆ ಸೈಪುಮ್... ಸ್ವಾಮಿ ಸಂಪತ್ತುಮ್. ಅಂತೆ ಗೆಯ್ವೆನ್.

(ಎಂದು ಷೋಡಶ ರಾಜ್ಯಭರಮನ್ ತಾಳ್ದುವಂತೆ ಸೇನಾಧಿಪತ್ಯ ಭಾರಮನ್ ಮದ್ರರಾಜನ್ ತಾಳ್ದಿ, ಮುಟ್ಟುಗಿಡೆ ತಾನೆ ತನ್ನನ್ ಕಟ್ಟಿಸಿಕೊಳ್ವಂತೆ ಶಲ್ಯನ್ ಬೀರವಟ್ಟಮನ್ ಆಗಳ್ ಕಟ್ಟಿಸಿಕೊಂಡನ್. ಕಟ್ಟಿದುದನ್ ಕಳೆಯಲ್ ಆರ್ಗಮ್ ಏನ್ ತೀರ್ದಪುದೇ.)

❖

# ೯೭. ಕೃಷ್ಣ ಮತ್ತು ಧರ್ಮರಾಯನ ಮಾತುಕತೆ

(೩೦ ನೆಯ ಗದ್ಯದಿಂದ ೩೨ ನೆಯ ಪದ್ಯ)

## ಪಾತ್ರಗಳು

ಕೃಷ್ಣ: ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

ಧರ್ಮರಾಯ: ಪಾಂಡುರಾಜ ಮತ್ತು ಕುಂತಿಯ ಮಗ

## ಕೃಷ್ಣ ಮತ್ತು ಧರ್ಮರಾಯನ ಮಾತುಕತೆ

ಅನ್ನೆಗಮ್ ಇತ್ತ ತತ್ ವೃತ್ತಾಂತಮನ್ ಸಂಚಳಿತ ಚಾರ ಚಕ್ಷುಗಳಿಂದಮ್ ಧರ್ಮಪುತ್ರನ್ ಅಱಿದು, ನರಕಾಂತಕಂಗೆ ಬಳಿಯನಟ್ಟಿ ಬರಿಸಿ ಪೇಳ್ದೊಡೆ, ನಿಶಾಟ ರಾಜಕಿರೀಟ ಕೋಟಿ ತಾಟಿತ ಭುಜನ್ ಚತುರ್ಭುಜನ್ ಇಂತು ಎಂದನ್.

**ಕೃಷ್ಣ:** ಅದಟುಮ್ ಕಾರ್ಮುಕ ವಿದ್ಯೆಯುಮ್ ಭುಜಬಳ ಅವಷ್ಟಂಭಮುಮ್ ಶಲ್ಯಂಗೆ ಸಂದು ನಿಂದುದು. ನಮಗಮ್ ಅವನೊರ್ವನ್ ಹೃಚ್ಛಲ್ಯನಲ್ತೆ. ಆತಂಗೆ ಕಟ್ಟಿದಿಱಿಸೊಳ್ ನಿಲ್ವೊಡೆ ನೀನೆ ನಿಲ್ವೆ. ಅದಱಿನ್ ನಿಶ್ಶಲ್ಯಮ್ ಅಪ್ಪಂತು ಅಗಾಧ ಸಾಗರ ಪರೀತಾಶೇಷ ಭೂಭಾಗಮನ್ ನಿನ್ನೊದವಿಮ್ ಮಾಳ್ಪುದು. ಅದಲ್ಲದೆಯುಮ್ ಸಿದ್ಧಿತ್ರಯಂಗಳ್ ನಿನಗೆ ಆತ್ಮೀಯ ಆಯತ್ತಸಿದ್ಧಿಯಾಗಿ ನಿಂದುದಱಿನ್ ನೀನೆ ಬೀರವಟ್ಟಮನ್ ತಾಳ್ದಿ ನಿಲ್ವುದು.

**ಧರ್ಮರಾಯ:** ಆನ್ ದಿಟಮಾಗಿ ಶಲ್ಯನ ಅಳವನ್ ಮುನ್ನೆ ನೆಱೆ ಅಱಿದಿರ್ದುಮ್, ಎನ್ನ ತಮ್ಮಂದಿರನ್ ಏಕೆ ಕಾದಿಸುವೆನ್. ಆನೆ ಮಹಾ ಆಜಿಯೊಳ್ ಆಂಪೆನ್. ಮುಕುಂದ, ಅಂತೆಗೆಯ್ ಎನಗೆ ಪಟ್ಟಮನ್ ಕಟ್ಟು.

(ಎಂದು ಮುಕುಂದವೃಂದಮ್ ಒಂದೊಂದಱೊಳೊಂದಿ ಮಿಕ್ಕು ಎಸೆಯೆ, ಆ ವಿಭು ಬೀರಪಟ್ಟಮನ್ ತಾಳ್ದಿದನ್.)



# ೯೮. ಶಲ್ಯನ ಸಾವು

(೪೧ನೆಯ ಗದ್ಯದಿಂದ ೪೮ ನೆಯ ಪದ್ಯ)

**ಪಾತ್ರಗಳು**

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಶಲ್ಯ:** ಮದ್ರ ದೇಶದ ರಾಜ. ಕುರುಕ್ಷೇತ್ರಯುದ್ಧದಲ್ಲಿ ಕೌರವರ ಕಡೆ ಹೋರಾಡಿದ ರಾಜ. ಪಾಂಡವರ ಮತ್ತು ಕೌರವರ ಸೋದರ ಮಾವ.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

## ಶಲ್ಯನ ಸಾವು

ಇತ್ತ ವಿಂಧ್ಯ ಮಳಯ ಹಿಮವತ್ ನಿವಾಸಿಗಳಪ್ಪ ಪರ್ವತರಾಜರುಮನ್ ಭೀಮಸೇನನ್ ಅಂತಕಾನನಮನ್ ಎಯ್ದಿಸಿದನ್. ಯುಧಾಮನ್ಯು ಉತ್ತಮೌಜಸರ್ ಗೆಲೆ ಕಾದಿ, ಕೃಪನನ್ ಉಪಗತ ಪರಿಶ್ರಮನನ್ ಮಾಡಿದರ್. ಆಗಳ್ ಮೆಯ್ವೆರ್ಚಿ ಬಂದು ಪೆಣೆದ ಭೀಮ ನಕುಳ ಸಹದೇವರುಮನ್ ಶಲ್ಯನ್ ವಿರಥರ್ ಮಾಡಿ ಪಿಡಿದುಕೊಂಡು ಪುಲ್ಲ ಸೂಡನ್ ಈಡಾಡುವಂತೆ ತನ್ನ ಅಳಿಯಂದಿರ್ ಇರ್ವರುಮನ್ ಈಡಾಡಿ, ಭೀಮನನ್ ಪೊಣರ್ದು ನೆಲಕ್ಕೆ ಇಕ್ಕಿ ಬೆನ್ನಮ್ ಮೆಟ್ಟಿ, ದಾಂಟುವ ಮದಗಜದಂತೆ ಕೊಲಲ್ ಒಲ್ಲದೆ ದಾಂಟಿದಾಗಳ್, ದುರ್ಯೋಧನನ್ ಅಳಲ್ದು ಕಣ್ಗಾಣದೆ, ಎಯ್ದೆವಂದ ಅಶ್ವತ್ಥಾಮ ಮದ್ರರಾಜ ಕೃಪ ಕೃತವರ್ಮರನ್ ಇಂತು ಎಂದನ್.

**ದುರ್ಯೋಧನ:** ಮಹಾರಥರಿರ್, ನಿಜಕುಲೋಚಿತ ವೃತ್ತಿಯನ್ ಬಗೆಯಿಮ್. ಮಹೀಭುಜರ ಕ್ಷತ್ರಿಯರ ಮಕ್ಕಳಿರ್ ಎಂದು ನಂಬಿದೆನ್. ಇಂತು ನಣ್ಪನೆ ವೈರಿಭೂಭುಜರೊಳ್ ಉಂಟೊಡೆತಾಗಿ ಮಾಳ್ಪುದಮ್ ಈಗಳ್ ಆನ್ ಅಱಿದೆನ್. ಇನ್ ನಿಮ್ಮನ್ ಈ ರಣರಂಗದೊಳ್ ಎನಗೆ ಎಂದೊಡೆ ಫಣಿಧ್ವಜನೆನ್ ಅಪ್ಪೆನೆ. ಇದು ಕಾದುವ ಮಾಳ್ಕೆಯಲ್ಲಮ್. ಕೆಮ್ಮನೆ ನಣ್ಪಿನ ಮೇಳಗಾಳೆಗಮ್ ಕಾದುವ ಮಾಳ್ಕೆ. ಸಿಂಧು ಘಟ ಸೂತ ಸುತರ್ಕಳಿಮ್ ಆಗದ ರಾಜ್ಯೋದಯಮ್... ಅಮ್ಮ, ನಿಮ್ಮ ಬಲದಿಂದೆ ಎನಗೆ ಅಪ್ಪುದೆ. ಮತ್ ವಿರೋಧಿಯನ್ ಭೇದಿಸಲ್ ಆನೆ ಸಾಲ್ವೆನ್. ಅನ್ನೆಗಮ್ ರಣರಂಗಭೂಮಿಯೊಳ್ ಇರಿಮ್.

(ಎಂದು ದುರ್ಯೋಧನನ್ ಅವರ ಕಾಳೆಗಮನ್ ಮಾತಿನೊಳ್ ಕೆಂದು, ವರೂಥದಿನ್ ಬೀಡಿಂಗೆ ಪೋದನ್.

ಆಗಳ್ ಶಲ್ಯನ್ ರಾಜರಾಜನ್ ತನ್ನನ್ ಮೂದಲಿಸಿ ನುಡಿದುದರ್ಕೆ ಮನದೊಳ್ ಏವಯಿಸಿ..)

**ಶಲ್ಯ:** (ತನ್ನಲ್ಲಿಯೇ)

ಇನಿತುವರಮ್ ಇಳೇಶನಿನ್ ಪರಾಭವಮ್ ಇನ್ ಎನಗೆ ಆದುದು. ಇನ್ ಸಿಡಿಲ್ವೆನೆ. ರಿಪುಸೇನೆಯನ್ ತೊಳ್ತುಳಿ ಮಾಳ್ಪೆನ್.

(ಎಂದು ಅಗುರ್ವಿನ ಉರ್ವಿನ ಶರಸಂಕುಲಂಗಳೊಳೆ ಪೂಳ್ದೊಡೆ, ಪಾಂಡವ ಸೈನ್ಯಮ್ ಆತನ ಅಂಬಿನ ಮೊನೆಯೊಳ್ ಸುರುಳ್ದು ಉರುಳಿಗೊಂಡುದು. ಶಲ್ಯನ್ ಇದೇನ್ ಪ್ರತಾಪಿಯೋ. ಅಂತು ಮದ್ರರಾಜನ್ ಪಾಂಡವ ಪತಾಕಿನಿಯೊಳ್ ಒಂದು ಅಕ್ಷೋಹಿಣೀ ಬಲಮನ್ ಕೊಂದು, ದ್ರುಪದನ ಮಕ್ಕಳ್ ಅಯ್ವರುಮನ್, ಆತನ ತಮ್ಮಂದಿರ್ ಇರ್ಪತ್ತಯ್ವರುಮನ್ ಶಕಟ ವಿಕಟರ್ ಮೊದಲಾಗೆ ಪನ್ನಿರ್ಛಾಸಿರ ಮಕುಟಬದ್ಧರನ್ ಕೊಂದು, ಮುಂದೆ ಆಂಪರ್ ಆರುಮನ್ ಕಾಣದೆ ಮೇಗಿಲ್ಲದೆ ನಿಂದಾಗಳ್, ಧರ್ಮಪುತ್ರನ್ ತ್ರಿಭುವನಂಗಳ್ ಆಕಂಪಂಗೊಳೆ ಮುರಜಕೇತನ ವಿರಾಜಿತಮಪ್ಪ ತನ್ನ ರಥಮನ್ ಅದಿರದೆ ಇದಿರನ್ ಪರಿಯಿಸಿ...)

**ಧರ್ಮರಾಯ:** ಇರ್ವರುಮ್ ಬೀರವಟ್ಟಮನ್ ಆಂತ ಬೀರರೆಮ್. ಸುರರಾಜಿ ಕೈವಾರದಿನ್ ಬಳಿವಿಟ್ಟು ನಮ್ಮನೆ ನೋಡ... ನೋಡುವರ್. ಈಗಳ್ ಈ ಭಾರತಮ್ ಸಮೆದಪ್ಪುದು. ಅಳ್ಕದೆ ನಿಂದು ಕಾದು.

(ಎನುತುಮ್ ಅಂತಕಾತ್ಮಜನ್ ಶರಾಸಾರಮನ್ ಸುರಿದು ಅಂತು ಅಸುಂಗೊಳೆ ಕಾದಿದನ್. ಕಾದೆ ರಥ ತುರಗ ಕೇತನ ಕೋದಂಡಂಗಳುಮನ್ ಉಱದೆ ಖಂಡಿಸಿ ವಿಳಯಾಂಭೋದ ನಿನಾದದೆ ತೊಟ್ಟನೆ ಮದ್ರಮಹೀದಯಿತನ್ ಆರ್ವುದುಮ್, ಧರ್ಮಸುತನ್ ಮುಳಿದು ತಳಮಳಿಸಿ ತಳರದೆ ತೊಳಗುವ ಕರವಾಳನ್ ಉರ್ಚಿ, ಮೈಯ್ವೆರ್ಚಿ ಪೊದಳ್ದ ಅಳವು ಅಮರೆ ಪಿಡಿದು ರಥದಿಂದೆ ಇಳೆಗೆ ಇಳಿದು ಅವನ್, ಅವನಿಪತಿಯನ್ ಅಣುಗಿಱುವೊಯ್ದನ್. ಪೊಯ್ದೊಡೆ ಮದಾಂಧಗಂಧ

ಸಿಂಧುರಮ್ ಪೊಯ್ದ ಪೆರ್ಮರದಂತೆ ನೆಲನ್ ಅದಿರೆ ಕೆಡೆದ ತನ್ನ ಅಳಿಯನನ್ ಮದ್ರರಾಜನ್ ಕಂಡು ಕರುಣಿಸಿ...)

**ಶಲ್ಯ:** (ತನ್ನಲ್ಲಿಯೇ)

ಮುಳಿಯಿಸದನ್ನಮ್ ಈ ನೃಪನಿನ್ ಸಾವು ಎನಗೆ ಆಗದು ಎಂತುಮ್ ಈತನನ್ ಮುಳಿಯಿಪೆನ್...

(ಎಂದು ಉರಃಸ್ಥಳಮನ್ ಅಂತು ಒದೆದಾಗಡೆ, ನೃಪನ್ ಕಂತುಗೆ ಈಶ್ವರನ್ ಮುಳಿದವೊಲ್ ಮುಳಿದು ನೋಡೆ, ವಿಲೋಚನ ಪಾವಕನ್ ತಗುಳ್ದು ಅಳುರ್ದೊಡೆ ಮದ್ರಮಹೀಶನಾ ಒಡಲ್ ಆಗಳೆ ಬೂದಿಯಾದುದು.)



# ೯೯. ಸಂಜಯ, ದುರ್ಯೋಧನ ಮತ್ತು ಮರುಳುಗಳು

(೪ಲ ನೆಯ ಗದ್ಯದಿಂದ ೬೧ ನೆಯ ಗದ್ಯ)

## ಪಾತ್ರಗಳು

ದುರ್ಯೋಧನ: ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

ಸಂಜಯ: ಧೃತರಾಷ್ಟ್ರನಿಗೆ ಆತ್ಮೀಯನಾದ ಸೇವಕ.

ಮರುಳು–೧

ಮರುಳು–೨: ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ಕಳೇವರಗಳನ್ನು ತಿನ್ನುವ ಪಿಶಾಚಿಗಳು.

## ಸಂಜಯ, ದುರ್ಯೋಧನ ಮತ್ತು ಮರುಳುಗಳು

ಅಂತು ಅಜಾತಶತ್ರು ನೇತ್ರ ಉದ್ಭೂತ ಅನಳನ್ ತ್ರಿಣೇತ್ರ ಲಲಾಟಾನಳಮ್ ಅಂತು ಅಳವಲ್ಲದೆ ಅಳುರೆ ಮದ್ರನಾಥನ್ ಭಸ್ಮೀಭೂತನಾದ ಮಾತನ್ ಅಹಿಕೇತನನ್ ಕೇಳ್ದು...

**ದುರ್ಯೋಧನ:** ಆ ದೊರೆಯರ್ ನದೀಜ ಘಟಸಂಭವ ಸೂರ್ಯತನೂಜ ಮದ್ರರಾಜಾದಿ ಮಹೀಭುಜರ್ ಎನ್ನಯ ದೂಸಱಿನ್ ಧುರದೊಳ್ ಅಳ್ಕಿಮೆಳ್ಕಿದಂತಾದರ್. ಇದೊಂದೆ ಮೆಯ್ ಉಳಿದುದು. ಇನ್ ಎನಗೆ ಮಾಳ್ಪೊಡೆ ಆವುದೊ. ಎಯ್ದೆ ಮುಂದಾದ ವಿರೋಧಿ ಸಾಧನಮನ್ ಎನ್ನ ಗದಾ ಅಶನಿಯಿಂದೆ ಉರುಳ್ಚುವೆನ್.

(ಎಂದು ನಿಜಭುಜ ವಿಕ್ರಮೈಕಸಹಾಯನಾಗಿ ಗದೆಯನ್ ಕೊಂಡು ಸಂಗ್ರಾಮರಂಗಕ್ಕೆ ನಡೆಯಲ್ ಎಂದಿರ್ದ ಕುರುಕುಳ ಚೂಡಾಮಣಿಯ ದಕ್ಷಿಣ ಕರಾಗ್ರಮನ್ ಪಿಡಿದು ಸಂಜಯನ್ ಇಂತು ಎಂದನ್.)

**ಸಂಜಯ:** ಕೃಪ ಅಶ್ವತ್ಥಾಮರ್ ಉಳ್ಳಂತೆ ಬೆವಸಾಯಮ್ ಗೆಯ್ಯಲ್ ಇನ್ನುಮ್ ಎಡೆ ಉಂಟು. ಪಾಂಡವರನ್ ಗೆಲ್ವುದು ಅಸಾಧ್ಯಮಾಯ್ತೆ. ನಿಜ ದೋರ್ದಂಡಂಬರಮ್ ಗಂಡರ್ ಆಹವರಂಗಕ್ಕೆ ಒಳರೇ. ಸಮಂತು ಪಗೆಯನ್ ಕೊಲ್ವಂತು ಗೆಲ್ವಂತು ಕಾದುವುದು. ದೇವ, ಏಕಾಕಿಯೆ ಆಗಿ ರಿಪುಭೂಪಾಳರ್ಕಳೊಳ್ ಕಾದುವೈ.

(ಎಂಬುದುಮ್)

**ದುರ್ಯೋಧನ:** ಎನ್ನುಮನ್ ಏಕಾಕಿಯೆಂದು ಏಳಿಸಿ ನುಡಿದೆ.

(ಎಂದು ಸಂಜಯನ ಮೊಗಮನ್ ಮುನಿದು ನೋಡಿ..)

**ದುರ್ಯೋಧನ:** ವನಕರಿ ಕುಂಭ ಪಾಟನ ಪಟಿಷ್ಠ, ಕಠೋರ ನಖ ಪ್ರಹಾರ ಭೇದನ ಗಳಿತ ಅಸ್ತ್ರ ರಕ್ತ ನವ ಮೌಕ್ತಿಕ ಪಂಕ್ತಿ ವಿಳಾಸ ಭಾಸುರ ಆನನಮ್ ಎನೆ ಸಂದ ಉದಗ್ರ ಮೃಗರಾಜನುಮನ್, ಮದವತ್ ವಿರೋಧಿ ಭೇದನ ಕರನಪ್ಪ ಶೌರ್ಯಮದದ ಎನ್ನುಮನ್... ಸಂಜಯಾ... ಒಂದೊಡಲ್ ಎಂಬೆ.

**ಸಂಜಯ:** ದೇವರ ಬಾಹುಬಲಮ್ ಅಜೇಯಮುಮ್ ಅಸಹಾಯಮುಮ್ ಅಪ್ಪುದಾದೊಡಮ್, ದೇಶ ಕಾಲ ವಿಭಾಗಮುಮನ್ ಆಪತ್ ಪ್ರತೀಕಾರಮುಮನ್ ಅಱಿಯದ ಅವಿವೇಕಿಗಳಂತೆ ದೇವರ್ ನೆಗಳಲಾಗದು. ಏನನ್ ನೆಗಳ್ವೊಡಮ್ ಕುರುಪಿತಾಮಹನೊಳ್ ಆಳೋಚಿಸಿ ನೆಗಳ್ವುದು.

(ಎಂದು ಮುಳಿಸಾಱಿ ನುಡಿದು, ಕಾಲವಂಚನೆ ಗೆಯ್ಯಲ್ ಬಗೆದು, ಸಂಗ್ರಾಮರಂಗದೊಳಗನೆ ಮುಂದಿಟ್ಟು ಒಡಗೊಂಡು ಅನೇಕ ನೃಪಶಿರಃ ಕಪಾಳಶಕಳ ಜರ್ಜರಿತಮುಮ್; ಪರಸ್ಪರ ಸಮರ ರಭಸ ಸಮುತ್ಸಾರಿತಮುಮ್; ಸಕಲ ಸಾಮಂತ ಮಕುಟ ಬದ್ಧ ಮೌಳಿಮಾಳಾ ವಿಗಳಿತ ಮಕುಟಕೋಟಿ ಸಂಘಟ್ಟನ ಉಚ್ಚಳಿತ ಮಣಿಶಲಾಕಾ ಸಂಕುಳಮುಮ್; ಸಮರಭರ ನಿರ್ಭರ ಭೀಮಸೇನ ಘನಗದಾಪ್ರಹರಣ ನಿಸ್ಸಹಮದವದನೇಕ ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಮ್; ಪ್ರಚಂಡ ಮಾರ್ತಂಡ ಮರೀಚಿ ತೀವ್ರಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡ ಪ್ರಚಂಡ ಸುಭಟಾರೂಢ ತುರಂಗಮ ವೇಗಬಲ ಪತಿತ ಖರ ಖುರ ಟಂಕ ಪರಿಸ್ಖಲನ ಕಳಿತ ವಿಷಮಸಮರಭೇರೀ ನಿಸ್ವನಮುಮ್; ಆಕರ್ಣಕೃಷ್ಟ ವಿಕ್ರಮಾರ್ಜುನ ಕಾರ್ಮುಕ ವಿಮುಕ್ತ ನಿಶಿತಸಾಯಕಸಂಕುಳ ಶಲ್ಯನಿಪತಿತಾನೇಕ ಕಳಕಳ ಆಕಳಿತಮುಮ್; ಪ್ರಕುಪಿತ ಸೂತ ಹೂಂಕಾರ ಕಾತರಿತ ತರಳತರ ತುರಂಗ ದ್ರುತವೇಗಾಕೃಷ್ಟ ಧನಂಜಯರಥ ಚಟುಳ ಚಕ್ರ ನೇಮಿಧಾರಾ ಪರಿವೃತ

ಸಂಘಟ್ಟನ ಸಮುಚ್ಚಳಿತ ಪಾಂಸು ಪಟಳಾಂಧಕಾರ ದುರ್ಲಕ್ಷಾಂತರಿಕ್ಷ ಕ್ಷಿತಿ ದಿಗಂತರಾಳಾಂತರಮುಮ್; ಅನವರತ ನಿಹತ ನರಕರಿತುರಗ ನಿಕುರುಂಬ ಕೀಲಾಲ ಕಲ್ಲೋಲ ಪ್ರವರ್ತನಾನೇಕ ನದನದೀಪ್ರವಾಹ ಬಾಹುಳ್ಯ ದುಸ್ತರ ಅವತರಣ ಮಾರ್ಗಮನ್; ನಿಶಿತ ಅಸಿಪತ್ರಪತಿತ ಪ್ರಚಂಡ ಸುಭಟಮಸ್ತಕೋಚ್ಚಳಿತ ಚಟಾಚ್ಛಾಟನ ದುರ್ನಿರೀಕ್ಷ್ಯ ನರ್ತಿತಾನೇಕ ಕಬಂಧ ಬಂಧುರಮುಮಪ್ಪ ವಿಷಮ ಪ್ರದೇಶಂಗಳೊಳ್ ತೊಲಗಿ ತೊಲಗಿ ಪೋಗೆ ಸಂಜಯಂ ದುರ್ಯೋಧನನ ಮೊಗಮನ್ ನೋಡಿ...)

**ಸಂಜಯ:** ಎಱಗುವ ಅನೇಕ ವಂಶ ನರಪಾಲಕರ ಕಿರೀಟ ಕೋಟಿಯೊಳ್ ಮಿಱುಗುವ ಪದ್ಮರಾಗದ ಬಿಸಿಲ್ಗೆ ಅಗಿವ ಈ ನಿಜ ಪಾದಪದ್ಮಮ್, ಈ ಇಱಿದು ಸಿಡಿಲ್ದ ಬಾಳ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದಿರ್ದ ಕೊಳ್ಗುಳದೊಳಮ್ ನಡೆವ ಈ ನಡೆಗೆ ಎಂತು ನೋಂತೆಯೋ...

(ಎನುತುಮ್ ಕಿಱಿದು ಅಂತರಮನ್ ಬಂದು...)

**ಸಂಜಯ:** ಇವು ಪವನಾತ್ಮಜನ್ ಗದೆಯಿನ್ ಎಲ್ವಡಗಾಗಿರೆ ಮೋದೆ ಮೊಳ್ಗಿ ಬಿಳ್ದುವು ಮದವಾರಣಂಗಳ್. ಇವು ನೋಡ... ಗುಣಾರ್ಣವನ ಅಂಬಿನಿಂದೆ ಉರುಳ್ದುವು ಮನುಜೇಂದ್ರ ರುಂದ್ರ ಮಕುಟಾಳಿಗಳ ಓಳಿಗಳ್. ಇವಲ್ತೆ ಗಾಂಡಿವಿಯ ವರೂಥಘಾತದೊಳೆ ನುರ್ಗಿದ ತುಂಗ ತುರಂಗ ಕೋಟಿಗಳ್.

(ಎಂದು ನೆಣದ ಪಳ್ಳಂಗಳನ್ ಪಾಯ್ದುಮ್, ನೆತ್ತರ ತೊಱೆಗಳನ್ ಬಂಚಿಸಿಯುಮ್, ಅಡಗಿನ ಇಡುವುಗಳನ್ ದಾಟಿಯುಮ್, ಪೆಣದ ತಿಂತಿಣಿಯನ್ ನೂಂಕಿಯುಮ್, ರಥದ ಘಟ್ಟಣೆಗಳನ್ ಏಱಿ ಪಾಯ್ದುಮ್, ತೇರ ಪಲಗೆಯನ್ ಮೆಟ್ಟಿಯುಮ್, ಪೋಗಿವೋಗಿ ಭೂತ ಪ್ರೇತ ಪಿಶಾಚ ನಿಶಾಚರ ನಿಚಯ ನಿಚಿತ ಭೂಭಾಗಮನ್ ಎಯ್ದೆ ವಂದಾಗಳ್...)

**ಮರುಳು–೧:** ಬೇಡ ವಿರೋಧಮ್. ಎಂತುಮ್ ಅರಿಕೇಸರಿಯೊಳ್ ಸಮಸಂದು ಸಂಧಿಯನ್ ಮಾಡು ಎನೆ ಮಾಡಲೊಲ್ಲದೆ,

ಸುಹೃತ್ ಬಲಮೆಲ್ಲಮನ್ ಇಕ್ಕಿ ಯುದ್ಧಮನ್ ಮಾಡಿದ ಜಾತಿಬೆಳ್ ನಿನಗೆ ಈ ಎಡಱು ಅದೇನ್ ಪಿರಿದು.

(ಎಂದು ಮುಂದೆ ಬಂದು ಏಡಿಸುವಂತಿರೆ ಫಣಿರಾಜ ಕೇತುವನ್ ಒಂದು ಮರುಳ್ ಆಡಿದುದು.)

**ಮರುಳು–೨:** ಮರುಳೆನೆ ಲೋಕದೊಳ್ ನೆಗಳ್ದ ಕೊಳ್ಗುಳದೊಳ್ ಮರುಳಾಟ ಮಾಡುವ ಆನ್ ಮರುಳನೊ... ವಿಕ್ರಮಾರ್ಜುನನೊಳ್ ಸಂಧಿಯನ್ ಒಲ್ಲದೆ ಉರ್ಕಿ ಕೆಟ್ಟ ನೀನ್ ಮರುಳಯೊ... ಪೇಳ. ಪೇಳದೊಡೆ ಪೋಗದಿರ್ ಈಶ್ವರನಾಣೆ.

(ಎಂದು ಪುಲ್ಮರಳ್ ಇನಿಸಾನುಮನ್ ತೆಗೆದು ಅಲ್ಲಿ ಫಣೀಂದ್ರಕೇತುವನ್ ಕಾಡಿದುದು. ಆಗಳ್ ಆ ಮರುಳ ಕೆಯ್ತಕ್ಕೆ ದುರ್ಯೋಧನನ್ ಮುಗುಳ್ನಗೆ ನಕ್ಕು...)

**ದುರ್ಯೋಧನ:** ಎನ್ನನ್ ವಿಧಾತ್ರನ್ ಮರುಳ್ಮಾಡಿದ ಕಾರಣದಿಂದೆ ಈ ಮರುಳ ಕಣ್ಗೆ... ಆನ್ ಮರುಳಾಗಿ ತೋಱಿದೆನ್.

(ಎಂದು ಅಲ್ಲಿಮ್ ತಳರ್ದು ಕಿಱಿದು ಅಂತರಮನ್ ನಡೆದು, ಒಂದೆಡೆಯೊಳ್ ಅನೇಕ ಕರಿ ತುರಗ ನರ ಕಳೇವರ ಸಂಕೀರ್ಣಮುಮ್ ಉಭಯಪಕ್ಷಸ್ಥಿತ ಉಭಯಕುಲಶುದ್ಧ ನೃಪತಿ ಮಣಿಮಕುಟ ಮರೀಚಿ ಮೇಚಕಿತಮುಮಪ್ಪ ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನ ಕಚಗ್ರಹ ವಿಲುಳಿತ ಮೌಳಿಯುಮ್ ತದೀಯ ಕೌಕ್ಷೇಯಕ ಧಾರಾ ವಿದಾರಿತ ಶರೀರನುಮಾಗಿ ಬಿಳ್ದಿರ್ದ ಶರಾಚಾರ್ಯರನ್ ಕಂಡು...)

**ದುರ್ಯೋಧನ:** ಬಿಲ್ಲ ಬಿನ್ನಣಮ್ ಇಳಾವಳಯಕ್ಕೆ ನೆಗಳ್ದುದು. ನಿಮ್ಮದೊಂದೆ ಪೆಸರ್ ಕೇಳ್ದೊಡೆ ಸಮಸ್ತಧಾತ್ರಿ ಕೆಯ್ ಮುಗಿವುದು. ನಿಮ್ಮ ಸರಲ್ಗೆ ದೇವರುಮ್ ಸುಗಿವರ್. ಅಯೋನಿಸಂಭವರಿರ್ ಎನ್ನಯ ದೂಸಱಿನ್ ಎನ್ನ... ಕರ್ಮದಿನ್... ಅಕ್ಕಟಾ... ಪಗೆವರಿನ್ ನಿಮಗಮ್ ಕುಂಭಸಂಭವಾ... ಈ ಇರವಾದುದೆ.

(ಎಂದು ಗುರುವಿನ ಪಾದಕಮಲಂಗಳನ್ ತಲೆಯ ಮೇಲಿಟ್ಟು ಪೊಡೆವಟ್ಟಂತೆ ನಡೆತಂದು, ವೃಕೋದರನಿನ್ ನಿಶ್ಶೇಷ ಪೀತರುಧಿರನಪ್ಪ ದುಶ್ಶಾಸನನ್ ಕಂಡು, ಆತನನ್ ಮುತ್ತಿ

ಸುತ್ತಿಱಿದ ಮುದುವರ್ದುಗಳುಮನ್ ಅಗಲೆ ಮೆಟ್ಟಿ ಪೋಳ್ದು, ಭೀಮಸೇನನ್ ಮುನ್ನಮ್ ಕುಡಿದುದಱಿನ್ ನೆತ್ತರನ್ ಪಡೆಯದೆ ಆಕಾಶಕ್ಕೆ ಬಾಯನ್ ತೆರೆದು ಊಳ್ವ ಬಳ್ಳುಗಳುಮನ್ ನರವುಮನ್ ಬರಿಯುಮನ್ ಪತ್ತಿ ತೆಗೆದು ಪೆಡಸಾರ್ವ ನರಿಗಳುಮನ್ ತಾನೆ ಸೋದು, ಸೋದರನ ಅಳಲೊಳ್ ಕಣ್ಣ ನೀರ್ಗಳನ್ ಸುರಿದು...)

**ದುರ್ಯೋಧನ:** ನಿನ್ನನ್ ಕೊಂದನ ಬಸಿಱಿನ್ ನಿನ್ನನ್ ತೆಗೆಯದೆಯುಮ್, ಅವನ ಕರುಳನ್ ಮುನ್ ಪರ್ದಿನ್ ನುಂಗಿಸಿ ನೋಡದೆಯುಮ್, ಮುನ್ನಮೆ ಯುವರಾಜ... ನಿನ್ನನ್ ಆನ್ ನೋಡಿದೆನೇ.

(ಎಂಬುದುಮ್)

**ಸಂಜಯ:** ಇಂತಪ್ಪ ವಿಪ್ರಳಾಪಂಗಳ್ ಶೌರ್ಯಶಾಲಿಗಳ್ಗೆ ಅನುಚಿತಮ್. ಅತ್ತಮ್ ಎಳ್ತರ್ಪುದು

(ಎಂದು ತಳರ್ದು ಬಂದು ಅಮೋಘಾಸ್ತ್ರಧನಂಜಯ ಕರಪರಿಚ್ಯುತವಿಕರ್ಣ ವಿಶೀರ್ಣನಾಗಿರ್ದ ಕರ್ಣಸೂನುವನ್ ವೃಷಸೇನನನ್ ಕಂಡು, ಕರ್ಣನನ್ ನೆನೆದು ಎರ್ದೆ ತೆರೆದು.)

**ದುರ್ಯೋಧನ:** ದುರ್ಯೋಧನನ ಕೆಳೆಯನಪ್ಪ ನಿಮ್ಮಮ್ಮನ್ ಕರ್ಣನ್ ಎಲ್ಲಿದನ್.

(ಎಂದು ತೆಕ್ಕನೆ ತೀವಿದ ಕಣ್ಣ ನೀರೊಳ್ ದೆಸೆಗಾಣದೆ ನಿಂದಿರ್ದ ಸುಯೋಧನನನ್ ಸಂಜಯನ್ ಇಂತು ಎಂದನ್...)

**ಸಂಜಯ:** ನರಶರಘಾತದಿನ್ ಪಱಿದು ಪಚ್ಚೆಸಿದಂತೆವೊಲ್ ಇರ್ದ ಮೆಯ್. ಭಯಂಕರತರಮಾಗೆ ಮುಯ್ವುವರೆಗಮ್ ತೆಗೆದ ಅಂಬಿನ ಮುಷ್ಟಿ. ಬಿನ್ನಣಮ್ ಬೆರಸಿರೆ ಪೋದ ಪಂದಲೆಯೊಳ್ ಆದ ಮುಗುಳ್ನಗೆ. ಭೀತರಾದರೆಲ್ಲರುಮನ್ ಅಳುರ್ಕೆಯಿನ್ ನಗುವವೊಲ್ ರವಿನಂದನನ್ ಇತ್ತಲ್ ಇರ್ದಪನ್.

(ಎಂಬುದುಮ್ ಆಗಳ್ ತೆಪ್ಪತ್ತುಮ್...)

**ದುರ್ಯೋಧನ:** ಎಲ್ಲಿದನ್... ಎತ್ತಣನ್.

(ಎಂದು ಕರ್ಣನ ಕಳೇವರಮನ್ ನೋಡಿ... ನೋಡಲಾಱದೆ

ಕಣ್ಗಳನ್ ಮುಚ್ಚಿ ಮೂರ್ಛೆವೋಗಲ್ ಬಗೆದನನ್ ಸಂಜಯ= ತಳ್ಕೈಸಿಕೊಂಡಾಗಳ್ ಚೇತರಿಸಿ ಕೂರ್ಮೆ ಕೆಯ್ಮಿಕ್ಕು ಬರೆ ಸೈರಿಸಲಾಱದೆ...)

**ದುರ್ಯೋಧನ:** ಬೆಸನೆಡೆಗಳ್ಗೆ ತೊಳ್ತು. ಬೆಸನಂಗಳ್ ಅವುಂಕಿದೊಡೆ ಆಗದು ಎಂದು ಬಗ್ಗಿಸುವೆಡೆಗೆ ಆಳ್ದನ್. ಇಂತು ನೆಗಳ್ ಎಂಬ ಎಡೆಯೊಳ್ ಗುರು ಪೆರ್ಚಿದ ಒಂದು ಬೆವಸದ ಎಡೆಗೆ ಆಶ್ರಯಮ್. ಮನಮನ್ ಒಪ್ಪಿಸುವ ಈ ಎಡೆಯೊಳ್ ಮನಮ್ ವಿಚಾರಿಸುವೊಡೆ ಎನಗೆ ಕರ್ಣನಲ್ಲದೆ ಪೆಱನೊರ್ವನ್ ಆವನೋ ಇನಾತ್ಮಜಾತನ್. ಎನಗೆ ನೆಲನನ್ ಕೊಟ್ಟನ್. ಆನ್ ತಕ್ಕೂರ್ಮೆಯಿಂದಮ್ ಜಳಾಂಜಳಿಯನ್ ಕೊಟ್ಟೆನುಮಿಲ್ಲ. ಸೂರ್ಯತನಯನ್ ತೇಜೋಗ್ನಿಯಿಂದಮ್ ದ್ವಿಷದ್ಬಲಮನ್ ಸುಟ್ಟನ್. ಉದಾತ್ತ ಪುಣ್ಯಮ್ ಅವನನ್ ಚೈತಾಗ್ನಿಯಿನ್ ಸುಟ್ಟೆನಿಲ್ಲ. ಒಲವಿಂದೆ ಇಂತು ಎರ್ದೆಮುಟ್ಟಿ ಕರ್ಣಂಗೆ ಕೂರ್ತಮ್ ದುರ್ಯೋಧನನ್ ಒಳನೇ.

(ಎಂದು ನೊಂದು ನುಡಿದ ದುರ್ಯೋಧನನನ್ ಸಂಜಯನ್ ಇಂತು ಎಂದನ್.)

**ಸಂಜಯ:** ಉದಗ್ರ ಶೋಕಶಿಖಿಯನ್ ಕಿರ್ಚನ್ ಕೊಟ್ಟೈ. ಕಣ್ಣೀರ್ಗಳಿಂದೆ ಎಯ್ದೆ ಸೂರ್ಯಸುತಂಗೆ ನೀರ್ಗೊಟ್ಟೈ. ಲೌಕಿಕಮನ್ ಇನ್ ಏನ್ ದಾಂಟಿದಯ್. ವೈರಿಯನ್ ಇನ್ ಪೋಳ್ದು ಸೀಳ್ದು ಒಡ್ಡಿ ತತ್ ಪಿಶಿತದಿಂದೆ ನೀನ್ ಆತಂಗೆ ಕೂರ್ಪೊಡೆ, ಭೂಪತೀ... ತತ್ ದ್ವಿಜಗಣಕ್ಕೆ ಆಹಾರಮನ್ ಮಾಡು. ಏನ್ ಕೆಟ್ಟತ್ತು. ಇನ್ ನಡೆ.

(ಎಂದು ಪೆರ್ಚಿದ ಶೋಕರಸಮನ್ ಕೋಪರಸದ ಮೇಲಿಕ್ಕಿ ಭೀಷ್ಮನ್ ಶರಶಯನತಳವಿಗತನಾಗಿರ್ದಲ್ಲಿವರಮ್ ಎಂತಾನುಮ್ ಒಡಗೊಂಡು ಬಂದಾಗಳ್.)



# ೧೦೦. ಭೀಷ್ಮರ ಬಳಿಗೆ ಬಂದ ದುರ್ಯೋಧನ

(೬೨ ನೆಯ ಪದ್ಯದಿಂದ ೭೦ ನೆಯ ಗದ್ಯ)

**ಪಾತ್ರಗಳು**

**ಭೀಷ್ಮ:** ಶಂತನು ಮತ್ತು ಗಂಗಾದೇವಿಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಸಂಜಯ:** ಧೃತರಾಷ್ಟ್ರನಿಗೆ ಆತ್ಮೀಯನಾದ ಸೇವಕ.

# ಭೀಷ್ಮರ ಬಳಿಗೆ ಬಂದ ದುರ್ಯೋಧನ

ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಮ್ ಇಡಿದಿರೆ, ತೆಱಮ್ ಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಲ್ದಿರೆ, ಸುಯ್ವ ಪುಣ್ಗಳಿಮ್ ಶರಾಳಿಭಯದಿನ್ ಬಡನಡುವನ್ ನಡುಪಂತಿರೆ, ಚಿತ್ತದೊಳ್ ಮೃಡನ್ ತೊಡರ್ದಿರೆ, ಅಂದು ಸಿಂಧುಜನ್ ಶರಶಯ್ಯೆಯೊಳ್ ಬಿಳ್ದು ಅದೇನ್ ಎಸೆದನೋ. ಹರನೊಳೆ ಪತ್ತಿ ತೆತ್ತಿಸಿದ ಚಿತ್ತಮನ್ ಇರ್ಬಗಿಯಾಗಿ ಮೋಹಮ್ ಒತ್ತರಿಸೆ...

**ಭೀಷ್ಮ:** (ತನ್ನ ಮನದಲ್ಲಿ)

ಸುಯೋಧನಂಗೆ ರಣಭೂಮಿಯೊಳ್ ಎಂತುಟು ಅವಸ್ಥೆಯೋ... ಎನ್ನ ಮೆಯ್ ಕನಲ್ದು ಉರಿದಪುದು.

(ಎನುತುಮ್ ಅತ್ತಣ ಪಂಬಲ ಬಂಬಲೊಳ್ ಚಿತ್ತಮ್ ತೆಱಿಂದಿರಿದುದು. ಆ ದೊರೆಯ ಯೋಗಿಗಮ್ ಇಂತುಟೆ ಮೋಹಮ್ ಆಗದೇ ಎಂಬನ್ನೆಗಮ್... ಅವರ್ ಇರ್ವರ ಕಾಲ ಸೊಪ್ಪುಳನ್ ಆಲಿಸಿ ಸುರನದೀನಂದನನ್..)

**ಭೀಷ್ಮ:** ಪೇಳಿಮ್ ಈ ಬಂದರ್ ಆರ್.

(ಎಂದು ಅನೇಕ ವ್ರಣವೇದನಾ ಪರವಶ ಶರೀರನ್ ಬೆಸಗೊಳ್ವುದುಮ್, ಸಂಜಯನ್ ಕುರುಪಿತಾಮಹನ ಕರ್ಣೋಪಾಂತಮನ್ ಸಾರ್ದು...)

**ಸಂಜಯ:** ಕುರುಕುಳ ಗಗನ ಮೃಗಧರನ್ ಬಂದನ್.

(ಎಂದು ಬಿನ್ನಪಮ್ ಗೆಯ್ವುದುಮ್, ಯೋಗಾಭ್ಯಾಸದೊಳ್ ಅರೆಮುಗುಳ್ದ ರಕ್ತಾಂಭೋಜದಳ ವಿಳಾಸ ಉಪಹಾಸಿಗಳಪ್ಪ ಕಣ್ಗಳನ್ ಒತ್ತಂಬದಿಮ್ ತೆರೆದು, ಎಱಗಿದ ಕೌರವೇಶ್ವರನೊಳ್

ಆದಮ್ ಇದಿರ್ಚಿದ ಅಲಂಪು ಎಲರ್ಚಿದ ಅಳ್ಕಱನ್ ಒಳಕೊಳ್ವಿನಮ್ ಪರಸಿ...)

**ಭೀಷ್ಮ:** ಮೆಯ್ಯೊಳೆ ಬಂದ ತೆಱಕ್ಕೆ ಮೆಯ್ ಕರಮ್ ಇಂತು ಮಱುಗುವುದು. ಮಗನೆ, ಬೆಳ್ಗೊಡೆ ಎಲ್ಲಿದುದು ಸುತ್ತಿಱಿದ ಚತುರ್ಬಲಮ್ ಎತ್ತ ಪೋಯ್ತು. ಪೇಳ್, ವೈರಿ ಭೂಪರಿನ್ ನಿನಗಮ್ ಈ ಇರವಾದುದೆ.

(ಎಂದು ಕಣ್ಣ ನೀರನ್ ನೆಗಪಿ...)

**ಭೀಷ್ಮ:** ನಿನ್ನ ಬಂದ ಬರವೇ ಸಮರ ವೃತ್ತಾಂತಮನ್ ಅಱಿಪಿದಪ್ಪುದು. ಇನ್ ನಿನ್ನ ಗೆಯ್ವ ನಿಯೋಗಮ್ ಆವುದು. ಏನ್ ಗೆಯ್ಯಲ್ ಬಗೆದಪೆ.

**ದುರ್ಯೋಧನ:** ಎಂತುಮ್ ವೈರಿನೃಪರನ್ ತಱಿದೊಟ್ಟುವುದಲ್ಲದೆ ಬಗೆ ಪೆಱತುಂಟೆ. ಭವತ್ಪದ ಸರೋಜಮನ್ ಬಲಗೊಂಡು, ಮತ್ತಮ್ ಆಜಿಗೆ ನಡೆಯಲ್ಕೆ ಆನ್ ಇಲ್ಲಿಗೆ ಬರವನ್ ಬಂದೆನ್.

**ಭೀಷ್ಮ:** (ತನ್ನ ಮನದಲ್ಲಿ)

ರಾಜರಾಜನಾ ಶೌರ್ಯಗುಣೋನ್ನತಿ ಇದೇನ್ ಅಖಂಡಿತಮೋ.

(ಎಂದು ಆದಿ ಮಧ್ಯ ಅವಸಾನದೊಳ್ ಎಲ್ಲಿಯುಮ್ ಎಳಲದ ಕಲಿತನದ ಅಳವಿಂಗೆ ಮನಂಗೊಂಡು...)

**ಭೀಷ್ಮ:** ಮಗನೆ, ನಿನಗಪ್ಪೊಡೆ ದೆಯ್ವಮ್ ಪ್ರತಿಕೂಲಮ್. ಎಂತುಮ್ ಕಾದಿ ಗೆಲಲಾರ್ಪೆಯಲ್ಲೆ. ಸೂಜಿಯ ಕೂರ್ಪು ಕುಂಬಳದೊಳ್ ಅಡಂಗುವಂತೆ ನಿನ್ನೊಂದೆ ಮೆಯ್ಯೊಳಾದ ಕೂರ್ಪು, ಪಗೆವರ ದರ್ಪಮನ್ ಅದಿರ್ಪದಲ್ತೆ. ನಿನಗಮ್ ಮೈತ್ರೇಯರ್ ಕೊಟ್ಟ ಊರುಭಂಗ ಶಾಪಮ್ ಅನಿವಾರಿತಮ್. ಎನ್ನ ಈ ಪ್ರಾಣಮ್ ಉಳ್ಳಂತೆ ಸಂಧಿಯನ್ ಮಾಡಿ ವಸುಂಧರೆಯನ್ ಕೊಂಡು, ಕಾಲಮನ್ ಕಜ್ಜಮನ್ ಅಱಿದು, ಬಳಿಯನ್ ನಿನ್ನ ನೆಗಳ್ವುದನ್ ನೆಗಳ್ವದು. ಒಂದಱಿಂದೆ ಎರಡನ್ ಪರಿಕಿಪುದು; ಮೂಱಿರಿಂದೆ ಓತು ಒಳಕೊಳ್ವುದು; ನಾಲ್ಕು ಅರಿದು ಅಱಿದು; ಅಯ್ದಱಿಂದೆ ನೆಱೆ ಕಲ್ವುದು ನಿರ್ಣಯಮಾಗಿರೆ; ಆಱಱೊಳ್ ಪರಿಣತನಪ್ಪುದು; ಏಳರೊಳಮ್ ಒಂದದೆ ನಿಲ್ವುದು

ದುರ್ವಿಮಂತ್ರಮನ್ ಪರೆಪ ಟಮಾಳಮನ್ ಪಿರಿದನ್ ಓದಿದೊಡೆ ಅಪ್ಪ ಪದಾರ್ಥಮಾವುದೋ.

ಭರತಕುಲಮ್ ಪೆರ್ಚುಗೆ. ನಿಮ್ಮ ಎರಡು ತಂಡಮ್ ನೆಲೆವೆರ್ಚುಗೆ. ಒದವಿದ ನಣ್ಪಿಮ್ ಕಲುಷಮ್ ಕರ್ಚುಗೆ. ಕುರುಕುಳತಿಳಕಾ, ಎನ್ನೆಂದ ನುಡಿಗೆ ನೀನ್ ತಲೆಯುರ್ಚದಿರ್. ದೋಷಮುಮ್ ಏವಮುಮ್ ಶಕುನಿಯಿನ್ ಯುವರಾಜನಿನ್ ಆಯ್ತು ಪೋಯ್ತು. ನಿರ್ದೋೀಷಿಗಳಪ್ಪ ನಿಮ್ಮೆರಡು ತಂಡಮುಮ್ ಇನ್ ಪುದುವಾಳ್ವುದು. ಅಂತು ಏನ್ ದೋಷಮೋ. ಮೇಣ್ ವೃಕೋದರನಿನ್ ಆ ರಣರಂಗದೊಳ್ ಆದ ದುಷ್ಟ ದುಶ್ಯಾಸನ ರಕ್ತಮೋಕ್ಷದೊಳೆ ದೋಷವಿಮೋಕ್ಷಮ್. ಅದೇಕೆ ಕೊಂಡಪ್ಪೈ.

(ಎಂದು ನುಡಿದ ಪಿತಾಮಹನ ನುಡಿಗಳ್ಗೆ ಕುರುರಾಜನ್ ಇಂತೆಂದನ್.)

**ದುರ್ಯೋಧನ:** ನೀಮ್ ಇಂತು ಶರಶಯ್ಯಾಗ್ರದೊಳ್ ಇರೆ; ಘಟಪ್ರೋದ್ಭೂತನ್ ಅಂತಾಗೆ; ವಾಸರನಾಥಾತ್ಮಜನ್ ರಣದೊಳ್ ಅಂತು ಸಾಯೆ; ತತ್ ವೃಕೋದರನಿನ್ ದುಶ್ಯಾಸನನ್ ಇಂತು ಅಳಿದು ಅಳ್ಗೆ ಸೈರಿಸಿಯುಮ್, ಆನ್ ವೈರಿಭೂಪರೊಳ್ ಸಂಧಾನಮನ್ ಇನ್ ಸಂಧಿಸಿ ಸಂಪತ್ತುಮನ್ ಶ್ರೀಯುಮನ್ ಆರ್ಗೆ ಮೆಱೆವೆನ್... ಪೇಳಿಮ್... ಬಿಡಿಮ್ ಎನ್ನ ನುಡಿಗೆ. ಅಜ್ಜ, ಬೀಳ್ಕೊಳೆ ಪೆಱತನ್ ನುಡಿಯದಿರಿಮ್. ಮುನ್ ನುಡಿದು ಎರಡನ್ ನುಡಿವೆನೆ. ಚಲಮನ್ ಬಲ್ವಿಡಿವಿಡಿದೆನ್. ಸಂಗರಧರೆಯೊಳ್ ತನ್ನಪ್ಪುದು ಅಕ್ಕೆ.

(ಎಂಬುದುಮ್)

**ಭೀಷ್ಮ:** ನೀನುಮ್ ಎಂತುಮ್ ಕಾದಿಯಲ್ಲದೆ ಇರೆಯಪ್ಪೊಡೆ, ಇಂದಿನ ಒಂದಿವಸಮನ್ ಎನ್ನ ಪೇಳ್ವ ಜಳಮಂತ್ರೋಪದೇಶಮನ್ ಕೆಯ್ಕೊಂಡು, ಕುರುಕ್ಷೇತ್ರದ ಉತ್ತರ ದಿಗ್ಭಾಗದ ವೈಶಂಪಾಯನ ಸರೋವರದೊಳ್ ಮುಳುಗಿ, ಕಾಲಾಗ್ನಿರುದ್ರನ್ ರಸಾತಳದೊಳ್ ಅಡಂಗಿ ಇರ್ಪಂತೆ ಇರ್ದು, ನಿನ್ನ ಅವಸರಕ್ಕೆ ಬಂದು ಕೂಡುವ ಬಲದೇವನುಮನ್, ನಿನ್ನ ಇರ್ದಎಡೆಯನ್

ಅಱಿಯದೆ ಅಱಿಸುವ ಅಶ್ವತ್ಥಾಮ ಕೃಪ ಕೃತವರ್ಮರುಮನ್ ಕೂಡಿಕೊಂಡು, ಪಗೆವರನ್ ನಾಳೆ ಕಾದಿ ಗೆಲ್ವುದು.

(ಎಂದು ಹಿತೋಪದೇಶಮ್ ಬೆರಸು ಜಳಮಂತ್ರೋಪದೇಶಮನ್ ಕಿವಿಯೊಳ್ ಪರ್ಚಿ ಪೇಳ್ದು, ಕುರುಪಿತಾಮಹನ್ ಸಂಜಯನನ್ ಧೃತರಾಷ್ಟ್ರನಲ್ಲಿಗೆ ಸಂಧಾನವಾರ್ತೆಯನ್ ಸಮಕೊಳಿಸುವಂತೆ, ಅನಾಗತ ಬಾಧಾ ಪ್ರತಿಷೇಧಮ್ ಮಾಡುವಂತೆ ಅಟ್ಟಿ, ಸಕಳ ಕುರುಕುಳ ಅವಲಂಬನ ಕಲ್ಪವೃಕ್ಷಮನ್ ಪರಸಿ ಪೋಗಲ್ವೇಳೆ, ದೇವನದೀಪ್ರಿಯಪುತ್ರನನ್ ಧೃತರಾಷ್ಟ್ರಪುತ್ರನ್ ಬೀಳ್ಕೊಂಡು, ಕನಕಪತ್ರ ಲತಾಲಾಂಛಿತ ಗದಾದಂಡಮನ್ ಕೊಂಡು ಒರ್ವನೆ ವೈಶಂಪಾಯನ ಸರೋವರದ ಬಟ್ಟೆಯನ್ ನಡೆಗೊಂಡು...)



# ೧೦೧. ದುರ್ಯೋಧನನು ವೈಶಂಪಾಯನ ಕೊಳವನ್ನು ಹೊಕ್ಕಿದ್ದು

(೭೦ ನೆಯ ಗದ್ಯದಿಂದ ೭೪ ನೆಯ ಗದ್ಯ)

**ಪಾತ್ರಗಳು**

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ

# ದುರ್ಯೋಧನನು ವೈಶಂಪಾಯನ ಕೊಳವನ್ನು ಹೊಕ್ಕಿದ್ದು

ದೇವನದೀಪ್ರಿಯಪುತ್ರನನ್ ಧೃತರಾಷ್ಟ್ರಪುತ್ರನ್ ಬೀಳ್ಕೊಂಡು ಕನಕಪತ್ರ ಲತಾಲಾಂಛಿತ ಗದಾದಂಡಮನ್ ಕೊಂಡು ಒರ್ವನೆ ವೈಶಂಪಾಯನ ಸರೋವರದ ಬಟ್ಟೆಯನ್ ನಡೆಗೊಂಡು, ಕ್ರಂದತ್ ಸ್ಯಂದನ. ಜಾತ ನಿರ್ಗತ ಶಿಖಿಜ್ವಾಲಾ ಸಹಸ್ರಂಗಳ್ ಆಟಂದು ಎತ್ತಮ್ ಕವಿದು ಅಳ್ವೆ, ಎತ್ತಮ್ ಬೇವ ಶವ ಸಂಘಾತಂಗಳನ್ ಚಕ್ಕುಮೊಕ್ಕೆಂದು ಆಗಳ್ ಕಡಿದು ಉಗ್ರಭೂತ ನಿಕರಮ್ ಕೆಯ್ ಬೇಯೆ ಬಾಯ್ ಬೇಯೆ ತಿಂಬ ಅಂದಮ್, ತನ್ನ ಮನಕ್ಕೆ ಅಗುರ್ವಿಸುವಿನಮ್ ದುರ್ಯೋಧನನ್ ನೋಡಿದನ್. ನೋಡಿ ಕನಲ್ವ ಕೆಂಡದ ಮೇಲೆ ಪಳೆಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ ಬಳ್ಳುವಿನ ಬಾಯೊಳ್ ಅಳುರ್ವ, ಕೆಂಡಂಗಳೊಳ್ ಸುಳಿದು ಬೇವ ಪೆಣಂಗಳ ಕಂಪು ನಾಱುವುದರ್ಕೆ ಸೈರಿಸಲಾಱದೆ, ಕೋಳ್ದಾಂಟಿನೊಳ್ ಕೊಳುಗುಳವನ್ ಕಳಿದು ಪೋಗಿ, ವಿಳಯಕಾಳ ವಿಘಟ್ಟಿತ ಅಷ್ಟ ದಿಗ್ಭಾಗ ಸಂಧಿ ಬಂಧನ ಗಗನತಳಮೆ ಧರಾತಳಕ್ಕೆ ಪಱಿದು ಬಿಳ್ದಂತಾನುಮ್, ಆದಿವರಾಹನ್ ಸಮುದ್ರಮುದ್ರಿತ ಧರಾಮಂಡಳಮನ್ ರಸಾತಳದಿಂದೆ ಎತ್ತಿ ಬಂದಂದು ನಭೋಮಂಡಳಸ್ಥಾನಮೆ ಸಲಿಲ ಪರಿಪೂರಿತಮ್ ಆದಂತಾನುಮಾಗಿ...

ಇದು ಪಾತಾಳ ಬಿಲಕ್ಕೆ ಬಾಗಿಲ್. ದಲ್, ಘೋರಾಂಧಕಾರಕ್ಕೆ ಮಾಡಿದ ಕೂಪಮ್; ಇದು ಪೆಱತಲ್ತು; ಉಗ್ರ ಕಾಳಾಂಭೋಧರಚ್ಛಾಯೆ ತಾನೆ ದಲ್ ಎಂಬಂತಿರೆ, ಕಾಚ ಮೇಚಕಚಯ ಛಾಯಾ ಅಂಬುವಿನ್ ಗುಣ್ಪಿನಿಮ್ ಪುದಿದು ಬಕ ಬಳಾಕ ಆನೀಕ ರಾವಾಕುಳಮ್ ಸರೋವರಮ್ ಇರ್ದತ್ತು.

**ಹಕ್ಕಿಗಳು:** (ದುರ್ಯೋಧನನನ್ನು ಕುರಿತು)

ಅದಟಿನ ವಿಕ್ರಮಾರ್ಜುನನ ಸಾಹಸಭೀಮನ ಕೋಪ ಪಾವಕಮ್ ಪುದಿದು ಅಳುರ್ದು ಇಲ್ಲಿಯುಮ್ ಎಮ್ಮನ್ ಅಳ್ವಿಕೊಳ್ಳದೆ ಇರದು. ಇಲ್ಲಿ ಬಾಳ್ವರನ್ ಕದಡದಿರ್... ಇತ್ತ ಬಾರದಿರ್... ಸಾರದಿರ್.

(ರುಂದ್ರ ಫಣೀಂದ್ರ ಕೇತುವನ್ ಎಂಬವೊಲ್ ಉನ್ಮದಕಳಹಂಸ ಕೋಕನಿಕರಧ್ವನಿ ಎತ್ತಮ್ ಆದುದು. ಅಂತು ಎಸೆವ ಪುಂಡರೀಕಷಂಡ ಉಪಾಂತಮನ್ ಎಯ್ದೆವಂದು, ಅನೇಕ ವ್ರಣಗಳಿತ ನವರುಧಿರಮಾಗಿರ್ದ ತನ್ನ ಮೆಯ್ಯನ್ ಒರಸಿ, ಕರ್ಚಿ, ಮುಕ್ಕುಳಿಸಿ, ಉಗುಳ್ದು, ಆಚಮಿಸಿ ಜಳದೇವತೆಗಳ್ಗೆ ಪೊಡೆವಟ್ಟು, ಜಳಮಂತ್ರಾಕ್ಷರಂಗಳಿನ್ ಸರೋವರಮನ್ ಅಭಿಮಂತ್ರಿಸಿ, ನಿಜ ತೇಜದಿನ್ ಸಮಸ್ತ ಭೂವಳಯಮನ್ ಬೆಳಗಿ, ಆಂತ ದೈತ್ಯರನ್ ತಳವೆಳಗಾಗೆ ಕಾದಿ ಚಳಿತು, ಎಯ್ದೆ ಬಳಲ್ದು, ಅಪರಾಂಬು ರಾಶಿಯೊಳ್ ಮುಳುಗುವ ತೀವ್ರದೀಧಿತಿವೊಲ್ ಫಣಿರಾಜಕೇತನನ್ ಆ ಕೊಳದೊಳ್ ಮುಳುಗಿದನ್. ಬಿದಿಯ ಕಟ್ಟಿದುದನ್ ಕಳೆಯಲ್ಕೆ ಆರ್ಗಮ್ ಏನ್ ತೀರ್ಗುಮೇ. ಅಂತು ವಜ್ರಿಯ ವಜ್ರಹತಿಗೆ ಅಳ್ಕಿ ಕುಲಗಿರಿ ಜಳದಿಯನ್ ಪುಗುವಂತೆ ದುರ್ಯೋಧನನ್ ಕೊಳನಮ್ ಪೊಕ್ಕಿರ್ದನ್.)



# ೧೦೨. ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ದುರ್ಯೋಧನನಿಗಾಗಿ ಹುಡುಕಾಟ

(೭೪ ನೆಯ ಗದ್ಯದಿಂದ ೯೧ ನೆಯ ಗದ್ಯ)

## ಪಾತ್ರಗಳು

| | |
|---|---|
| ಧರ್ಮರಾಯ: | ಪಾಂಡುರಾಜ ಮತ್ತು ಕುಂತಿಯ ಮಗ. |
| ಭೀಮ: | ಪಾಂಡುರಾಜ ಮತ್ತು ಕುಂತಿಯ ಮಗ. |
| ವಿಂಧ್ಯಕ: | ಭೀಮನ ಸೇವಕ. |
| ಕೃಷ್ಣ: | ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ. |
| ದುರ್ಯೋಧನ: | ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ. |
| ಬಲರಾಮ: | ಕೃಷ್ಣನ ಅಣ್ಣ. ದ್ವಾರಾವತಿ ಪಟ್ಟಣದ ರಾಜ. |

# ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ದುರ್ಯೋಧನನಿಗಾಗಿ ಹುಡುಕಾಟ

ಅಂತು ವಜ್ರಿಯ ವಜ್ರಹತಿಗೆ ಅಳ್ಕಿ ಕುಲಗಿರಿ ಜಳಧಿಯನ್ ಪುಗುವಂತೆ ದುರ್ಯೋಧನನ್ ಕೊಳನಮ್ ಪೊಕ್ಕಿರ್ದನ್. ಅನ್ನೆಗಮ್ ಇತ್ತ ಧರ್ಮಪುತ್ರನ್ ಶಲ್ಯವಧೆಯಿನ್ ಬಳಿಯಮ್ ರಾಜರಾಜನನ್ ಕೊಳುಗುಳದೊಳ್ ಅಱಸಿಯುಮ್ ಕಾಣದೆ...

**ಧರ್ಮರಾಯ:** ನಮ್ಮ ಮಾಡುವ ಕರ್ತವ್ಯಮ್ ಆವುದು. ಏನ್ ಗೆಯ್ವಮ್ ಪೇಳಿಮ್.

(ಎಂದು ನಾರಾಯಣನನ್ ಬೆಸಗೊಳೆ, ಮಧುವನಿತಾವದನ ಕಮಳಹಿಮಕರನ್ ಇಂತು ಎಂದನ್...)

**ಕೃಷ್ಣ:** ಇಂದಿನ ನೇಸಱಿಂದೊಳಗೆ ಅರಾತಿಯನ್ ಇಕ್ಕದೆ ಮಾಣ್ದೆಮಪ್ಪೊಡೆ ಇನ್ನೆಂದುಮ್ ಅಸಾಧ್ಯನ್. ಇಂದೆ ಹಳಿಯುಮ್ ಆತನನ್ ಕೂಡವನ್ ಗಡ. ಬಳಿಕ್ಕೆ ಗೆಲಲ್ ಬಂದಪುದೇ. ಅದುವೆ ಕಾರಣಮಾಗಿ ಅಂಧರಾಣ್ಣಂದನನ್ ಉಳಿದಿರ್ದನ್. ಅಲ್ಲದೆ ಉಂತೆ ರಣರಂಗಭೂಮಿಯೊಳ್ ತಲೆ ಉರ್ಚುಗುಮೇ.

(ಎಂಬುದುಮ್ ಜಳಧರಸಮಯ ನಿಶಾಸಂಚಲಿತ ವಿದ್ಯುತ್ ಪಿಂಗಳಾಕ್ಷ ಪಾತಂಗಳಿಮ್ ದೆಸೆಗಳನ್ ನುಂಗುವಂತೆ ಮುಳಿದು ನೋಡಿ, ಜರಾಸಂಧಸಂಧಿಬಂಧ ವಿಘಟನನ್ ಇಂತು ಎಂದನ್.)

**ಭೀಮ:** ಕಡಲನ್ ಪೊಕ್ಕೊಡೆ ಕಡಲನ್ ಪೀರ್ದಪೆನ್. ಪಾತಾಳಮನ್ ಪೊಕ್ಕನಪ್ಪೊಡೆ ಶೇಷಾಹಿಯ ಪಲ್ಗಳನ್ ಮುಱಿದಪೆನ್. ಬ್ರಹ್ಮಾಂಡಮನ್ ಪೊಕ್ಕನಪ್ಪೊಡಮ್ ಆ ಬ್ರಹ್ಮನ ಗಂಟಲನ್ ಮುಱಿದಪೆನ್. ಬಾಣಾಂತಕಾ, ದುರ್ಯೋಧನಂಗೆ ಇನ್ ಪುಗಲ್ಕೆ ತ್ರೈಭೂಭುವನಂಗಳಿನ್ ಪೊಱಗೆ ಎಡೆ ಮತ್ತೆ ಎಲ್ಲಿತ್ತೊ.

(ಎಂಬನ್ನೆಗಮ್ ವೃಕೋದರನ್ ಅಟ್ಟಿದ ಕಿರಾತನ್ ವಿಂಧ್ಯಕನ್ ಎಂಬನ್ ಬಂದು...)

**ವಿಂಧ್ಯಕ:** ದುರ್ಯೋಧನನನ್ ಎಲ್ಲಿಯುಮ್ ಅಱಸಿ ಕಾಣದೆ, ವೈಶಂಪಾಯನ ಸರೋವರಕ್ಕೆ ನೀರ್ ಕುಡಿಯಲೆಂದು ಪೋಗಿ, ಕೊಳದ ತಡಿಯೊಳ್ ಹಳಕುಳಿಶ ಶಂಖಚಕ್ರ ಲಾಂಛಿತಮಪ್ಪ ಅಡಿವಜ್ಜೆಯನ್ ಕಂಡು ಬಂದೆನ್.

(ಎಂದು ಪೇಳ್ವುದುಮ್ ಅಂಬುಜನಾಭನ್...)

**ಕೃಷ್ಣ:** ಅವನ ಮಾತಿನೊಳ್ ಯುಕ್ತಿಯುಂಟು. ಎಂತೆಂದೊಡೆ ಅಮರನದೀನಂದನ ಉಪದೇಶದಿಂದ ಆತನ್ ಕೊಳನನ್ ಪೊಕ್ಕು, ಕಾಲವಂಚನೆ ಗೆಯ್ಯಲ್ ಇರ್ದನಕ್ಕುಮ್.

(ಎಂದು ಆ ಕೊಳನನ್ ಮುಟ್ಟೆವಂದು, ಅದಱ ತಡಿಯೊಳ್ ಶಂಖ ಚಕ್ರ ಹಳಕುಳಿಶ ಲಾಂಛಿತಮ್ ಆಗಿರ್ದ ಅಡಿವಜ್ಜೆಯನ್ ನೋಡಿ)

**ಕೃಷ್ಣ:** ದುರ್ಯೋಧನನ ಪಜ್ಜೆಯಪ್ಪುದು. ಏನುಮ್ ತಪ್ಪಿಲ್ಲ.

(ಎಂದು ಕಳಕಳ ನಿನಾದಂಗಳಿಂದ ಆರ್ದು, ಶಂಖಂಗಳನ್ ಪೂರಿಸಿಯುಮ್, ಭೇರಿಯನ್ ತಾಡಿಸಿಯುಮ್ ಏನ್ ಗೆಯ್ದುದುಮ್ ಪೊಱಮಡದಿರೆ ಭೀಮಸೇನನ್...)

**ಭೀಮ:** ಎನ್ನ ಸರಂ ಕೇಳ್ದಲ್ಲದೆ ಈ ಬೂತು ಪೊಱಮಡುವನಲ್ಲನ್. ಈತಂಗೆ ಆನೆ ಬಲ್ಲೆನ್. ಉಸಿರದಿರಿಮ್.

(ಎಂದು ಸಕಳ ದಿಗ್ವಳಯಭರಿತ ಮಹಾಸಿಂಹನಾದದಿಂದೆ ಅಲ್ಲಿಯ ಜಳಚರಂಗಳ ಎರ್ದೆ ಪೌವನೆ ಪಾಱುವನ್ನೆಗಮ್ ಆರ್ದು...)

**ಭೀಮ:** ಕಿಱಿಯಂದಿಂದಿತ್ತ ದುರ್ಯೋಧನನ್ ಎನಿಸಿದ ವಿಕ್ರಾಂತಮ್ ಏನಾದುದು... ಎಳ್ತಂದು ಇಱಿವ ಉರ್ಕು ಎಲ್ಲಿತ್ತೊ... ಪಾಂಚಾಳಿಯನ್ ಎಳೆವ ಅದಟು ಏನಾದುದೋ ಗಂಡ. ಪೇಳ್, ಪೊಚ್ಚಱಿನ ಅಂತು ಆ ಮಾತುಮ್... ಇಂತು ಈ ಇರವು ಎನೆ ನಗೆಯನ್ ಮಾಡಿದಯ್. ಬಂದನ್ ಈತನ್ ಪೆಱನಲ್ಲ.

ದುರ್ಜಯನ್ ಕೌರವಕುಳ ನಳಿನೀ ಕುಂಜರನ್ ಭೀಮಸೇನನ್

ದುಶ್ಶಾಸನೋರಸ್ಥಳ ವಿಗಳದಸೃಗ್ವಾರಿಯನ್ ಕುಡಿದೆನ್. ಅದನ್ ಕಂಡು ಮುನ್ ನಡೆ ನೋಡುತ್ತ ಅಳ್ಕಿ ಮಾಣ್ದಯ್. ಇಂದು ಇಱಿವದಟನ್ ಆರ್ ಕೊಟ್ಟರ್ ಮಾಣಲ್ಕೆ ಎಡೆಯುಂಟೇ. ಸಿಲ್ಕಿದೈ... ಪೋ... ಕೊಳದಿನ್ ಪೊಱಮಡು.

ನೀನ್ ಸತ್ತೊಡಮ್ ಪುಟ್ಟ, ಈಗಡೆ ದಲ್ ಕೊಂದಪ್ಪೆನ್. ದ್ರೋಹ, ಎನ್ನನ್ ಮುಳಿಯಿಸಿ ನಿನಗೆ ಇನ್ ಬಾಳ್ವಾಸೆ ಉಂಟೇ. ಮಾನಸಿಕೆಯೆ ದೊರೆಗಿಡೆ, ನೀರ್ಮಾನಸನ್ ಎನೆ ನೀನುಮ್ ಎಲವೋ, ನೀರೊಳ್ ಮೀನ್ ಎಂಬ ಈ ನೆವದೆ ಇರ್ದೆ. ಅಭಿಮಾನದ ಕಲಿತನದ ಪರಮಪದಮ್ ಇದೇನ್ ಎಯ್ದಿದೆಯೋ. ಅದಟಿನ ಅಳುರ್ಕೆಯನ್ ನಿಱಿಸಿ, ನಿನ್ನ ನಿಸೇಕದ ಪೊಳ್ತು ತಪ್ಪಲೀಯದೆ ತಡೆಯದೆ, ಈಗಳೆ ಪೊಱಮಟ್ಟು ಬಾ. ನೀನ್ ಇನಿಸು ಇರ್ದೆಯಪ್ಪೊಡೆ, ಏನ್ ತೊದಳೋ... ಸರೋವರ ಅಂಬುವನಿತನ್ ತವೆ ತುಳ್ಕಿ, ರಸಾತಳಂಬರಮ್ ಬೆದಕಿಯುಮ್ ಎಂತುಮ್ ಅಪ್ಪಳಿಸಿ ಕೊಂದಪೆನ್. ಸುಯೋಧನಾ, ಏಳ್ವುದು ಇದೇನ್...

(ಎಂದು ವಿಳಯಕಾಳಜಳಧರನಿನಾದದಿನ್ ಗಜಱಿ ಗರ್ಜಿಸಿದ ಜಟಾಸುರಾರಾತಿಯ ಗಳಗರ್ಜನೆಗೆ ಕರಿಕಳಭ ಗರ್ಜನೆಗೆ ಏಳ್ವ ಮೃಗರಾಜನಂತೆ ರಾಜರಾಜನ್ ಸೈರಿಸದೆ ಚಿತ್ತಸ್ಖಲನೆಯಾಗೆ ಜಳಸ್ತಂಭಮಂತ್ರಮೆಲ್ಲಮ್ ಮಾಯಾಮಂತ್ರಮಾಗೆ...)

**ದುರ್ಯೋಧನ:** (ತನ್ನಲ್ಲಿಯೇ)

ಪಗೆವನ್ ಬಂದು ಉಱದೆ ಇಂತು ಮೂದಲಿಸೆಯುಮ್, ಮಾತನ್ ಕಿವುಳ್ಗೇಳ್ದು ಕೆಮ್ಮಗೆ ನೀರೊಳ್ ಮುಳುಗಿರ್ದೊಡೆ ಮತ್ ಶೌರ್ಯಮ್ ಅಳ್ದು ಕಿಡುಗುಮ್.

(ಎಂದು ಉದ್ಧತನ್ ನೆಗೆದಾಗಳ್, ವಿಳಸತ್ ಕಿರೀಟ ರತ್ನಾಂಶು ಪ್ರಭಾರಾಜಿ ತೊಟ್ಟಗೆ ಕೆಯ್ಗಣ್ಮೆ, ಆ ಪೂಗೊಳನ್ ಸುರೇಂದ್ರ ಚಾಪರುಚಿಯನ್ ಕೆಯ್ಕೊಂಡುದು. ಪೊದಳ್ದ ಬೊಬ್ಬುಳಿಕೆಗಳ್ ನೆಗೆಯೆ, ನೆಗೆದಂತೆ ಎರಡುಮ್ ಕೆಲಕ್ಕೆ ನೀರ್ ಉಗಿಯೆ, ಗದಾಭಿಘಾತ ಪರಿಪೂರಿತತೋಯಜಷಂಡಮ್ ಅಲ್ಲಿಗಲ್ಲಿಗೆ

ಕದಡೇಳೆ, ಭೀಮಭುಜ ಮಂದರ ಘಟ್ಟನೆಯಿಂದಮ್ ತೊಟ್ಟಗೆ ಕೊಳೆ, ಕಾಳಕೂಟಮ್ ಒಗೆವಂತೆ ಫಣಿರಾಜಕೇತನನ್ ಒಗೆದನ್. ಅಂತು ಒಗೆದು ದಿಕ್ಕರಿಕರಾನುಕಾರಿ ಕರಪರಿಘೋತ್ತಂಸಿತ ತೋರಣೀಕೃತ ರೌದ್ರಗದಾದಂಡನುಮ್ ಪ್ರಚಂಡನುಮಾಗಿ ಸೆರಗಿಲ್ಲದೆ ಕೊಳದಿನ್ ಪೊಱಮಟ್ಟು ಬರ್ಪ ದುರ್ಯೋಧನನನ್ ಧರ್ಮಪುತ್ರನ್ ನೋಡಿ...)

**ಧರ್ಮರಾಯ:** (ತನ್ನ ಮನದಲ್ಲಿ)

ನಡಪಿದ ನಂಟರ್, ಎಯ್ದೆ ಪೊರೆದ ಆಳ್, ಉಳ್ಳರೆಲ್ಲರುಮ್ ರಣರಂಗದೊಳ್ ಮಡಿದೊಡಮ್, ಉರ್ಕುಗುಂದದೆ ಉಗುರಂತೆ ಎರಡುಮ್ ಕಡೆ ತಪ್ಪ ಕೂರ್ಪನ್ ಓಗಡಿಸದೆ ಮೆಯ್ಯೊಳೆ ತಾಳ್ದಿ, ವೃಕೋದರನ ಒಂದೆಸರಕ್ಕೆ ಕಾಯ್ಪೊಡಂಬಡೆ ಸಿಡಿಲೇಳ್ಗೆಯಿನ್ ಮಸಗಿ ಬಂದನ್. ಏನ್ ಕಲಿಯೋ ಸುಯೋಧನನ್.

(ಎಂಬ ಅನ್ನೆಗಮ್ ಎಯ್ದೆವಂದು ದುರ್ಯೋಧನನ್ ಪಾಂಡುತನೂಜರನ್ ಇಂತು ಎಂದನ್.)

**ದುರ್ಯೋಧನ:** ಮುನ್ ಎಳೆ ದೈತ್ಯನ ಕೆಯ್ಗೆ ಪೋಗೆ, ತರಲೆಂದು ಈ ಚಕ್ರಿ ಮುನ್ನಮ್ ರಸಾತಳಮನ್ ಪೊಕ್ಕುದುಮ್, ಈ ಮಹೋಗ್ರರಣದೊಳ್ ನಿಮ್ಮೊಂದು ಕೆಯ್ವಿಳ್ದ ಭೂತಳಮನ್ ಮತ್ತೆ ತರಲ್, ಆನುಮ್ ವಿಶುದ್ಧನಿಯಮ ಪ್ರಾರಂಭದಿನ್ ಈ ಕೊಳನನ್ ಪೊಕ್ಕುದುಮ್, ಆವ ದೋಷಮ್. ಇನ್ ಎನಗೆ ಮಾಱಾಂಪರ್ ಆರ್ ತೋಱಿರೇ.

(ಎಂಬುದುಮ್ ಧರ್ಮಪುತ್ರನ್ ಇಂತು ಎಂದನ್.)

**ಧರ್ಮರಾಯ:** ಇನ್ನಪ್ಪೊಡಮ್ ಏವಮನ್ ಬಿಸುಡು. ಧರಣಿಯನ್ ಪಚ್ಚಿ ಆಳ್ವಮ್. ಈ ಕಿಸುರೊಳ್ ಏನ್ ಅಪ್ಪುದು. ಕೆಮ್ಮನೆ ಪಾಪಕರ್ಮ ಚಲಮನ್ ಕೊಂಡಾಡದೆ, ಎಮ್ಮಯ್ವರುಮ್ ಬೆಸಕೆಯ್ಯುತ್ತಿರೆ ನೀನೆ ಮೇಣ್ ಅರಸುಗೆಯ್. ಸೌದರ್ಯದಿಂದೆ ವಸುಧಾಮಂಡಳಮ್ ಒಳ್ಳಿತೇ ಇದನ್ ಇಂಬುಕೆಯ್ವುದು. ಆನ್ ಕೆಯ್ಯೊಡ್ಡಿದೆನ್ ಬೇಡಿದೆನ್.

(ಎಂಬುದುಮ್ ಅಂಬುಜೋದರನ್ ಇಂತು ಎಂದನ್.)

**ಕೃಷ್ಣ:** ಅಯ್ದು ಅಳಿವಾಡದೊಳ್ ಅಯ್ವರುಮನ್ ನೀನ್ ಕೂರ್ತು ಇರಿಸು ಎಂದೊಡಮ್, ಎಂತುಮ್ ಏನ್ ಗೆಯ್ದುಮ್ ಅದು

ಒಲ್ಲದ ಕಾರಣದಿಂದಮ್ ನೋಡ... ಇನಿತು ಆದುದು. ನಿನ್ನೊಳ್ ಧರ್ಮತನೂಜನ್ ಏನ್ ಸಯ್ದುವನಲ್ಲನೆ. ಪೇಳ್ದುದನ್ ಎಮಗೆ ಇಂಬುಕೆಯ್. ಸಯ್ದನೆ ಆಗು. ಫಣಿಕೇತನಾ, ಉಳಿದ ಆರೊಳಮ್ ಇನ್ ಏವಂಗೊಳ್ಳದಿರ್.

(ಎಂಬುದುಮ್ ಆ ಮಾತನ್ ಕೆಳಗಿವಿಗೆಯ್ದು, ತನ್ನ ಗದಾದಂಡಮನ್ ಭುಜಾದಂಡದೊಳ್ ಅಳವಡಿಸಿ ನೋಡಿ ದುರ್ಯೋಧನನ್ ಇಂತು ಎಂದನ್.)

**ದುರ್ಯೋಧನ:** ಮುನ್ ನಿಮ್ಮ ಪೇಳ್ದು ಗೆಯ್ಯದನ್, ಇನ್ ಈ ಪದದಲ್ಲಿ ಪೇಳ್ದು ಗೆಯ್ವಂತೆ ಉಂತೆ ಪನ್ನಗಪತಾಕನಲ್ಲನೆ. ಬಿನ್ನಣವಡೆಮಾತನ್ ಎನ್ನೊಳ್ ಇನ್ ನುಡಿಯದಿರಿಮ್. ರಣದೊಳ್ ಆ ದುಶ್ಶಾಸನನನ್ ಪೊರಳ್ಚಿ ಕೊಂದ ಈ ಮರುತ್ಪುತ್ರನ್ ಇಂತು ಆದಮ್ ದಳ್ಳಿಸೆ, ನೋಡಿ ನೋಡಿ ಪುದುವಾಳ್ ಎಂತಕ್ಕುಮ್. ಇಂತು ಈಗಳ್ ಆನ್ ಆದೆನ್ ಮೇಣ್ ಇವನ್ ಆದನ್. ಏಕೆ ತಡೆವಿರ್. ಕಯ್ವೊಯ್ದೆವು. ಇನ್ ನೀಮ್ ಸೌದರ್ಯಕ್ಕೆ ಕನಲ್ವೊಡೆ ಇಂತು ಇನಿಬರುಮ್ ಕಾದಿಮ್, ಭರಂಗೆಯ್ದಪೆನ್.

(ಎಂಬನ್ನೆಗಮ್ ತೀರ್ಥಯಾತ್ರೆಯೊಳ್ ತೊಡರ್ದು ತಡೆದ ಬಲದೇವನ್ ದುರ್ಯೋಧನಂಗೆ ಆಯು ಬರ್ಪಂತೆ ಪೆಗಲೊಳ್ ಹಲಾಯುಧಮನ್ ಇಕ್ಕಿಕೊಂಡು ಜಂಗಮ ಪರ್ವತಮೆ ಬರ್ಪಂತೆ ಬಂದು, ತನಗೆ ಪೊಡೆವಟ್ಟ ದುರ್ಯೋಧನನನ್ ಪರಸಿ, ಪಿರಿದುಮ್ ಅಳ್ಕರಿಂದ ಅಪ್ಪಿಕೊಂಡು, ಆತಂಗೆ ಆದ ಅವಸ್ಥೆಯನ್ ಕಂಡು, ಮನ್ಯುಗದ್ಗದಕಂಠನಾಗಿ ತನಗೆ ಎಱಗಿದ ಮುರಾಂತಕನುಮನ್ ಪಾಂಡವರುಮನ್ ಪರಸಲ್ ಒಲ್ಲದೆ..)

**ಬಲರಾಮ:** ಇದು ಏನನ್ ಮಾಡಿದಿರಿ.

(ಎಂದೊಡೆ ಮಧುಮಥನನ್ ಅಣ್ಣನ ಮುನಿದ ಮೊಗಮನ್ ಅಱಿದು ಇಂತು ಎಂದನ್.)

**ಕೃಷ್ಣ:** ಮುಳಿವೊಡಮ್ ಎಯ್ದೆ ಕೇಳ್ದು ಮುಳಿ. ಪಾಂಡುತನೂಜರ ಮುನ್ನಿನ ಆಳ್ದ ಭೂತಳಮನ್ ಎಂತುಮ್ ಈಯದೆ, ಸುಯೋಧನನ್ ಉದ್ಧತವೃತ್ತಿಯಿನ್ ಸುಹೃದ್ಬಳಮ್ ಅಳಿದು ಅಳ್ಗಿ

ಕಾದಿ, ಪುದುವಾಳ್ಕೆಗೆ ಒಲ್ಲದೆ, ಇನ್ನುಮ್ ಅವ್ವಳಿಸುವನ್. ಈಗಳ್ ಆತನನೆ ಬೆಸಗೊಳ್. ಸುಯೋಧನನ್ ಪುಸಿಯನ್.

(ಎನೆ)

**ಬಲರಾಮ:** ನೀನ್ ಮರುಳ್ತನಮನ್ ಏಕೆ ಮಾಡಿದೆ.

(ಎಂದು ತನ್ನ ಮೊಗಮನ್ ನೋಡಿದ ಹಲಾಯುಧಂಗೆ ದುರ್ಯೋಧನನ್ ಇಂತು ಎಂದನ್.)

**ದುರ್ಯೋಧನ:** ಹರಿ ಎಂದ ಅಂದಮ್ ಪಾಂಡುತನಯರ್ ನಿರ್ದೋಷಿಗಳ್ ತಥ್ಯಮ್. ಇಂತು ರಣಸ್ಥಾನದೊಳ್ ಎರಳ್ನುಡಿವೆನೇ. ಮತ್ ಬಂಧು ಶೋಕಾಗ್ನಿಯಿನ್ ಉರಿದಪ್ಪೆನ್. ತೊಡರ್ದ ಎನ್ನನ್ ಇನ್ ಬಿಡು. ವಿರೋಧಿಕ್ಷ್ಮಾಪರ್ ಎನ್ನ ಈ ಗದಾಪರಿಘಾತದಿನ್ ಅಳ್ಗಿ ತಳ್ಗಿ ಮಡಿದು ಇನ್ ಅಳ್ಕಾಡದೆ ಏನ್ ಪೋಪರೇ.

(ಎಂಬುದುಮ್ ಸಂಕರ್ಷಣನ್ ಆತನ ಮನದ ಉತ್ಕರ್ಷತೆಯನ್ ಅಱಿದು...)

**ಬಲರಾಮ:** ಪೆಱತನ್ ಇನ್ ಎನಗೆ ನುಡಿಯಲ್ ಎಡೆಯಿಲ್ಲ. ಧರ್ಮ ಯುದ್ಧಮನ್ ನೋಡಲ್ವೇಳ್ಕುಮ್.

(ಎಂದು ಧರ್ಮಪುತ್ರನನ್ ಇಂತು ಎಂದನ್.)

ನಿಮ್ಮ ಅಯ್ವರೊಳ್ ಒರ್ವನ್ ಈತನೊಳ್ ಕಾದುವುದು. ಕಾದಿ ಸೋಲ್ತಿಮ್ ಬಳಿಯಮ್ ದುರ್ಯೋಧನನ್ ನೆಲನನ್ ಆಳ್ವನ್. ಉಳಿದ ನಾಲ್ವರುಮ್ ಆತಂಗೆ ಬೆಸಕೆಯ್ವುದು. ಆರ್ ಕಾದಿದಪಿರ್.

(ಎನೆ, ಭೀಮಸೇನನ್ ಇಂತು ಎಂದನ್.)

**ಭೀಮ:** ಸುಯೋಧನನನ್ ಎನ್ನುಮನ್ ತೊಡರ್ದು ಬಿಡಿಮ್. ಕೌರವಾಧಿಪಂಗೆ ಇಡುವಗೆ ಆನ್ ಇರೆ, ಇನ್ ಪೆಱರೊಳಮ್ ಮುಳಿಸುಂಟೆ ಪೇಳಿಮ್. ಮಹಾ ಪ್ರತಿಜ್ಞೆಯೊಳ್ ತೊಡರ್ದುನುಮ್ ಆನೆ. ಭೂತಳಮ್ ಅದು ಇರ್ಕೆ. ಎಡೆಗೆಯ್. ಗೆಲಲ್ ಆರ್ತರ್ ಆರ್ಗೆ. ಎರಳ್ನುಡಿಯದಿರ್.

(ಎಂದು ವೃಕೋದರನ್ ಹಳಿಯನ್ ನಯದಿನ್ ಒಡಂಬಡಿಸಿದನ್ ಅಂತು ಒಡಂಬಡಿಸಿ ಸಂಗ್ರಾಮರಂಗಕ್ಕೆ ಅನಿಬರುಮನ್ ಒಡಗೊಂಡು ಬಂದು...) 

## ೧೦೩. ಗದಾಯುದ್ಧ

(೯೧ ನೆಯ ಗದ್ಯದಿಂದ ೯೮ ನೆಯ ಗದ್ಯ)

### ಪಾತ್ರಗಳು

**ಭೀಮ:** ಪಾಂಡುರಾಜ ಮತ್ತು ಕುಂತಿಯ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

**ಬಲರಾಮ:** ಕೃಷ್ಣನ ಅಣ್ಣ. ದ್ವಾರಾವತಿಯ ರಾಜ

# ಗದಾಯುದ್ಧ

ಅಂತು ಒಡಂಬಡಿಸಿ ಸಂಗ್ರಾಮರಂಗಕ್ಕೆ ಅನಿಬರುಮನ್ ಒಡಗೊಂಡು ಬಂದು...

**ಭೀಮ:** (ತನ್ನ ಮನದಲ್ಲಿ)

ಕರಿ ತುರಗ ನರ ಕಳೇವರ ಪರಿಚಿತ ರಣದಲ್ಲಿ ಮಹೀತಳಮ್ ಕಾದಲ್ಕೆ ಇಂತು ಅರಿದಪ್ಪುದು. ಎಂತಿದು ಎಂದು....

(ಅಣಮ್ ಇರದೆ ಮರುತ್ಸೂನು ಕೊಳಗುಳಮನ್ ಸಮಱಿದನ್. ಅಂತು ಸಮಱಿದ ಸಂಗ್ರಾಮರಂಗದೊಳ್ ಪರಸ್ಪರ ವಿರೋಧ ಕ್ರೋಧಾಧಿಕ್ಷೇಪ ಹರ್ಷಿತ ಮಾರ್ಗ ಪ್ರಹಸ್ತ ಪ್ರಸಾಧಿತ ಘೋರ ಸಂಗ್ರಾಮರುಮ್, ಅತ್ಯುಗ್ರ ಗದಾ ಪರಿಘ ಭಾಸುರ ಭುಜ ಪರಿಘರುಮಪ್ಪ ಭೀಮ್ ದುರ್ಯೋಧನರ್ ಇರ್ವರುಮ್, ಒರ್ವರ್ ಒರ್ವರನ್ ಮೂದಲಿಸಿ, ಸವ್ಯ ಅಪಸವ್ಯ ಭ್ರಾಂತ ಉದ್ಭ್ರಾಂತ ಕರ್ಷಣ ಮಂಡಳಾವರ್ತನಾದಿಗಳಪ್ಪ ಮೂವತ್ತೆರಡು ಗದಾ ವಿಕ್ಷೇಪದೊಳಮ್ ಅತಿಪರಿಚಿತರಾಗಿ ಕಾದುವಾಗಳ್.

ಕುಲಾಚಳಪ್ರತತಿಗಳ್ ಮೊದಲಿನ್ ಕಿಳ್ತು, ಪ್ರೋದ್ಯತ್ ಗದಾಘಾತವಾತದಿನ್ ಆಕಾಶಮನ್ ಎಯ್ದೆ ತೂಳ್ದಿ, ಕವಿತಂದು ಅಂಭೋಧಿಯೊಳ್ ಸೂಳ್ಸೂಳಿಂದೆ ಬೀಳ್ತಂದುವು. ಆ ವಾರಾಶಿಗಳ್ ಬತ್ತಲ್ ಆಟಿಸಿದುವು. ಸುರ್ಕಿ ಬಿಕ್ಕಿದ ಬಾಯಂತೆ ಅಂಬರಮ್ ಸುರುಳ್ದುದು. ಗದಾಯುದ್ಧದ ಪೆಂಪು ಇದೇನ್. ಗದೆಯೊಳ್ ಘಟ್ಟಿಸೆ ಪುಟ್ಟಿದ ಉಲ್ಕ ತತಿ ನೀಳ್ದು ಆಕಾಶಮನ್ ತಾಪಿನಮ್, ಆ ದೇವರ ಕಣ್ಣೊಳ್ ಪುದಿದು ಉಳ್ಕೆ ವಿಳಯೋಳ್ಕಾಶಂಕೆಯನ್ ಮಾಡೆ, ಮೆಟ್ಟಿದ ಸೂಳ್ಮೆಟ್ಟುಗಳಿಂದೆ ಬೆಟ್ಟು ಕಳಲಲ್, ಭೂಭಾಗಮ್ ಅಳ್ಳಾಡೆ, ದುರ್ಯೋಧನ

ಭೀಮಸೇನರ ಗದಾಯುದ್ಧಮ್ ಮಹಾಭ್ಯೆರವಮ್ ಆದುದು. ಅಂತು ಇರ್ವರುಮ್ ಒರ್ವರ್ ಒರ್ವರೊಳ್ ಬೀರಮನ್ ಬಿನ್ನಣಮುಮನ್ ಮೆಱೆದು ಕಾದೆ, ದುರ್ಯೋಧನನ್ ವಿದ್ಯಾಧರ ಕರಣದೊಳ್ ಅತಿಪರಿಚಿತನಪ್ಪುದಱಿಂದ ಆಕಾಶಕ್ಕೆ ನೆಗೆದು **'ಭೋರ್'** ಎಂದು ಸಿಡಿಲ್ ಎಱಗುವಂತೆ ಒಡನೆ ಎಱಗಿ ಆರ್ದು ಮಹೋಗ್ರ ಘನ ಗದಾಪರಿಘದಿನ್ ಎಡೆಗಿಡೆ ಪೊಯ್ದೊಡೆ, ಭೀಮನ್ ಧರೆ ನಡುಗೆ ನೀಳಕುತ್ಕೀಳಂಬೊಲ್ ಕೆಡೆದನ್. ಅಂತು ದುರ್ಯೋಧನ ಗದಾ ಪ್ರಹರಣದಿಂದೆ ಅಚೇತನನ್ ಆಗಿ ಇರ್ದೊಡೆ..)

**ದುರ್ಯೋಧನ:** ಬಿಲ್ದನನ್ ಇಱಿಯೆನ್.

(ಎಂದು ಪವಮಾನ ಮಾರ್ಗದೊಳ್ ಅಲ್ಪಾಂತರದೊಳ್ ಗದೆಯನ್ ಬೀಸುವಾಗಳ್, ಸುಯೋಧನನ ಗದೆಯ ಗಾಳಿಯೊಳ್ ಮೂರ್ಛೆಯಿಂದ ಎಳ್ಚತ್ತು, ಧರಾತಳದೊಳ್ ಸೂಸಿದ ತನ್ನ ಗದಾದಂಡಮನ್ ಭುಜದಂಡದೊಳ್ ಅಳವಡಿಸಿಕೊಂಡ ವೃಕೋದರನನ್ ಅಂಬುಜೋದರನ್ ಬಿಚ್ಚಳಿಸುವ ನೆವದೊಳ್...)

**ಕೃಷ್ಣ:** ಎಮ್ಮ ಅಮ್ಮಂಗೆ ಅಕ್ಕುಮ್.

(ಎಂದು ತೊಡೆಯನ್ ಪೊಯ್ದು ಆರ್ವುದುಮ್...)

**ಭೀಮ:** (ದುರ್ಯೋಧನನ ನೆಱಿನ್ ಅದು ಎಂದು ಅಱಿದು ತನ್ನ ಮನದಲ್ಲಿ...)

ಈತಂಗೆ ಊರುಯುಗ್ಮಮ್ ನೆಱಿನ್. ನೆಱಿನನ್ ಅಱಿಯದೆ ಆನ್ ಇನ್ನೆಗಮ್ ಮಾಣ್ದೆನ್. ಇನ್ ಪೋ ತೆಱಿಪನ್ ಪಾರ್ದಿಪೆನ್.

(ಎಂದು ಒಯ್ಯನೆ ಗದೆಯನ್ ಅಣಮ್ ಪಾಡುಗೆಯ್ದಿರ್ದು, **'ಭೋರ್'** ಎಂದು ಎಱಿಪ ಉಗ್ರ ಅರಾತಿಯ ಊರುದ್ವಯಮನ್ ಇಡೆ, ಗದಾಘಾತದಿಂದೆ ಊರುಯುಗ್ಮಮ್ ಮುಱಿದು ನುಚ್ಚುನೂಱಾಗಿರೆ, ಇಳಾಭಾಗದೊಳ್ ಧಾರ್ತರಾಷ್ಟ್ರನ್ ಕೆಡೆದನ್. ನುಡಿದುದನ್ ಎಯ್ದೆ ತುತ್ತತುದಿ ಎಯ್ದುವಿನಮ್ ನುಡಿದನ್ ವಲಮ್. ಚಲಮ್ ಪಿಡಿದುದನ್ ಎಯ್ದೆ ಮುನ್

ಪಿಡುದುದನ್ ಪಿಡಿದನ್. ಪೂಣ್ದ ಪೂಣ್ಕೆ ಸಲೆ ನೇರ್ಪಡೆ ನಡೆವನ್ನೆಗಮ್ ನಡೆದನ್. ಅಳ್ಕದೆ ಬಳ್ಕದೆ ತನ್ನೊಡಲ್ ಪಡಲ್ವಡುವಿನಮ್ ಅಣ್ಮುಗುಂದನೆ ದಲ್. ಸುಯೋಧನನ್ ಏನ್ ಅಭಿಮಾನಧನನ್. ಅಂತು ಸತ್ತುಮ್ ನೆಲನನ್ ಪತ್ತುವಿಡೆನ್ ಎಂಬಂತೆ ನೆಲನನ್ ಪತ್ತಿ, ಮೂರ್ಛಾಗತನಾಗಿರ್ದ ಕುರುಕುಳ ಚೂಡಾಮಣಿಯನ್ ಏನುಮ್ ಮಾಣದೆ ಕಿಮ್ಮೀರವೈರಿ ಮುಟ್ಟೆವಂದಾಗಳ್...)

**ಬಲರಾಮ:** ಏಕಾದಶಾಕ್ಷೋಹಿಣೀ ಪತಿಯಪ್ಪ ರಾಜಾಧಿರಾಜನನ್ ಪರಾಭವಮ್ ಪಡಿಸದಿರ್.

(ಎಂದು ಬಲದೇವನ್ ಬಾರಿಸೆವಾರಿಸೆ...)

**ಭೀಮ:** ಇದಱೊಳ್ ಮೂರ್ಧಾಭಿಷೇಕಮ್ ತನಗೆ ಸಮಂತು ಆಯ್ತು ಗಡ. ಪಿಂಭಾತ ಪತ್ರಮ್ ಎತ್ತಮ್ ಪುದಿದು ತಣ್ಣೆಳಲ್ ಮಾಡುವುದು ಗಡಮ್. ಇದು ಎಂತುಮ್ ಎಂದುಮ್ ಆರ್ಗಪ್ಪೊಡಮ್ ಪರ್ವಿದ ಗರ್ವೋದ್ರೇಕದಿನ್ ಬಾಗದು ಗಡಮ್

(ಎನುತುಮ್ ಸಾರ್ತಂದು ಮಾಣಿಕಮ್ ಸೂಸೆ ದುರ್ಯೋಧನನ ಮಕುಟಮನ್ ಭೀಮಸೇನನ್ ಕೋಪದಿನ್ ಬಲ್ಪಿಂದೆ ಒದೆದನ್. ಒದೆವುದುಮ್ ದುರ್ಯೋಧನಂಗೆ ಆದ ಅವಸ್ಥೆಯನ್ ನೋಡಲಾಱದೆಯುಮ್, ತನ್ನ ತಮ್ಮನ ಮನಮನ್ ನೋಯಿಸಲಾಱದೆಯುಮ್ ಬಲದೇವನ್ ಭಗ್ನ ಮನೋರಥನಾಗಿ ದ್ವಾರಾವತಿಗೆ ಪೋದನ್. ಅನ್ನೆಗಮ್ ವೇಣೀಸಂಹಾರ ಊರುಭಂಗ ಮಕುಟಭಂಗಂಗಳೆಂಬ ತನ್ನ ಮಹಾ ಪ್ರತಿಜ್ಞೆಯನ್ ನೆಱಪಿದ ಭೀಮಸೇನನ ಅಳವನ್ ಅಳವಲ್ಲದೆ ಪೊಗಳ್ದು, ಚಕ್ರಿ ಕಾಲ ಕುಶಲನ್ ಅಪ್ಪುದರಿನ್ ಅಶ್ವತ್ಥಾಮನಿನ್ ಅಪ್ಪ ಅನಾಗತಬಾಧಾವಿಘಾತಮನ್ ಮಾಡಲೆಂದು ಅಯ್ವರುಮನ್ ನೀಲಗಿರಿಗೆ ಒಡಗೊಂಡು ಪೋಗುತ್ತುಮ್, ಅಲ್ಲಿರ್ದ ಬೀಡುಮನ್, ಆ ಬೀಡಿಂಗೆ ಕಾಪಾಗಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯು ಉತ್ತಮೌಜಸರುಮನ್ ಶ್ರುತ ಸೋಮಕ ಪ್ರಮುಖರಪ್ಪ ಪಂಚ ಪಾಂಡವರುಮನ್ ಪೇಳ್ದು ಹಸ್ತಿನಪುರಕ್ಕೆ ಕಳಿಪಿದನ್.) ❖

# ೧೦೪. ಅಶ್ವತ್ಥಾಮ ಮತ್ತು ರಾಜ್ಯಲಕ್ಷ್ಮಿಯ ಪ್ರಸಂಗ

(೯೮ ನೆಯ ಗದ್ಯದಿಂದ ೧೦೭ ನೆಯ ಗದ್ಯ)

## ಪಾತ್ರಗಳು

**ಅಶ್ವತ್ಥಾಮ:** ದ್ರೋಣಾಚಾರ್ಯರ ಮಗ.

**ಲಕ್ಷ್ಮಿ:** ರಾಜತ್ವದ ಸಂಕೇತವಾದ ದೇವತೆ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಮಗ.

**ಸೂರ್ಯದೇವ:** ಕರ್ಣನ ತಂದೆ. ಒಬ್ಬ ದೇವತೆ.

# ಅಶ್ವತ್ಥಾಮ ಮತ್ತು ರಾಜ್ಯಲಕ್ಷ್ಮಿಯ ಪ್ರಸಂಗ

ಇತ್ತ ಕೃಪ ಕೃತವರ್ಮ ಸಮೇತನ್ ಅಶ್ವತ್ಥಾಮನ್ ದುರ್ಯೋಧನನ್ ಇರ್ದ ಎಡೆಯಱಿಯದೆ ಗಾಂಗೇಯರಿಂದಮ್ ಇರ್ದ ಎಡೆಯನ್ ಅಱಿದು, ಕೊಳಕ್ಕೆ ವಂದು ಅಲ್ಲಿಯುಮ್ ಕಾಣದೆ, ಕೊಳುಗುಳದೊಳ್ ಅಱಸುತ್ತುಮ್ ಬರ್ಪನ್ ತೊಟ್ಟನೆ ಕಟ್ಟಿದಿರೊಳ್ ಪಿಡಿದ ಎಡಗೈಯ ಚಾಮರದ, ದಕ್ಷಿಣ ಹಸ್ತದ ಪದ್ಮದ, ಒಳ್ಪು ಒಡಂಬಡೆ ನಸುಮಾಸಿ ಪಾಡಳಿದ ರೂಪಿನೊಳ್ ಉಣ್ಮುವ ಗಾಡಿ, ನಾಡೆ ಕಣ್ಗೆಡಱ್ ತೊಡಂಕಿ, ಪೀಱಿದ ಕುರುಳ್ಗಳೆ ಚಿತ್ತದೊಳಾದ ಬೇಸಱಮ್ ನುಡಿವವೊಲಾಗೆ ಬರ್ಪ ಕಮಳಾಯತ ನೇತ್ರೆಯನ್ ಇಂದುವಕ್ತ್ರೆಯನ್ ಕಂಡು...

**ಅಶ್ವತ್ಥಾಮ:** ನೀನ್ ಆರ್ಗೆ... ಏನ್ ಎಂಬೆ... ಎಲ್ಲಿಗೆ ಪೋದಪೆ.

(ಎನೆ)

**ಲಕ್ಷ್ಮಿ:** ಪೆಸರೊಳ್ ಲಕ್ಷ್ಮಿಯೆನ್. ದ್ರೋಣ ನದೀಜ ಕರ್ಣಭುಜ ವೀರ್ಯಾವೇಷ್ಟಿತಮ್ ದುರ್ಯೋಧನ ಉರಸ್ಥಳಾವಸಥಮ್ ಮಾಡೆ, ತಾನ್ ಇನ್ನೆಗಮ್ ಸಂತಸದೆ ಇರ್ದೆನ್. ನಾರಾಯಣಾದೇಶಮ್ ಒಡ್ಡಿಸೆ, ಆ ಧರಾಧಿಪತಿಯನ್ ಬಿಸುಟು, ಪಾಂಡುಪ್ರಿಯ ಪುತ್ರರೊಳ್ ನೆರೆಯಲೆಂದು ಈಗಳ್ ಆನ್ ಪೋದಪೆನ್.

(ಎಂಬುದುಮ್ ಅಶ್ವತ್ಥಾಮನ್ ಇಂತು ಎಂದನ್.)

**ಅಶ್ವತ್ಥಾಮ:** ಪೊಸತಲರ್ದ ಅಂಬುಜಂಗಳ ಎಸಳೊಳ್ ನಡೆಪಾಡುವಳೇನ್... ಪಯೋಧಿಯನ್ ಪೊಸೆದೊಡೆ ಪುಟ್ಟಿದೈ... ಮುರ ವಿರೋಧಿಯ ಪತ್ನಿಯೆ... ಮಿಂಚುತಿರ್ಪ ಕೂರಸಿಗಳ ಮೇಲೆ ಸಂಚರಿಪೆ... ವೈರಿ ನರಾಧಿಪ ಸೈನ್ಯವಾರ್ಧಿಯನ್ ಪೊಸೆದೊಡೆ ಪುಟ್ಟಿದ ಈ ನಿನಗೆ ಎನ್ನನ್ ವಕ್ರಿಸಲ್ ತೀರ್ಗುಮೋ... ಕುರುವಂಶಾಂಬರ

ಭಾನುವನ್ ಆನ್ ಉಳ್ಳಿನಮ್ ಬಿಸುಡಿಸಲ್ಕೆ ತೀರದು. ಆನಿರೆ ನಾರಾಯಣನೆಂಬನುಮ್ ಪ್ರಭುವೆ. ಅಂಬುರುಹಾಕ್ಷೀ, ನೀನ್ ಈ ಮರುಳ್ ಮಾತನ್ ಬಿಸುಡು. ಅಂಜದಿರ್, ಕುರುಕ್ಷ್ಮಾಪಾಳನ್ ಇರ್ದಲ್ಲಿಗೆ ನಡೆ.

(ಎಂದು ಅರವಿಂದಾಲಯೆಯನ್ ಮಗುಳ್ಚಿದನ್. ಆ ದ್ರೌಣಿ ಅದೇನ್ ಶೌರ್ಯಾರ್ಥಿಯೋ. ಅಂತು ವಿಕಸಿತ ಕಮಳದಳ ನಯನೆಯನ್ ಕಮಳೆಯನ್ ಅಶ್ವತ್ಥಾಮನ್ ಮುಂದಿಟ್ಟು ಕುರು ಕುಟುಂಬ ಘಟಚೇಟಿಕೆಯನ್ ತರ್ಪಂತೆ ತಂದು, ವೃಕೋದರ ಗದಾ ಸಂಚೂರ್ಣಿತೋರುಯುಗಳನುಮ್ ಭೀಮಸೇನ ಚರಣ ಪ್ರಹರಣ ಗಳಿತ ಶೋಣಿತ ಆರ್ದ್ರಮೌಳಿಯಾಗಿ ಕೋಟಲೆಗೊಳ್ವ ಕೌರವೇಶ್ವರನನ್ ಎಯ್ದೆ ಪೋಗಿ, ಹಸ್ತಪ್ರಹಸ್ತ ಮಂಡಲಾಗ್ರನುಮ್ ಶೋಕವ್ಯಗ್ರನುಮಾಗಿ...)

**ಅಶ್ವತ್ಥಾಮ:** ನೆಗಳ್ದ ನೆಗಳ್ತೆಗೆ ಆವ ಎಡೆಯೊಳಮ್ ಪಳಿಯಿಲ್ಲದೆ ಪೂಣ್ದು, ಸಂದ ವೈರಿಗಳನೆ ವಾರಿಧಿಪರೀತ ಮಹೀತಲಮನ್ ನಿಮಿರ್ಚಿ, ಜಟ್ಟಿಗರನ್ ಅಯೋನಿಸಂಭವರನ್ ಆಳ್ದು, ಅರಿವರ್ಗದೊಳ್ ಆಂತು ಕಾದೆಯುಮ್ ಬಗೆ ದೊರೆಕೊಂಡುದಿಲ್ಲ. ಇದು ವಿಧಾತ್ರನ ದೋಷಮೊ ನಿನ್ನ ದೋಷಮೋ. ಆದೊಡಮ್ ಎನ್ನನ್ ಬಂಚಿಸಿ ಪೋದುದಱಿಕೊಳ್ ನಿನಗೆ ಪಗೆವರಿಮ್ ಇನಿತು ಎಡಱಾಯ್ತು. ಆದಿತ್ಯ ತೇಜ, ಬೆಸಸು ಇದಿರಾದ ಪೃಥಾಸುತರನ್ ಉಳಿಯಲೀಯದೆ ಕೊಲ್ವೆನ್.

(ಎಂಬುದುಮ್ ಫಣಿಕೇತನನ್ ನೆತ್ತಿಯಿಂದ ಒಱಿದು ಉಗುವ ನೆತ್ತರ ಧಾರೆಯಿನ್ ಮೆತ್ತಿದ ಕಣ್ಗಳನ್ ಒತ್ತಂಬದಿನ್ ತೆಱಿದು, ಅಶ್ವತ್ಥಾಮನ ಮೊಗಮನ್ ನೋಡಿ...)

**ದುರ್ಯೋಧನ:** ಎನಗೆ ಇನಿತೊಂದು ಅವಸ್ಥೆ ವಿಧಿಯೋಗದಿನ್ ಆದುದು. ಇದಕೆ ನೀನ್ ಅಳಲ್ದು ಇನಿತು ಮನಃಕ್ಷತಂಬಡದಿರು. ಪುರಾತನ ಪುರುಷನ್ ಮುರಾರಿ ಕೆಲದೊಳ್ ನಿಲೆ, ಪಾಂಡವರನ್ ಗೆಲಲ್ ಆಗದು. ನೀನ್ ಕೊಲಲಾರ್ಪೊಡೆ ಆಗದು ಎಂಬೆನೆ. ವೈರಿಗಳನ್ ತಱಿದೊಟ್ಟಿ ಎನ್ನ ಅಸುವುಳ್ಳಿನಮ್ ಎಯ್ದೆವಾ ಗಡಾ.

(ಎಂಬುದುಮ್)

**ಅಶ್ವತ್ಥಾಮ:** ಪಾಂಡವರನ್ ಇಕ್ಕಿದ ಒಸಗೆ ಮಾತನ್ ಈಗಳೆ ಕೇಳಿಸುವೆನ್.

(ಎಂದು ಸರೋಜನಿಳಯೆಯನ್...)

ಎನ್ನ ಬರ್ಪನ್ನಮ್ ಅರಸನನ್ ಅಗಲದೆ ವಿಕಸಿತಶತ ಪತ್ರಾತ ಪತ್ರದ ತಣ್ಣೆಳಲುಮನ್ ಕುಂದಲೀಯದಿರ್.

(ಎಂದು ನಿಯಮಿಸಿ ರುದ್ರಾವತಾರನ್ ಕೃಪ ಕೃತವರ್ಮ ಸಮೇತನ್ ಅರಸನನ್ ಬೀಳ್ಕೊಂಡು ಪೋದನಾಗಳ್...)

**"ಮಗನ ಅಳಲೊಳ್ ಕರಮ್ ಮಱುಗುತಿರ್ಪಿನಮ್, ಎನ್ನ ತನೂಜನ ಆಳ್ವಸಾಮಿಗಮ್ ಅಳಿವಾಗೆ ಶೋಕರಸಮ್ ಇರ್ಮಡಿಸಿತ್ತು. ಇಲ್ಲಿಗೆ ಜಳಪ್ರವೇಶಮ್ ಪದನ್..."** ಎಂದು ವಾರಿಜನಾಥನ್ ನಿಶ್ಚಯಿಸಿ, ಅನಾಥನಾಗಿ ತೊಟ್ಟಗೆ ಮುಳುಪಂತೆ ವೊಲ್ ಅಪರಾಂಬುರಾಶಿಯೊಳ್ ಕಡುಕೆಯ್ದು ಮುಳುಗಿದನ್. ಆ ಪ್ರಸ್ತಾವದೊಳ್ ಅಶ್ವತ್ಥಾಮನ್ ಕೃಪ ಕೃತವರ್ಮರುಮ್ ಬೆರಸು ಹಸ್ತಿನಪುರದೊಳ್ ಪಾಂಡವರ್ ಇರ್ದರೆಗೆತ್ತುಮ್ ಅಲ್ಲಿಗೆ ನಿಟ್ಟಾಲಿಯಾಗಿ ದಾಳಿಯನ್ ಇಟ್ಟು, ಮುಟ್ಟೆವಂದು ಬಾಯ್ಮಾಡಿ, ಧೃಷ್ಟದ್ಯುಮ್ನ ಶಿಖಂಡಿ ಚೇಕತಾನ ಯುಧಾಮನ್ಯು ಉತ್ತಮೌಜಸರನ್ ಕೊಂದು, ಶ್ರುತ ಸೋಮಕ ಪ್ರಮುಖರಪ್ಪ ಪಂಚ ಪಾಂಡವರನ್ ಪಾಂಡವರೆಗೆತ್ತು ಕೊಂದು, ತತ್ ಉತ್ತಮಾಂಗಗಳನ್ ಕೊಂಡು, ತಳತಳನೆ ನೇಸರ್ ಮೂಡುವಾಗಳ್ ಎಯ್ದೆ ವಂದು ದುರ್ಯೋಧನನನ್ ಕಂಡು...)

**ಅಶ್ವತ್ಥಾಮ:** ಕೊಳ್, ನಿನ್ನ ನಚ್ಚಿನ ಪಾಂಡವರ ತಲೆಗಳನ್...

(ಎಂದು ಮುಂದಿಕ್ಕಿದಾಗಳ್... ದುರ್ಯೋಧನನ್ ನೋಡಿ..)

**ದುರ್ಯೋಧನ:** ಬಾಲಕಮಳಂಗಳನ್ ಕಮಳಾಲಯದಿನ್ ತಿಱಿದು ತರ್ಪವೊಲ್ ನೀನ್ ತಂದಯ್. ಬಾಲಕರ ತಲೆಗಳ್... ಅಕ್ಕಟ... ಬಾಲಕ ವಧ ದೋಷಮ್. ಎಂತು ನೀನ್ ನೀಗಿದಪಯ್.

**ಅಶ್ವತ್ಥಾಮನ್:** ಅಂತು ಎಂಬುದು ಏನ್.

(ಎನೆ ದುರ್ಯೋಧನನ್ ಎಂದನ್..)

**ದುರ್ಯೋಧನ:** ಪಾಂಡವರ ತಲೆಗಳಲ್ಲಮ್ ಇವು. ಪಾಂಡವರ ಸೂನುಗಳಪ್ಪ ಪಂಚಪಾಂಡವರ ತಲೆಗಳ್

**ಅಶ್ವತ್ಥಾಮ:** ಇದರ್ಕೆ ಕರ್ತವ್ಯಮ್ ಆವುದು.

**ದುರ್ಯೋಧನ:** ಹಿಮವತ್ ಪರ್ವತದೊಳ್ ತಪಶ್ಚರಣಪರಾಯಣರಾಗಿಮ್. ಎನಗೆ ಅಂತ್ಯಕಾಲಮ್.

(ಎಂದು ದುರ್ಯೋಧನನ್ ಪ್ರಾಣ ಪರಿತ್ಯಾಗಮ್ ಗೆಯ್ದನ್. ಆಗಳ್ ಅಶ್ವತ್ಥಾಮನುಮ್ ಕೃಪನುಮ್ ಸಿಗ್ಗಾಗಿ, ಹಿಮವತ್ ಪರ್ವತಕ್ಕೆ ನಡೆಗೊಂಡರ್. ಇತ್ತ ಕೃತವರ್ಮನುಮ್ ದ್ವಾರಾವತಿಗೆ ಪೋದನ್.

ಆಗಳ್ ಬಿಳಿಯ ತಾವರೆಯ ಎಸಳೊಳ್ ಮಾಡಿದ ಬೆಳ್ಗೊಡೆ ರಯ್ಯಮಾಗೆ, ಎಡದ ಕೆಯ್ಯೊಳ್ ಪೊಳೆವ ಚೆಂಬೊನ್ನ ಕಾವಿನ ಚಾಮರಮ್ ಅಮರ್ದಿರೆ, ಭೇರಿ ಸಿಂಹಾಸನಮುಮ್ ಬಳಿಯೊಳ್ ಜವಮ್ ಮಿಳಿರೆ, ರಾಜ್ಯ ಚಿಹ್ನಂಗಳ್ ಬೆರಸು ಇಂತು ನಡೆತಂದು ರಾಜ್ಯಲಕ್ಷ್ಮಿ ಬಳೆದ ಸಂತೋಷದ ಅಂತಮನ್ ಎಯ್ದೆ, ಸಹಜಮನೋಜನನ್ ನಾಡೋಜನನ್ ಪತ್ತಿದಳ್.)



# ೧೦೫. ಯುದ್ಧದ ನಂತರ ಕುರುಕ್ಷೇತ್ರ ರಣರಂಗದಲ್ಲಿ...

(೨ ನೆಯ ಪದ್ಯದಿಂದ ೧೧ ನೆಯ ಗದ್ಯ)

## ಪಾತ್ರಗಳು

| | |
|---|---|
| **ಕೃಷ್ಣ:** | ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ. |
| **ಧರ್ಮರಾಯ:** | ಪಾಂಡುರಾಜ ಮತ್ತು ಕುಂತಿಯ ಮಗ. |
| **ಧೃತರಾಷ್ಟ್ರ:** | ದುರ್ಯೋಧನನ ತಂದೆ. |
| **ಕುಂತಿ:** | ಪಾಂಡುರಾಜನ ಮೊದಲನೆಯ ಹೆಂಡತಿ. |
| **ಪಾಂಡವರು:** | ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ. |

## ಯುದ್ಧದ ನಂತರ ಕುರುಕ್ಷೇತ್ರ ರಣರಂಗದಲ್ಲಿ...

ತನ್ನಿಱಿದು ಗೆಲ್ದ ಕೊಳುಗುಳಮನ್ ನೋಡಲ್ ಚಕ್ರಪಾಣಿಯುಮ್ ತನ್ನ ಸಹೋತ್ಪನ್ನರುಮ್ ಒಡವರೆ ಬಂದು, ವಿಪನ್ನ ಉಗ್ರ ಅರಾತಿ ವರ್ಗಮ್ ಆಹವ ಧರೆಯನ್ ಎಯ್ದಿ, ತನ್ನಿಂದಮ್ ಅಂತಕ ಆನನಮನ್ ಎಯ್ದಿದ ಮಹಾ ಪ್ರಚಂಡ ಮಂಡಳಿಕ ಮಕುಟಬದ್ಧ ಸಾಮಂತ ಮಹಾಸಾಮಂತ ಸಂಹತಿಯುಮನ್, ಎಣಿಕೆಗಳಿದ ಕರಿ ತುರಗ ವರೂಥ ಪದಾತಿಗಳುಮನ್ ನೋಡಿ, ಮುರಾರಿಯ ಮೊಗಮನ್ ನೋಡೆ, ಅಧೋಕ್ಷಜನ್ ಅಜಾತಶತ್ರುವನ್ ಇಂತು ಎಂದನ್.

**ಕೃಷ್ಣ:** ಶಾತ ಶರಾಗ್ನಿ ಭಗ್ನ ಭಟಕೋಟಿ ವಿಭೀಷಣಮ್, ಉಗ್ರ ವೈರಿ ಸಂಘಾತ, ಕರೀಂದ್ರ ರುಂದ್ರ ಕಟಕೂಟ ಪರಿಚ್ಯುತ ಭೃಂಗಮಾಳಿಕಾ ಪೀತಮ್ ಮದಾಂಬುಕಮ್, ಪ್ರಕೃತಿ ರಕ್ತಜಲಾಸವ ಮತ್ತ ಯೋಗಿನೀ ವ್ರಾತ ಪರೀತ ಭೂತ ಸದನಮ್, ಕದನ ತ್ರಿಣೇತ್ರನಾ ಕದನಮ್. ಸ್ಫುರಿತ ವರೂಥ ಚಕ್ರಹತಿಯಿನ್ ಧರಣೀತಳಮ್ ಅತ್ತಮ್ ಇತ್ತಮ್ ಅಳ್ದಿರಿಯೆ, ಬಗೆದು ನೋಳ್ಪೊಡೆ ವಿಯತ್ತಳಮ್ ನಾಡೆ ಪತತ್ಪತತ್ರಿ ಜರ್ಜರಿತಮೆ, ದಿಕ್ತಟಮ್ ರಿಪುನರಾಧಿಪ ರಕ್ತ ಧುನೀ ಪ್ರವಾಹ ಪಿಂಜರಿತಮೆ. ಕದನ ತ್ರಿಣೇತ್ರನಾ ಬೀರಮನ್ ಪೊಗಳ್ವನ್... ಏನ್ ಪೊಗಳ್ವನ್.

(ಎಂಬನ್ನೆಗಮ್ ಧೃತರಾಷ್ಟ್ರನುಮ್ ಗಾಂಧಾರಿಯುಮ್ ಒಂದಾಗಿ ಬರೆ, ದುರ್ಯೋಧನನ ಪೆಂಡಿರಪ್ಪ ಭಾನುಮತಿಯುಮ್ ಚಂದ್ರಮತಿಯುಮ್ ಮೊದಲಾಗೆ ಸಮಸ್ತ ಅಂತಃಪುರಮುಮ್, ದುಶ್ಶಾಸನ ಲಕ್ಕಣ ಭೂರಿಶ್ರವ ಸೋಮದತ್ತ ಭಗದತ್ತ ಬಾಹ್ಲೀಕ ಶಲ್ಯ ಶಕುನಿ ಸೈಂಧವ ಕರ್ಣ ಪ್ರಮುಖರಪ್ಪ ನಾಯಕರ ಪೆಂಡಿರುಮ್ ತಮ್ಮ ಗಂಡರನ್ ಕೊಳುಗುಳದೊಳ್ ಅಱಸಿ

ಕಾಣದೆ, ಬಾಯಳಿದು ಪಳಯಿಸುತ್ತುಮ್, ಯೂಥಪತಿ ಕೆಡೆಯೆ ದೆಸೆ ತಪ್ಪಿದ ವನಕರಿ ಕರೇಣುಗಳುಮನ್, ಅಡರ್ಪಿಲ್ಲದೆ ಕಲ್ಪವೃಕ್ಷಮ್ ಉಡಿದು ಕೆಡೆಯೆ ಬಂಬಲ ಬಾಡಿದ ವನಲತೆಗಳುಮನ್ ಪೋಲ್ತು, ಇಱಿವ ಪಿಣಿಲ್, ತೆರಳ್ದು ಒಱೆವ ಕಣ್ಬನಿ, ಮಾಣದೆ ಮೋದೆ ಶೋಕದ ಅಚ್ಚಿಱಿದವೊಲ್ ಇರ್ದ ಬಾಸುಳಿನೊಳ್ ಅಳ್ದು ಕನಲ್ದು ಬಳಲ್ದು ಜೋಲ್ದ ಮೆಯ್, ಮಱುಗುವ ಬೇಗದೊಳ್ ಅಣಮ್ ದೆಸೆಗಾಣದ ನೋಟಮ್, ಆರುಮನ್ ಮಱುಗಿಸೆ, ವೈರಿನೃಪಾಂಗನಾಜನಮ್ ಕರುಣಂಬರೆ ಅಂದು ಬಂದುದು. ಆಗಳ್ ಧರ್ಮಪುತ್ರನ್ ಧೃತರಾಷ್ಟ್ರಂಗಮ್ ಗಾಂಧಾರಿಗಮ್ ಎಱಗಿ ಪೊಡೆವಟ್ಟು...)

**ಧರ್ಮರಾಯ:** ಏನ್ ಗೆಯ್ದುದುಮ್ ಎನ್ನ ಧರೆಯ ಒರ್ವಾಗಮುಮನ್ ನೀಮೆ ಬೆಸಸೆಯುಮ್ ಕುಡದೆ, ಇನಿತನ್ ಮೇಗಿಲ್ಲದೆ ನಾಗಧ್ವಜನ್ ನೆಗಳ್ದು ಅಳಿದನ್. ಅಯ್ಯ, ನೀಮ್ ಅದರ್ಕೆ ಅಳಲದಿರಿಮ್. ಪಗೆ ಆತನ ಒಡವೋಯ್ತು. ಆನ್ ಆತನಿನ್ ಅಗ್ಗಳದ ಮಗನೆನ್. ನಖಮಾಂಸ ಪ್ರೀತಿಯೊಳೆ ನೆಗಳ್ವೆನ್. ಪಡೆಮಾತೇನ್. ಪಂಬಲಿಸದೆ ಎನ್ನ ಪೇಳ್ವುದು ಗೆಯ್ಯಿಮ್.

(ಎಂಬುದುಮ್ ಧೃತರಾಷ್ಟ್ರನ್ ಇಂತು ಎಂದನ್.)

**ಧೃತರಾಷ್ಟ್ರ:** ಎನಗೆ ತನಯಶತಮ್ ಆದುದಲ್ತು. ಅನಿವಾರಿತ ದುಃಖಶತಮೆ ತಾನ್ ಆದುದು. ಅವನ್ ನೆನೆಯೆನ್. ಈ ವನಿತೆಯರ್ಗೆ ಅವರವರ ಪುರುಷರನ್ ಸಂಸ್ಕಾರಿಸಲ್ ಕುಡವೇಳ್ಕುಮ್. (ಎಂಬುದುಮ್...)

**ಧರ್ಮರಾಯ:** ಅದಾವುದು ದೋಷಮ್. ಅವರ್ಗೆಲ್ಲಮ್ ಸಂಸ್ಕಾರ ವಿಧಿಯನ್ ನಾನೆ ಪಕ್ಕದೊಳ್ ಇರ್ದು ಮಾಡಿಸುವೆನ್.

(ಎಂಬನ್ನೆಗಮ್ ಕೊಂತಿ ಬಂದು ಕರ್ಣನ ಕಳೇವರಮನ್ ತಳ್ಕೈಸಿಕೊಂಡು ಪಾಂಡವರಯ್ವರುಮನ್ ಅಲ್ಲಿಗೆ ಬರಿಸಿ..)

**ಕುಂತಿ:** ಕರ್ಣನ್ ನಿಮ್ಮ ಅಣ್ಣನ್. ಎನ್ನ ಪಿರಿಯ ಮಗನ್. ಮಾತೇನ್, ಆನ್ ಮಹಾಪಾತಕಿಯೆನ್. ನಿಮ್ಮಯ ಮೋಹದಿನ್, ಈತಂಗೆ ಇನಿತನ್ ಆನ್ ಮಾಡಿದೆನ್.

(ಎಂದು ಶೋಕಮ್ ಗೆಯ್ದಳ್. ಆಗಳ್ ಅಯ್ವರುಮ್ ಆ ಮಾತನ್ ಕೇಳ್ದು, ಭೋಂಕನೆ ಎರ್ದೆ ತೆರೆಯೆ ಸಹೋದರ ಶೋಕದೊಳ್ ಮನ್ಯುಮಿಕ್ಕು ಸೈರಿಸಲಾಱದೆ...)

**ಪಾಂಡವರು:** ಅಂಗವಲ್ಲಭಾ, ನೀನ್ ಎಮಗೆ ಅಣ್ಣನಯ್ ಎಂದು ಎಮಗೆ ಅಱಿಪಿದರ್ ಆರುಮ್ ಇಲ್ಲ. ಆಮ್ ಮುನ್ನಮ್ ಅಱಿದೊಡೆ, ಪಟ್ಟಮನ್ ನೆಲನುಮನ್ ನಿನಗೆ ಇತ್ತು, ಕುರುಪ್ರಧಾನನೊಳ್ ಕಱುಪನೆ ನಿಚ್ಚಟಮ್ ಬಿಸುಟು, ನಿನ್ನಯ ಪೇಳ್ದುದು ಗೆಯ್ದು, ಬಾಯ ತಂಬುಲದೊಳಮ್ ಮಡಗೂಳೊಳಮ್ ಪಾಳಿಯನ್ ನೆಱಪೆವೆ.

(ಎಂದು ಶೋಕಾಕ್ರಾಂತರಾದರನ್ ನಾರಾಯಣನ್ ಸಂತೈಸಿ...)

**ಕೃಷ್ಣ:** **'ಕೊಂದರ್ ಕೊಲೆ ಸಾವರ್'** ಎಂಬುದು ಜಗತ್ ವ್ಯಾಪಾರಮ್ ಈಶ್ವರನಿಚ್ಛೆಯಿಂದೆ ನೆಗಳ್ಗುಮ್ .

(ಎಂದು ದುಃಖೋಪಶಮನಮ್ ಮಾಡಿದೊಡೆ, ಸಮಾಹಿತಚಿತ್ತರಾಗಿ ಕೊಳುಗುಳನಮ್ ವಿಧಿವಿಧಾನದಿನ್ ಬಳಸಿ, ದುರ್ಯೋಧನನ್ ಮೊದಲಾಗೆ ಕುರುಕ್ಷೇತ್ರದೊಳ್ ಸತ್ತ ಅರಸು ಮಕ್ಕಳೆಲ್ಲರುಮನ್ ಒಂದಾಗಿ ತಂದು ಬೆಟ್ಟಾಗಿ ಒಟ್ಟಿ, ಕರ್ಣನ ಕಳೇವರಮನ್ ಅನಿಬರಿನ್ ಮಿಗೆ ಮಹಾಬ್ರಾಹ್ಮಣರಿಂದಮ್ ಮಂತ್ರವಿಧಿಯಿಂದಿರಿಸಿ, ಹರಿಚಂದನ ಕರ್ಪೂರ ಕಾಳಾಗರುಕಾಷ್ಠಂಗಳಿಂದಮ್, ಯಥೋಕ್ತ ವಿಧಿಯಿನ್ ಸಂಸ್ಕಾರಿಸಿ, ಕರ್ಣಂಗೆ **'ಕರ್ಣಸ್ಥಳಿ'** ಎಂಬ ತೀರ್ಥಮನ್ ಮಾಡಿ, ಜಳದಾನಾದಿ ಕ್ರಿಯೆಗಳನ್ ನಿರ್ವರ್ತಿಸೆ, ತದನಂತರದೊಳ್ ಧೃತರಾಷ್ಟ್ರನುಮ್ ಗಾಂಧಾರಿಯುಮ್ ಪುತ್ರವಿಯೋಗ ದುಃಖದಿನ್ ಮುನಿವನಮನ್ ಆಶ್ರಯಿಸಿದರ್. ಕೊಂತಿಯುಮ್ ಕರ್ಣನ ಶೋಕದೊಳ್ ಧರ್ಮಪುತ್ರನನ್ ಬೀಳ್ಕೊಂಡು, ಅವರೊಡನೆ ತಪಶ್ಚರಣ ಪರಾಯಣೆಯಾದಳ್. ಇತ್ತ ಧರ್ಮನಂದನನ್ ದೇವಕೀನಂದನನನ್ ಇಂತು ಎಂದನ್.)

**ಧರ್ಮರಾಯ:** ಇನಿತೊಂದು ಉಗ್ರ ರಣ ಪ್ರಘಟ್ಟಕದೊಳ್ ಈ ಇರ್ವರಿನ್ ಈ

ಭಾರಾವತಾರಮ್ ಧರಾಂಗನೆಗೆ ಆದುದು. ಎನಗೆ ನಿರ್ದಾಯಾದ್ಯಮ್ ಆಯ್ತು. ಈ ಪೆಂಪೆ ಸಾಲ್ಗೆ. ಎನಗೆ ಇನ್ ರಾಜ್ಯಮೆ ಬಾಳ್ತೆಯಲ್ತು. ಹರಿಗಂಗೆ ಉತ್ಸಾಹದಿನ್ ಪಟ್ಟಬಂಧನಮನ್ ಮಾಡುವಮ್. ಇಂದೆ ಹಸ್ತಿನಪುರ ಪ್ರಸ್ಥಾನಮನ್ ಮಾಡುವಮ್.

(ಎಂಬುದುಮ್)

**ಕೃಷ್ಣ:** ಅಶೇಷ ಧರಾಭಾರಮನ್ ಶೇಷನ್ ತಾಳ್ದುವಂತೆ ವಿಕ್ರಮಾರ್ಜುನಂಗಲ್ಲದೆ ಪೆಱಂಗೆ ತಾಳ್ದಲ್ ಅರಿದು. ಇದರ್ಕೆ ಆನುಮ್ ಒಡಂಬಡುವೆನ್.

(ಎಂದು ಮುಕುಂದನ್ ಅನೇಕ ಮುಕುಂದ ಬೃಂದಗಳ್ ಮೊಳಗೆ, ಶುಭಮೂಹೂರ್ತದೊಳ್ ಅರಿಕೇಸರಿಯನ್ ಮುಂದಿಟ್ಟು ಹಸ್ತಿನಪುರೋಪವನಮನ್ ಎಯ್ದೆ ವಂದಾಗಳ್...)



# ೧೦೬. ಅರ್ಜುನ ಮತ್ತು ಸುಭದ್ರೆ ಪಟ್ಟಾಭಿಷೇಕ

(೧೬ ನೆಯ ಗದ್ಯದಿಂದ ೧೯ ನೆಯ ಪದ್ಯ)

## ಪಾತ್ರಗಳು

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅರ್ಜುನ :** ಪಾಂಡುರಾಜ ಮತ್ತು ಕುಂತಿಯ ಮಗ.

**ಸುಭದ್ರೆ:** ಅರ್ಜುನನ ಹೆಂಡತಿ.

## ಅರ್ಜುನ ಮತ್ತು ಸುಭದ್ರೆ ಪಟ್ಟಾಭಿಷೇಕ

ಅಂತು ಪುರಜನಜನಿತ ಆಶೀರ್ವಾದ ಸಹಸ್ರಂಗಳೊಡನೆ ಸೂಸುವ ಶೇಷಾಕ್ಷತಂಗಳನ್ ಆನುತ್ತುಮ್ ಬಂದು, ತತ್ ಪುರಾಂಗನೆಯ ಮುಖಸರಸಿಜಮ್ ಅಲರ್ದಂತೆ ಎಸೆದು ಒಪ್ಪುವ ರಾಜಮಂದಿರಮನ್ ಪೊಕ್ಕು, ಧರ್ಮನಂದನನ್ ದೇವಕೀ ನಂದನನೊಳ್ ಪರಮಾನಂದಮ್ ಬೆರಸು ಸಾಮಂತಚೂಡಾಮಣಿಯ ಪಟ್ಟಬಂಧನ ಮಹೋತ್ಸವಮನ್ ಸಮಕೊಳಿಸಿ ವಿಕ್ರಮಾರ್ಜುನನನ್ ಇಂತು ಎಂದನ್.

**ಧರ್ಮರಾಯ:** ಪ್ರಾಯದ ಪೆಂಪೆ ಪೆಂಪು. ಎಮಗೆ ಮೀಱಿದರನ್ ತವೆ ಕೊಂದ ಪೆಂಪು. ಕಟ್ಟಾಯದ ಪೆಂಪು. ಶಕ್ರನೊಡನೆ ಏಱಿದ ಪೆಂಪು. ಇವು ಪೆಂಪುವೆತ್ತು ನಿಟ್ಟಾಯುಗಳಾಗಿ ನಿನ್ನೊಳ್ ಅಮರ್ದು ಇರ್ದುವು. ನೀನ್ ತಲೆವೀಸದೆ, **'ಇದು ಆಗದು'** ಎನ್ನದೆ ಗುಣಾರ್ಣವಾ, ಪರಮೋತ್ಸವದಿನ್ ಉರ್ವರಾಶ್ರೀಯನ್ ಒಳಕೊಳ್.

(ಎಂದು ಧರ್ಮಪುತ್ರನುಮ್ ದೇವಕೀಪುತ್ರನುಮ್ ಮರುತ್ ಪುತ್ರನುಮ್ ಅಮರೇಂದ್ರಪುತ್ರನನ್ ಎಂತಾನುಮ್ ಒಡಂಬಡಿಸಿ, ನಾಳೆ ಪಟ್ಟಬದ್ಧೋತ್ಸವಮ್ ಎಂದು ಮುನ್ನಿನ ದಿವಸಮ್ ಮಯನಿನ್ ಪಂಚರತ್ನಮಯಮಾದ ಸಭಾ ಮಂಟಪಮನ್ ತರಿಸಿ, ವಸಿಷ್ಠ ಕಶ್ಯಪ ವ್ಯಾಸ ವಿಶ್ವಾಮಿತ್ರ ಭರದ್ವಾಜಾದಿ ಮುನಿಪತಿಗಳನ್ ಬರಿಸಿ, ಮಾತಳಿಯ ಕೆಯ್ಯೊಳ್ ದೇವೇಂದ್ರನ್ ಅಟ್ಟಿದ ಕಲ್ಪವೃಕ್ಷದ ತಳಿರ್ಗಳನ್, ಐರಾವತದ ಹರವೃಷಭದ ಕೋಡ ಮಣ್ಣುಮನ್, ಆಕಾಶಗಂಗೆಯ ನೀರುಮನ್, ನಮೇರು ಮಂದಾರ ಪಾರಿಜಾತದ ಪೂಮಾಲೆಗಳುಮನ್, ವರುಣದೇವನ್ ಅಟ್ಟಿದ ಕ್ಷಾರ ಕ್ಷೀರ ಇಕ್ಷು ದಧಿ ಮಧು ಘೃತ ಸ್ವಾದೂದಕಂಗಳ್

ಎಂಬ ಏಳುಮ್ ಸಮುದ್ರಂಗಳ ಚತುರ್ದಶ ಮಹಾನದಿಗಳ ನೀರುಮನ್, ತಳತಳ ತೊಳಗುವ ಕಳಧೌತ ಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾ ಜನಕ್ಕಮ್ ಸಾಮಂತಚಕ್ರಕ್ಕಮು ಉಡಲಿಕ್ಕಿ, ಧವಳಚ್ಛತ್ರ ಚಾಮರ ಸಿಂಹಾಸನ ಪಟ್ಟವರ್ಧನ ಕುಲಧನಾದಿ ರಾಜ್ಯ ಚಿಹ್ನಂಗಳನ್ ವಿವಿಧ ವಿಧಾನದಿಂದಮ್ ಅಧಿವಾಸಿಸಿ, ಗಂಗಾಜಳ ಪವಿತ್ರೀಕೃತಗಾತ್ರನುಮ್, ಕೌಶೇಯ ಪರಿಧಾನನುಮ್ ಆಗಿರ್ದ ಮಾನನಿಧಾನನನ್ ತಂದು ಪೊಡೆವಡಿಸಿ, ಮಂಗಳ ಪಟಹಂಗಳುಮ್ ಮಂಗಳಗೀತಿಗಳುಮ್ ಎಸೆಯೆ ಕಳಕಳಾವರ್ತಮಾಗೆ ಜಾಗರಮ್ ಇರ್ದು.

ಮಱುದಿವಸಮ್ ಪ್ರಶಸ್ತ ಮೌಹೂರ್ತಿಕ ನಿರೂಪಿತ ಶುಭ ಲಗ್ನೋದಯದಿಂದ ಅಷ್ಟೋತ್ತರಶತ ಪೂರ್ಣಕುಂಭಂಗಳಮ್ ಚತುರ್ವೇದ ಪಾರಗರಪ್ಪ ಧರಾಮರರ್ ಎತ್ತಿಕೊಂಡು, ಮಂತ್ರಪೂತ ಜಲಂಗಳಿನ್ ಮೀಯಿಸಿ ವನಧಿ ಪ್ರಧ್ವಾನದಿನ್ ಮಂಗಳಪಟಹ ರವಮ್ ಪೆರ್ಚೆ, ಮಾಂಗಲ್ಯ ಗೇಯಧ್ವನಿಯಿಂದೆ ಆಶಾಂತರಮ್ ಘೂರ್ಣಿಸೆ, ಸೊಗಯಿಸೆ ಕೆಯ್ಗೆಯ್ದು ಸಾಮಂತ ಸೀಮಂತಿನಿಯರ್ ಮುಂದೆ ಆಡೆ, ಜಯ ಜಯ ಧ್ವಾನಮ್ ಭೋರೆಂದು ಎಸೆಯೆ, ವಾರಾಂಗನೆಯರ್ ಓರಂತೆ ವಂದು ಆಡೆ, ಸಂದ ಈ ವಿಭವದೊಳ್ ಅರಿಗಂಗೆ ರಾಜ್ಯಾಭಿಷೇಕಮ್ ಆಯ್ತು.

ಆಗಳ್ ರಾಜ್ಯಾಭಿಷೇಕದ ನಂತರದೊಳ್ ಧರ್ಮನಂದನನ್ ವಾಯುನಂದನನ್ ದೇವಕೀನಂದನನನ್ ಅಶ್ವಿನೀನಂದನರ್ ಅಯ್ವರುಮ್ ಅನೇಕ ಮಂಗಳಾಭರಣ ಅಳಂಕೃತ ಶರೀರರ್ ಅರಿಕೇಸರಿಯನ್ ಕೇಸರಿವಿಷ್ಟರದೊಳ್ ಕುಳ್ಳಿರಿಸಿ, ಪಂಚರತ್ನ ಶಿಖಾವಿರಾಜಮಾನಮಪ್ಪ ಪಟ್ಟಮನ್ ಎತ್ತಿ, ಯಾದವ ವಂಶಸಂಭೂತೆಯುಮ್ ಅನೇಕ ಲಕ್ಷಣೋಪೇತೆಯುಮಪ್ಪ ಸುಭದ್ರೆಗೆ ಮಹಾದೇವಿಪಟ್ಟಮನ್ ಕಟ್ಟಿದಾಗಳ್ ದೇವದುಂದುಭಿ ರವಮ್ ನೆಗಳ್ದುದು. ಪೊದಳ್ದ ಬಲ್ ಮುಗುಳ್ಗಳ ತಂದಲ್ ಅಂದು ಸುರನಂದನದಿನ್ ಕವಿ ತಂದುದು. ಅದನ್ ತನಿಸೋಂಕು ಸೋಂಕಿ ಮೆಲ್ಲಗೆ ಮಲಯಾನಿಳನ್ ಸುಳಿದೊಡೆ ಜಗಮ್ ಪೊಸತಾದುದು ಎಂದೊಡೆ ಜಗದೇಕಮಲ್ಲನಾ ಪಟ್ಟಬಂಧನ ಮಹೋತ್ಸವಮನ್ ಏನ್ ಪೊಗಳ್ವುದೊ...) 

# ೧೦೭. ಅರ್ಜುನನ ಕೃತಜ್ಞತೆ

(೩೬ ನೆಯ ಪದ್ಯದಿಂದ ೩೯ ನೆಯ ಪದ್ಯ)

## ಪಾತ್ರಗಳು

**ಮುನಿಗಳು:** ಅರ್ಜುನನಿಗೆ ಆಶೀರ್ವಾದವನ್ನು ಮಾಡಿದವರು.

**ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ.

**ಅರ್ಜುನ:** ಪಾಂಡುರಾಜ ಮತ್ತು ಕುಂತಿಯ ಮಗ.

**ಕೃಷ್ಣ:** ದ್ವಾರಾವತಿ ಪಟ್ಟಣದ ಒಡೆಯ. ಪಾಂಡವರ ಹಿತಚಿಂತಕ.

## ಅರ್ಜುನನ ಕೃತಜ್ಞತೆ

**ಮುನಿಗಳು:** ಹರಿಗ, ಅರಿಭೂಪಾಲ ದವಾನಳನ್ ನಿನ್ನ ಉಗ್ರ ಅಸಿಧಾರಾ ಅಂಬುಶೀಕರದಿನ್ ಮಳ್ಗುಗೆ. ಅರ್ಥಿ ಸಸ್ಯಕ್ಕೆ ದಾನವರ್ಷ ಸಲಿಲಮ್ ಕೊಳ್ಗೆ. ನಿನ್ನ ಅದೊಂದು ಪಲವುಮ್ ಬಣ್ಣಂಗಳನ್ ಕಿನ್ನರಿಯರ್ ಮೇರು ಮಂದರ ಕೈಳಾಸ ಮಹೇಂದ್ರ ನೀಳ ನಿಷಧ ಅದ್ರೀಂದ್ರ ಉಪಕಂಠಂಗಳೊಳ್ ಪಾಡುಗೆ.

(ಎಂದು ಪರಸಿ ತಮ್ಮ ನಿವಾಸಂಗಳ್ಗೆ ಪೋದರ್. ಆಗಳ್ ಧರ್ಮನಂದನನ್....)

**ಧರ್ಮರಾಯ:** ಎನಗೆ ನಿನ್ನ ರಾಜ್ಯಾಭಿವೃದ್ಧಿಯನ್ ನೋಡುತಿರ್ಪುದುಮ್, ಮುಮುಕ್ಷು ವೃತ್ತಿಯೊಳ್ ಇರ್ಪುದಮಲ್ಲದೆ ಪೆಱತೇನುಮ್ ಬಾಳ್ತೆಯಲ್ಲ.

(ಎಂದು ಭೀಮ ನಕುಳ ಸಹದೇವರ್ಕಳ್ಗೆ, ದುರ್ಯೋಧನನ ತಮ್ಮನಪ್ಪ ಯುಯುತ್ಸುಗಮ್ ಅವರ್ ಬೇಡಿದ ನಾಡುಗಳನೆ ಕುಡಿಸಿ ಸಂತಸಮ್ ಪಡಿಸೆ, ಪುರುಷೋತ್ತಮನನ್ ವಿಬುಧ ವನಜವನ ಕಳಹಂಸನುಮ್ ಇಂತು ಎಂದನ್.)

**ಅರ್ಜುನ:** ನಿನ್ನ ದಯೆಯಿಂದಮ್ ಅರಿನೃಪರನ್ ನೆಱೆ ಕೊಂದ ಎಮಗೆ ಸಕಳ ರಾಜ್ಯಶ್ರೀಯುಮ್ ನಿನ್ನ ಬಲದಿಂದೆ ಸಾರ್ದುದು. ನಿನ್ನ ಉಪಕಾರಮನ್ ಅದು ಏತಱೊಳ್ ನೀಗುವೆನೋ..

(ಎಂದು ಮುಕುಂದನನ್ ಅನುನಯ ವಚನ ರಚನಾ ಪರಂಪರೆಗಳಿನ್ ಸಂತಸಮ್ ಪಡೆ ನುಡಿದು, ಸಾತ್ಯಕಿವೆರಸು ಅನರ್ಘ್ಯ ವಸ್ತುವಾಹನ ಸಹಿತಮ್ ದ್ವಾರಾವತಿಗೆ ಕಳಿಪಿ, ಸಕಳಭುವನತಳ ಭಾರಮನ್ ಅವಯವದಿನ್ ತಾಳ್ದಿರ್ದು;

ಉದಾತ್ತವೃತ್ತಿಯೊಳ್ ಉದಾತ್ತನಾರಾಯಣನುಮ್; ಭುವನಭವನ ಉದರದೊಳ್ ಪಸರಿಸಿದ ತೇಜದೊಳ್ ಪ್ರಚಂಡಮಾರ್ತಾಂಡನುಮ್; ಆವೆಡೆ ಯೊಳಮ್ ಅಸಮಾನಮ್ ಎನಿಸಿದ ಮಹಾಮಹಿಮೆಯೊಳ್ ಉದಾರಮಹೇಶ್ವರನುಮ್; ನಳ ನಹುಷ ಮಾಂಧಾತರನ್ ಮಸುಳಿವಂದ ನೆಗಳ್ತೆಯೊಳ್ ಮನುಜಮಾಂಧಾತನುಮ್;

ತ್ರಿಣೇತ್ರನುಮನ್ ಅಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಮ್; ಅಚಳಿತ ಪ್ರತಿಜ್ಞೆಯೊಳ್ ಪ್ರತಿಜ್ಞಾಗಾಂಗೇಯನುಮ್; ರಾಮನುಮನ್ ಏಳಿಸಿದ ಸಾಹಸದೊಳ್ ಅಕಳಂಕರಾಮನುಮ್; ಬೇಡಿದರ ಬೇಡಿದುದನ್ ಮಾರ್ಕೊಳ್ಳದೆ ಈವುದಱಿನ್ ಪ್ರತ್ಯಕ್ಷಜೀಮೂತವಾಹನನುಮ್; ಚತುರ್ದಶ ಭುವನಂಗಳೊಲ್ ತನಗೆ ಮಾರ್ಮಲೆವರ್ ಇಲ್ಲಪ್ಪುದಱಿಮ್ ಜಗದೇಕಮಲ್ಲನುಮ್; ಉರ್ಕಿ ಬಂದು ಮೇಲ್ವಾಯ್ದ ಮಾರ್ವಲಂಗಳನ್ ತನ್ನ ಬಾಳ ಬಾಯೊಳ್ ಅಳ್ಕಾಡಿದುದರಿನ್ ಪರಸೈನ್ಯಭೈರವನ್;

ಅರಾತಿ ಗಜಘಟೆಗಳೆ ಎನಿತು ಬಂದೊಡ್ಡೆಯುಮ್ ತನ್ನೊಂದು ಅಮಂದಧ್ವನಿ ಗೊಡ್ಡೊಡೆದು ಓಡುವುದಱಿನ್ ವೈರಿಗಜಘಟಾವಿಘಟನನುಮ್; ತನಗೆ ಇದಿರನ್ ಅದಿರದೆ ಒಡ್ಡಿದ ವಿದ್ವಿಷ್ಟಬಲಮ್ ನೋಡೆ ನೋಡೆ ಕರಗುವುದಱಿನ್ ವಿದ್ವಿಷ್ಟವಿದ್ರಾವಣನುಮ್; ಅರಾತಿ ವನಗಹನಮನ್ ಅಳುರ್ದು ಕೊಳ್ವುದಱಿಂದಮ್ ಅರಾತಿಕಾಳಾನಳನುಮ್; ಪಗೆವರೆಂಬ ಕುರುಂಗಂಗಳನ್ ಒಂದೊಂದಱೊಳ್ ಒಂದಲ್ ಈಯದೆ ಎಳ್ಬಟ್ಟುವುದಱಿನ್ ರಿಪುಕುರಂಗಕಂಠೀರವನುಮ್;

ವಿಕ್ರಾಂತದೊಳ್ ತನ್ನಿರ್ದಲ್ಲಿ ತಾನೆ ಪಿರಿಯನಪ್ಪುದಱಿನ್ ವಿಕ್ರಾಂತತುಂಗನುಮ್; ಆವೆಡೆಯೊಳಮ್ ವಿಕ್ರಮಮ್ ಕ್ರಮಮ್ ಎನಿಸಿದುದಱಿನ್ ಪರಾಕ್ರಮಧವಳನುಮ್; ಎಂತಪ್ಪ ಸಂಗ್ರಾಮದೊಳಮ್ ಪೋಗದೆ ನಟ್ಟು ನಿಲ್ವುದಱಿನ್ ಸಮರೈಕಮೇರುವುಮ್; ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಮುಳಿಯೆ ತನಗೆ ಶರಣಾಗತನಾದ ವಿಜಯಾದಿತ್ಯನನ್ ಕಾದ

ಬಲ್ಲಾಳ್ತನದೊಳ್ ಶರಣಾಗತಜಳನಿಧಿಯುಮ್; ವಿನಯಮೇ ತನಗೆ ಭೂಷಣಮಾಗೆ ಮಾಡುವುದಱಿನ್ ವಿನಯಭೂಷಣನುಮ್; ಲೋಕಕ್ಕೆಲ್ಲಮ್ ಅಸಾಧಾರಣಮಪ್ಪ ದಾನಗುಣದೊಳ್ ಲೋಕೈಕಕಲ್ಪದ್ರುಮನುಮ್; ಎನಿತಾನುಮ್ ಗಜಾಗಮಂಗಳನ್ ತಾನೆ ಸಮೆದನಪ್ಪುದಱಿನ್ ಗಜಾಗಮರಾಜ ಪುತ್ರನುಮ್; ಎಂತಪ್ಪ ಗರ್ವವ್ಯಾಳಿಯುಮನ್ ಅತಿವರ್ತಿಗಳುಮನ್ ಆರೂಢದೊಳ್ ತನಗೆ ಅಳವಡುವುದಱಿಂದ ಆರೂಢಸರ್ವಜ್ಞನುಮ್;

ಪರಮಾತ್ಮನಂತೆ ಲೋಕಾಲೋಕದ ವಸ್ತುಗಳುಮನ್ ಕರತಳಾಮಲಕಮಾಗೆ ಅಱಿವುದಱಿನ್ ನೃಪಪರಮಾತ್ಮನುಮ್; ಎಂತಪ್ಪ ಪಂಡಿತರ ಗೋಷ್ಠಿಯೊಳಮ್ ತಾನೆ ಸೊಗಯಿಸುವುದಱಿನ್ ವಿಬುಧ ವನಜವನಕಳಹಂಸನುಮ್; ಕೆಯ್ಗೆಯ್ಯದೆ ಸೊಗಯಿಸುವನಪ್ಪುದಱಿನ್ ಸಹಜಮನೋಜನುಮ್; ಎಂತಪ್ಪ ಬರ್ದೆಯರುಮನ್ ಬಗೆಗೆ ವರಿಸುವ ತಕ್ಕಿನೊಳ್ ಸುರತಮಕರಧ್ವಜನುಮ್; ಕೂರ್ಪ ಕೂರದರ ಪಡೆಗಳ್ ಎರಡುಮ್ ತನ್ನನೆ ಮೆಚ್ಚುವುದಱಿನ್ ಪಡೆಮೆಚ್ಚೆಗಂಡನುಮ್; ಎಂತಪ್ಪ ಮಾರ್ವಲಗಳುಮನ್ ನೋಡುತ್ತೆ ಗೆಲ್ವುದಱಿನ್ ನೋಡುತ್ತೆಗೆಲ್ವನುಮ್; ಮಹಾಭಾರಾವತಾರದೊಳ್ ಅತಿರಥ ಮಹಾರಥ ಸಮರಥ ಅರ್ಧರಥರ್ಕಳನ್ ಪಡಲ್ವಡಿಸುವುದಱಿನ್ ಸಾಹಸಾರ್ಜುನನುಮ್;

ಅಮರೇಂದ್ರನೊಳ್ ಅರ್ಧಾಸನಮ್ ಏಱಿದ ಮಹಾ ಮಹಿಮೆಯೊಳ್ ಮಹಿಮಾರ್ಣವನುಮ್; ಅರಿಕರಿಗಳನ್ ಪಡಲ್ವಡಿಸುವ ಬೀರದೊಳ್ ಅರಿಕೇಸರಿಯುಮಾಗಿ, ಆವ ಋತುವಿಂಗೆ ಆವ ಪಸದನಮ್ ಅಮರ್ದು ಒಪ್ಪುಗುಮ್; ವಿನಯಮ್ ಆವ ಪೊಳ್ತು ಅದು ಆವ ಎಸಕದೊಳ್ ಒಪ್ಪುಗುಮ್; ಆವ ಎಡೆಗೆ ಆವುದು ಚೆಲ್ವುವೆತ್ತು ರಂಜಿಸುಗುಮ್ ಅದರ್ಕೆ ಅದನ್ ಸಮಱಿ ನಿಚ್ಚಲುಮ್ ಆ ಬಿಯಮ್, ಆ ವಿನೋದಮ್, ಆ ಪಸದನಮ್, ಆ ವಿಲಾಸದೊಳ್ ಒಡಂಬಡೆ ಗುಣಾರ್ಣವನ್

ಭೋಗಿಸಿದನ್. ಪಸರಿಸಿ ನೀಳ್ದ ತನ್ನ ಜಸದೊಳ್ ಪೆಱನೊರ್ವನ ಕೀರ್ತಿ ತಳ್ತು ರಂಜಿಸೆ ನೆಗಳ್ದಾತನ್ ಏನ್ ನೆಗಳ್ದನ್ಎಂಬ ಚಲಮ್ ಮಿಗೆ... ತನ್ನ ಪೆಂಪೆ... ತನ್ನ ಎಸಕಮೆ... ತನ್ನ ವಿಕ್ರಮಮೆ... ತನ್ನ ನೆಗಳ್ತೆಯೆ... ತನ್ನ ಮಾತೆ... ಎಸೆವ ಜಗತ್ರಯಕ್ಕೆ ತಾನ್ ಎನಿಸಿ, ನೆಲನನ್ ಗುಣಾರ್ಣವನ್ ಪಾಲಿಸಿದನ್.



# ಬರಹಗಾರ

**ಹೆಸರು** : ಸಿ.ಪಿ.ನಾಗರಾಜ ( ೧೯೪೫ )

**ತಾಯಿ** : ಲಕ್ಷ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

**ತಂದೆ** : ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

**ಓದು** : ಎಂ.ಎ., ಪಿಎಚ್.ಡಿ.,

**ಕೆಲಸ** : ಕನ್ನಡ ಅಧ್ಯಾಪಕ

೧೯೭೧–೭೨ ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ.

೧೯೭೨–೨೦೦೩ ಭಾರತಿ ಕಾಲೇಜು, ಕಾಳಮುದ್ದನದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

೨೦೦೬–೨೦೨೧ ತೇಜಸ್ವಿ ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

## ಬರಹ

**೧. ಮುದ್ರಿತ ಪುಸ್ತಕಗಳು**

**ನಾಟಕ:**
ಭಾಗೀರಥಿ
ಅಂಬೆ
ಹಾವು
ಅಂಗಿಬಟ್ಟೆ
ಒಂದು ರೂಪಾಯಿ
ಕಳ್ಳರಿದ್ದಾರೆ ಎಚ್ಚರಿಕೆ
ಹೆಣದ ಹಣ
ಮೂರು ಸಾಮಾಜಿಕ ನಾಟಕಗಳು

**ಗದ್ಯ:**
ಕರಿಯನ ಪುರಾಣ
ಕನಕನ ಅವ್ವ
ಹಳ್ಳಿಗಾಡಿನ ರೂವಾರಿ
ಡಾ.ಬಂದೀಗೌಡ
ಆಣೆ ಪ್ರಮಾಣಗಳು
ಬಯ್ಗುಳ
ಸರ್ವಜ್ಞ ವಚನಗಳ ಓದು
ಅಲ್ಲಮ ವಚನಗಳ ಓದು
ಶಿವಶರಣೆಯರ ವಚನಗಳ ಓದು
ಶಿವಶರಣರ ವಚನಗಳ ಓದು
ಬಸವಣ್ಣ ವಚನಗಳ ಓದು
ಮುದ್ದೆಗಂಟು
ಶಿವಶರಣಶರಣೆಯರ ವಚನಗಳ ಓದು

ಪಂಪ ಭಾರತ ಓದು ಸರ್ವಜ್ಞ ಮತ್ತು ಅಲ್ಲಮ ವಚನಗಳ ಓದು
ವಚನದಿಂದ ಆಯ್ದ ಸಾಲುಗಳ ಓದು
ಕುವೆಂಪು ಕವನಗಳ ಓದು ಕನ್ನಡ ಬಯ್ಗುಳ ಓದು
ಬಸವಯುಗದ ವಚನಕಾರರು
ಕನಕದಾಸರ ರಾಮಧಾನ್ಯ ಪ್ರಸಂಗ ಓದು

## ೨. ಮೈಲಾಂಗ್ ಮತ್ತು ಋತುಮಾನ ಡಿಜಿಟಲ್ ಪುಸ್ತಕಗಳು

ಏಳು ನಾಟಕಗಳು(ಇಬುಕ್); ಭಾಗೀರಥೀ(ನಾಟಕ–ಇಬುಕ್); ಅಂಬೆ (ನಾಟಕ–ಇಬುಕ್); ಹಾವು (ನಾಟಕ–ಇಬುಕ್); ಅಂಗಿಬಟ್ಟೆ(ನಾಟಕ–ಇಬುಕ್); ಒಂದು ರೂಪಾಯಿ (ನಾಟಕ–ಇಬುಕ್); ಕಳ್ಳರಿದ್ದಾರೆ ಎಚ್ಚರಿಕೆ (ನಾಟಕ–ಇಬುಕ್); ಹೆಣದ ಹಣ(ನಾಟಕ–ಇಬುಕ್); ಶಿವಶರಣಶರಣೆಯರ ವಚನಗಳ ಓದು(ಇಬುಕ್); ಬಯ್ಗುಳ(ಆಡಿಯೋ ಬುಕ್); ಸರ್ವಜ್ಞನ ವಚನಗಳ ಓದು (ಆಡಿಯೋ ಬುಕ್); ಅಲ್ಲಮನ ವಚನಗಳ ಓದು(ಆಡಿಯೋ ಬುಕ್); ಬಸವಣ್ಣನ ವಚನಗಳ ಓದು(ಆಡಿಯೋ ಬುಕ್); ಶಿವಶರಣಶರಣೆಯರ ವಚನಗಳ ಓದು–ಭಾಗ–೧ (ಆಡಿಯೋ ಬುಕ್); ಶಿವಶರಣಶರಣೆಯರ ವಚನಗಳ ಓದು–ಭಾಗ–೨–(ಆಡಿಯೋ ಬುಕ್); ವಚನದಿಂದ ಆಯ್ದ ಸಾಲುಗಳು ಓದು–ಭಾಗ–೧–(ಆಡಿಯೋ ಬುಕ್); ವಚನದಿಂದ ಆಯ್ದ ಸಾಲುಗಳು ಓದು–ಭಾಗ–೨–(ಆಡಿಯೋ ಬುಕ್); ಮುದ್ದೆಗಂಟು(ಆಡಿಯೋ ಬುಕ್)

## 3. C P Nagaraj-You Tube

Play lists
ಸರ್ವಜ್ಞನ ವಚನಗಳ ಓದು–೧೩ ಎಪಿಸೋಡ್
ಅಲ್ಲಮನ ವಚನಗಳ ಓದು– ೩೬ ಎಪಿಸೋಡ್
ಬಸವಣ್ಣನ ವಚನಗಳ ಓದು–೨೬ ಎಪಿಸೋಡ್
ಶಿವಶರಣಶರಣೆಯರ ವಚನಗಳ ಓದು–೫೨ ಎಪಿಸೋಡ್
ವಚನದಿಂದ ಆಯ್ದ ಸಾಲುಗಳ ಓದು–೧೬೨ ಎಪಿಸೋಡ್
ಮುದ್ದೆಗಂಟು–೬೦ ಎಪಿಸೋಡ್
ಹಳ್ಳಿಗಾಡಿನ ರೂವಾರಿ ಜಿ.ಮಾದೇಗೌಡ–೧೫ ಎಪಿಸೋಡ್
ಜನಪರ ಚೇತನ ಡಾ.ಬಂದೀಗೌಡ–೧೫ ಎಪಿಸೋಡ್
ಕುವೆಂಪು ಕವನಗಳ ಓದು–೧೩ ಎಪಿಸೋಡ್
ಪಂಪ ಭಾರತ ಪ್ರಸಂಗಗಳು – ೯ ಎಪಿಸೋಡ್

ಭಾಷೆಯ ಬಗೆಗೆ ನೀವೇನು ಬಲ್ಲಿರಿ–೪೧
(ಡಿ.ಎನ್. ಶಂಕರ ಭಟ್)
ಸಮಗ್ರ ಬುದ್ಧ ಸಾಹಿತ್ಯ ಮಾಲೆ–೩೦
(ಸಿ.ಎಚ್. ರಾಜಶೇಖರ್)
ನುಡಿಯರಿಮೆ ಬರಹಗಳು–೨೬
(ಕೆ.ವಿ. ನಾರಾಯಣ)
ಗೂಗಿ ವಾ ಥಿಯಾಂಗೊ ವೈಚಾರಿಕ ಬರಹಗಳು–೧೩
(ಅನುವಾದ : ಎಚ್.ಎಸ್. ನಾಗಭೂಷಣ)
ಎದೆಗೆ ಬಿದ್ದ ಅಕ್ಷರ–೨೯
(ದೇವನೂರು ಮಹಾದೇವ)
ವೇದಗಳಲ್ಲಿ ಜನಸಾಮಾನ್ಯರು–೪೦
(ಬಿ.ವಿ. ವೀರಭದ್ರಪ್ಪ)
ಆಣೆ ಪ್ರಮಾಣಗಳ ಓದು–೧೦
ರಾಮಧಾನ್ಯ ಪ್ರಸಂಗ–೧
(ಕನಕದಾಸ)

---

**ವಿಳಾಸ** : ಸಿ.ಪಿ.ನಾಗರಾಜ, 75, 5ನೇ ಕ್ರಾಸ್, 'ಎ' ಬ್ಲಾಕ್, ಕೃಷ್ಣ ಗಾರ್ಡನ್, ಆರ್.ವಿ. ಕಾಲೇಜು ಅಂಚೆ, ಬೆಂಗಳೂರು–560 059. ಮೊ : 9986347521
e-mail : ngy7777@gmail.com

ಪಂಪ ಕವಿಯ ವಿಕ್ರಮಾರ್ಜುನ ವಿಜಯ ಎಂಬ ಕೃತಿಯಲ್ಲಿ ಬರುವ ಕೆಲವು ಪ್ರಸಂಗಗಳನ್ನು ಸಿ.ಪಿ.ನಾಗರಾಜ ಅವರು ಆಯ್ದುಕೊಂಡು, ಓದುಗರು ಓದಲು ನೆರವಾಗುವಂತೆ ಬರೆದಿದ್ದಾರೆ. ಇವೆಲ್ಲ ಪ್ರಸಂಗಗಳು ಕೃತಿಯ ಪಾತ್ರಗಳ ನಡುವೆ ನಡೆಯುವ ಮಾತುಕತೆಗಳು. ಹಾಗಾಗಿ ಒಂದು ಬಗೆಯ ನಾಟಕೀಯ ಎನಿಸುವ ನೆಲೆಯಲ್ಲಿ ಇವೆ. ಪಂಪನ ಈ ಕೃತಿಯು ಕನ್ನಡದ ಕಥನ ಪರಂಪರೆಯ ಚಹರೆಗಳನ್ನು ರೂಪಿಸಿಕೊಟ್ಟಿದೆ. ಆ ಮೊದಲು ಸಂಸ್ಕೃತ ನುಡಿಯಲ್ಲಿ ಇದ್ದ ಮಹಾಕಾವ್ಯಗಳ ಕಥನ ವಿಧಾನವು ಶ್ರವ್ಯಮಾನತೆಯನ್ನು ತನ್ನ ಚಹರೆಯನ್ನಾಗಿ ಇರಿಸಿಕೊಂಡಿತ್ತು. ಅಂದರೆ ಆ ಕಥನಗಳು ಕೇಳುವಿಕೆಯನ್ನು ಅವಲಂಬಿಸಿ ರೂಪುಗೊಂಡಿದ್ದವು. ಓದುವವರು ಓದಿ ಹೇಳುವಾಗ, ಕೇಳುವವರಿಗೆ ಕಾವ್ಯಗಳು ತಲುಪುತ್ತಿದ್ದವು.ಕನ್ನಡದಲ್ಲಿ ಕಥನ ಪರಂಪರೆಯನ್ನು ಕಟ್ಟುವಾಗ ಪಂಪ ಶ್ರವ್ಯಮಾನತೆಯೊಡನೆ ದೃಶ್ಯಮಾನತೆಯನ್ನು ಸೇರ್ಪಡೆಗೊಳಿಸಿದ್ದಾನೆ. ಅಂದರೆ ಕಿವಿಗೆ ತಲುಪುವ ಜೊತೆಗೆ, ಕಣ್ಣಿಗೆ ಕಟ್ಟುವ ಹಾಗೆಯೂ ಇರಬೇಕು ಎಂಬುದೇ ಈ ಚಹರೆಯ ನೆಲೆ.

ಈ ಜೋಡಣೆಗಾಗಿ ನುಡಿಯನ್ನು ಬಳಸುವ ಬಗೆಯಲ್ಲೇ ಪಂಪ ಬದಲಾವಣೆಗಳನ್ನು ಮಾಡಿಕೊಂಡನು. ವಿಕ್ರಮಾರ್ಜುನ ವಿಜಯದ ಮೊದಲ ಪದ್ಯದಲ್ಲೇ ತನ್ನ ಈ ಗುರಿಯನ್ನು ಪಂಪ ತೋರಿಸಿಕೊಟ್ಟಿದ್ದಾನೆ. " ಶ್ರೀಯನ್ ಅರಾತಿಸಾಧನ ಪಯೋನಿಧಿಯೊಳ್ ಪಡೆದುಮ್ ಧರಿತ್ರಿಯನ್ ಜೀಯೆನೆ ಬೇಡಿಕೊಳ್ಳದೆ " ಎಂಬ ಸಾಲಿನಲ್ಲಿ " ಜೀಯೆನೆ—ಅಯ್ಯಾ ಎಂದು ಬೇಡುವವನ ದೇಹ ಚರ್ಯೆ – ಎಂಬ ಪದ ಬೇಡುವವನ ನಿಲುವನ್ನು ನಾಟ್ಯೀಕರಿಸುತ್ತದೆ. (ನೆಲವನ್ನು ಬೇಡಿ ಪಡೆದುಕೊಂಡು ಪಡೆದ ವಾಮನನಿಗಿಂತ ಹಾಗೆ ಬೇಡದೆ ತನ್ನ ಪರಾಕ್ರಮದಿಂದ ಪಡೆದ ಉದಾತ್ತ ನಾರಾಯಣನಾದ ಅರಿಕೇಸರಿಯೇ ಮಿಗಿಲು ಎಂದು ಹೇಳುವ ಗುರಿಯೂ ಇದೆ.) ಇಡೀ ಕಾವ್ಯ ತನ್ನ ಕಥನ ವಿಧಾನದಲ್ಲೇ ಹೀಗೆ ತನ್ನೊಳಗೆ ನಾಟ್ಯಮಾನತೆಯನ್ನು ಅಳವಡಿಸಿಕೊಂಡಿದೆ. ಸಿ.ಪಿ.ನಾಗರಾಜ ಅವರು ಅಂತಹ ಪ್ರಸಂಗಗಳನ್ನು ಹೊರತೆಗೆದು ಬಿಡಿಬಿಡಿಯಾಗಿ ನಿರೂಪಿಸುವ ಮೂಲಕ ಪಂಪನ ಕೃತಿಯಲ್ಲಿ ಅಡಗಿದ್ದ ಈ ಚಹರೆಯನ್ನು ಹೊರಗಿರಿಸಿದ್ದಾರೆ. ಹೀಗೆ ಮಾಡುವುದು ತಾಳ್ಮೆ ಮತ್ತು ಅಧ್ಯಯನಶೀಲತೆಯನ್ನು ಬಯಸುತ್ತದೆ. ಈ ಎರಡೂ ಗುಣಗಳು ನಾಗರಾಜ ಅವರಲ್ಲಿ ಧಾರಾಳವಾಗಿವೆ. ಹೀಗೆ ಮರು ನಿರೂಪಿಸುವ ಮೂಲಕ ಕನ್ನಡ ಓದುಗರಿಗೆ ಪಂಪನ ಕೃತಿಯಲ್ಲಿ ಇದ್ದ ಕಣ್ಣಿಗೆ ಕಟ್ಟುವಂತೆ ಬಣ್ಣಿಸುವ ಬಗೆಯನ್ನು ಪರಿಚಯಿಸುತ್ತಿದ್ದಾರೆ. ಇದು ಹೊಸ ತಲೆಮಾರಿನ ಓದುಗರಿಗೆ ಪಂಪನನ್ನು ಹೆಚ್ಚು ಹತ್ತಿರಕ್ಕೆ ಒಯ್ಯಲು ನೆರವಾಗುತ್ತದೆ ಎಂದು ನಾನು ತಿಳಿದಿದ್ದೇನೆ. ಈ ಕಾರ್ಯವನ್ನು ಕೈಗೆತ್ತಿಕೊಂಡು ಮುಗಿಸಿರುವ ನಾಗರಾಜ ಅವರನ್ನು ಅಭಿನಂದಿಸುತ್ತೇನೆ.

ಕೆ.ವಿ.ನಾರಾಯಣ



ನಾಗು ಸ್ಮಾರಕ ಪ್ರಕಾಶನ
ಬೆಂಗಳೂರು.

ಬೆಲೆ ರೂ: 550